# ಧರ್ಮಾಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦

# ಧರ್ಮಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)



ಸಂಶೋಧಕರು
ಮಹೇಶ

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೯-೨೦೧೦

# ಪರಿವಿಡಿ

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ಸ್ವರೂಪ

### ಪ್ರಸ್ತಾವನೆ

ಭಾರತೀಯ ಸಂಸ್ಕೃತಿಯು ತುಂಬಾ ವೈಶಿಷ್ಟ್ಯಪೂರ್ಣವಾಗಿದೆ, ಉನ್ನತವಾದ ಪರಂಪರೆ ಹಾಗೂ ಸುದೀರ್ಘವಾದ ಚರಿತ್ರೆಯನ್ನು ಹೊಂದಿರುವ ಭಾರತ ದೇಶದ ಪ್ರತಿಯೊಂದು ಭಾಗಕ್ಕೂ ತನ್ನದೇ ಆದ ವಿಶಿಷ್ಟ ಗುಣಲಕ್ಷಣ, ಉಜ್ವಲ ಚರಿತ್ರೆ ಇದ್ದು, ಅದು ಸಮಗ್ರವಾಗಿ ಅಭ್ಯಸಿಸಲ್ಪಟ್ಟಾಗ ಮಾತ್ರ ಭಾರತದ ಸಾಂಸ್ಕೃತಿಕ ಸಂಪತ್ತಿನ ಹಿರಿಮೆ ಅರ್ಥವಾಗುತ್ತದೆ. ಹಾಗೆಯೇ ಕರ್ನಾಟಕವು ಪೌರಾಣಿಕ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದ ಪ್ರಾಚೀನ ನಾಡಾಗಿದೆ. ಚರಿತ್ರೆಯು ಒಂದು ಪ್ರದೇಶದ ಮತ್ತು ಮಾನವನನ್ನು ಕುರಿತಿರುವ ಸಮಷ್ಟಿಯ ವಿಷಯವಾಗಿದೆ. ಇದು ಎಲ್ಲ ಕಾಲದ ಹಾಗೂ ಎಲ್ಲ ವರ್ಗದವರ ಜೀವನ ಸ್ಥಿತಿಗತಿಗಳು, ಅವರ ಪರಂಪರೆ, ಅವರು ಬಾಳಿ ಬದುಕಿದ ಮೌಲ್ಯಗಳನ್ನು ಪರಿಚಯಿಸುವ ಮಾರ್ಗವಾಗಿದೆ. ಇತಿಹಾಸವನ್ನು ಪುನರ್‌ರಚಿಸಲು ಅದಕ್ಕೆ ಪೂರಕವಾದ ಆಕರ ಸಾಮಗ್ರಿಗಳು ಅತ್ಯವಶ್ಯಕವೆನಿಸುತ್ತವೆ. ಈ ಆಕರ ಸಾಮಗ್ರಿಗಳನ್ನು ನಾನಾ ಪ್ರಕಾರದಲ್ಲಿ ಸಂಗ್ರಹಿಸಿ ಅವುಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಚರಿತ್ರೆಯ ವಿವಿಧ ಮುಖಗಳನ್ನು ಪುನರ್ ರಚಿಸುವುದೇ ಸಂಶೋಧನಾ ಪ್ರಕ್ರಿಯೆ.

ಬೇರೆ ಬೇರೆ ಕಾಲಘಟ್ಟದಲ್ಲಿ ಯಾವುದೋ ಕಾರಣಗಳಿಂದ ಮೇಲೆದ್ದು ಬಂದ ಧರ್ಮಗಳನ್ನು, ಪಂಗಡಗಳನ್ನು ಜನವರ್ಗಗಳನ್ನು, ಅವರ ಸಾಧನೆಗಳನ್ನು ಉಜ್ವಲೀಕರಿಸಿ ಅವುಗಳು ನಮ್ಮ ಪ್ರಾಂತ್ಯದ, ರಾಷ್ಟ್ರದ ಘಟನೆಗಳು ಮತ್ತು ಸರ್ವ ಕಾಲಿಕ ಸತ್ಯಗಳೆಂಬಂತೆ ಚರಿತ್ರೆಯಲ್ಲಿ ನಿರೂಪಿಸಲಾಗಿದೆ. ಬಹಳ ಮಟ್ಟಿಗೆ ಸಾಮಾನ್ಯರ ಮತ್ತು ಸ್ಥಳೀಯವಾದ ಎಲ್ಲ ರೀತಿಯ ಅಲೋಚನಾ ಕ್ರಮಗಳು ದಾಖಲೆಯಾಗದೆ ಗುಪ್ತವಾಗಿ ಉಳಿದುಕೊಂಡು ಬಂದಿವೆ. ಆದುದರಿಂದ ಸಾಧ್ಯ ನಿರೂಪಿತವಾಗಿರುವ ಚರಿತ್ರೆಗಳು ಹೆಚ್ಚಿನ ಸಮಗ್ರತೆಯನ್ನು ಪಡೆಯಲು ವಿಫಲವಾಗಿವೆ. ಚರಿತ್ರೆಯ ಸೂಕ್ಷ್ಮತೆಗಳು ಮತ್ತು ಅಜ್ಞಾತವಾಗಿರುವ ಘಟನೆಗಳನ್ನು, ಇತಿಹಾಸ ಅಧ್ಯಯನದ ಚೌಕಟ್ಟಿನೊಳಗೆ ಸಂಗ್ರಹಿಸುವ ಮೂಲಕ ಹಾಗೂ ವಿವಿಧ ಘಟಕಗಳ ಚರಿತ್ರೆಗಳನ್ನು ಕಟ್ಟಿ ರೂಪಿಸುವುದರ ಮೂಲಕ ಸಮಗ್ರ ಚರಿತ್ರೆಯ ಜೀವಂತಿಕೆಯನ್ನು ವಿಶ್ವಾಸಾರ್ಹತೆಯಿಂದ ಹೆಚ್ಚಿಸುವ ಜವಾಬ್ದಾರಿ ಚರಿತ್ರೆಕಾರರ ಮೇಲಿದೆ.

ಒಂದು ನಿರ್ದಿಷ್ಟ ಪ್ರದೇಶದ ಸಾಂಸ್ಕೃತಿಕ ಅಧ್ಯಯನವು ಅಲ್ಲಿನ ಭೌಗೋಳಿಕ ಪರಿಸರ, ಆಯಾ ಕಾಲದಲ್ಲಿ ಬಿಟ್ಟು ಹೋಗಿರುವ ಪ್ರಾಚೀನ ಅವಶೇಷಗಳು ಮತ್ತು ಅಲ್ಲಿ ನೆಲೆಸಿರುವ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಕೊಡುಕೊಳ್ಳುವಿಕೆಗಳಿಂದ ಪ್ರಭಾವಿತವಾಗಿರುತ್ತದೆ. ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವ ತಿಳಿದುಕೊಳ್ಳಬೇಕಾದರೆ ಅಲ್ಲಿ ದೊರೆಯುವ ಪುರಾತತ್ವ ಅವಶೇಷಗಳು ಹಾಗೂ ಎಲ್ಲ ಕಾಲಾವದಿಯಲ್ಲಿದ್ದ ಸಮಾಜದಲ್ಲಿನ ಪ್ರಚಲಿತವಿರುವ ಐತಿಹ್ಯಗಳು, ಮೌಖಿಕ ಕಥನಗಳು ಹಾಗೂ ಸಾಹಿತ್ಯಿಕ ಆಕರಗಳು ಚರಿತ್ರೆ ಕಟ್ಟಿ ಕೊಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಚಿತ್ರದುರ್ಗ ಜಿಲ್ಲೆಯು ಕರ್ನಾಟಕ ರಾಜ್ಯದ ಮಧ್ಯಭಾಗದಲ್ಲಿದ್ದು ತನ್ನದೇ ಆದ ಐತಿಹಾಸಿಕ ಮಹತ್ವವನ್ನು ಪಡೆದಿದೆ. ಈ ಜಿಲ್ಲೆಯು ಒಟ್ಟು ಆರು ತಾಲ್ಲೂಕುಗಳನ್ನು ಒಳಗೊಂಡಿದೆ. ಹಿರಿಯೂರು ತಾಲ್ಲೂಕಿನಲ್ಲಿ ಒಟ್ಟು ೪ ಹೋಬಳಿಗಳಿವೆ ಅವುಗಳೆಂದರೆ ಧರ್ಮಪುರ, ಜವನಗೊಂಡನಹಳ್ಳಿ, ಐಮಂಗಲ, ಹಿರಿಯೂರು ಕಸಬಾ. ಈ ಹೋಬಳಿಗಳಲ್ಲಿ ಧರ್ಮಪುರ ಪರಿಸರವು ಇತಿಹಾಸದಲ್ಲಿ ವಿಶೇಷವಾದ ಮಹತ್ವವನ್ನು ಹೊಂದಿದ್ದು ವಿಭಿನ್ನ ಕಾಲಘಟ್ಟದಲ್ಲಿ ತನ್ನದೇ ಆದ ಪಾತ್ರವನ್ನು ನಿರ್ವಹಿಸಿದೆ. ಆದುದರಿಂದ ಈ ಹೋಬಳಿ ಪರಿಸರದ ಕುರಿತಾಗಿ ವಿಶೇಷ ಅಧ್ಯಯನ ಕೈಗೊಳ್ಳುವ ಉದ್ದೇಶದಿಂದ **"ಧರ್ಮಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಶೀರ್ಷಿಕೆಯ ಅಡಿಯಲ್ಲಿ ಸ್ಥಳಿಯವಾಗಿ ಹಾಗೂ ಸುತ್ತಮುತ್ತಲಿನಲ್ಲಿ ಲಭ್ಯವಿರುವ ಇತಿಹಾಸ ಮತ್ತು ಆಕರಗಳನ್ನು ವಿಶ್ಲೇಷಿಸಲಾಗಿದೆ. ಹಿರಿಯೂರು ತಾಲ್ಲೂಕು ಕೇಂದ್ರವು ಚಿತ್ರದುರ್ಗ ಜಿಲ್ಲಾ ಕೇಂದ್ರದಿಂದ ಆಗ್ನೇಯಕ್ಕೆ ಸುಮಾರು ೪೦ ಕಿ.ಮೀ ದೂರದಲ್ಲಿದೆ. ಹಾಗೆಯೇ ಹಿರಿಯೂರು ತಾಲ್ಲೂಕು ಕೇಂದ್ರದಿಂದ ಧರ್ಮಪುರ ಪೂರ್ವಕ್ಕೆ ೩೦ ಕಿ.ಮೀ. ದೂರದಲಿದ್ದು ಧರ್ಮಪುರದ ಪೂರ್ವಕ್ಕೆ ಆಂಧ್ರಪ್ರದೇಶ ರಾಜ್ಯದ ಗಡಿಭಾಗಗಳು, ದಕ್ಷಿಣಕ್ಕೆ ಶಿರಾ ತಾಲ್ಲೂಕು, ಉತ್ತರಕ್ಕೆ ಚಳ್ಳಕೆರೆ, ಹಾಗೂ ಪಶ್ಚಿಮಕ್ಕೆ ಹಿರಿಯೂರು ತಾಲ್ಲೂಕಿನ ಹಳ್ಳಿಗಳಿವೆ.

ಧರ್ಮಪುರ ಪ್ರದೇಶವು ಹಿರಿಯೂರು ತಾಲ್ಲೂಕಿನಲ್ಲಿದ್ದು, ಈ ಹೋಬಳಿಯು ೬೩ ಹಳ್ಳಿಗಳನ್ನು ಒಳಗೊಂಡಿದೆ. ಈ ಪರಿಸರದಲ್ಲಿ ಭೌಗೋಳಿಕವಾಗಿ ಅಲ್ಲಲ್ಲಿ ಚದುರಿದಂತೆ ಬೆಟ್ಟ, ಕೆರೆ, ಭಾವಿಗಳು ಇವೆ. ಉಳಿದ ಭಾಗ ಏರು ತಗ್ಗಿನ ಮೈದಾನ ಪ್ರದೇಶವಾಗಿದೆ. ಈ ಪ್ರದೇಶವು ಕಲ್ಲು ಮಿಶ್ರಿತ ಕೆಂಪು ಭೂಮಿ, ಕಪ್ಪು ಮತ್ತು ಕೆಂಪು ಮಿಶ್ರಿತ ಭೂಮಿಯಿಂದ ಕೂಡಿದೆ. ಇಲ್ಲಿ ಸರ್ವೇಸಾಮಾನ್ಯವಾಗಿ ಕಡಿಮೆ ಮಳೆ ಬೀಳುತ್ತದೆ. ಆದಾಗ್ಯೂ ಕೃಷಿಗೆ ಅನುಕೂಲವಾಗುವಂತಹ ವೇದಾವತಿ ನದಿಯು ಅಬ್ಬಿನಹೊಳೆ ಮಧ್ಯದಲ್ಲಿ ಹರಿದು ಬಳ್ಳಾರಿ ಜಿಲ್ಲೆಯ ಕೆಲ ಪ್ರದೇಶಗಳಿಗೆ ಅನುಕೂಲತೆ ದೊರಕುತ್ತಿದೆ. ಧರ್ಮಪುರದ ಸುತ್ತಮುತ್ತಲಿನ ಕೆಲ ಪ್ರದೇಶಗಳು ಈ ನದಿಯಿಂದ ಮಾತ್ರ ಅನುಕೂಲತೆ ಪಡೆದಿವೆ ಈ ಪ್ರದೇಶವು ಐತಿಹಾಸಿಕವಾಗಿ ವಿವಿಧ ಕಾಲಘಟ್ಟಗಳಲ್ಲಿ

ಬೇರೆ ಬೇರೆ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದನ್ನು ಶಾಸನ, ಸ್ಮಾರಕ ಹಾಗೂ ಇತ್ಯಾದಿ ಆಕರಗಳಿಂದ ತಿಳಿದುಬರುತ್ತದೆ.

**ಉದ್ದೇಶ**

ಧರ್ಮಪುರ ಪ್ರದೇಶದಲ್ಲಿ ಇದುವರೆಗೆ ಲಭ್ಯವಿರುವ ಪ್ರಾಚೀನ ಅವಶೇಷಗಳ ಅಧ್ಯಯನದ ಜೊತೆಗೆ ಈ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಜನ ಸಾಮಾನ್ಯರ ಸಂದರ್ಶನಗಳ ಮೂಲಕ ಪ್ರಚಲಿತ ಐತಿಹ್ಯ ಮತ್ತು ಮೌಖಿಕ ಕಥನಾವಳಿಗಳನ್ನು ದಾಖಲಿಸಿಕೊಳ್ಳಲಾಗಿದೆ. ಹಾಗೆಯೇ ಸಂಗ್ರಹವಾದ ಸಂಪನ್ಮೂಲಗಳನ್ನು ವಿವೇಚಿಸುವ ಮೂಲಕ ಸಮಗ್ರವಾದ ಚರಿತ್ರೆಯನ್ನು ಕಟ್ಟಿಕೊಡುವಂತಹ ಪ್ರಯತ್ನ ಮಾಡಲಾಗಿದೆ. ಇದರ ಜೊತೆಗೆ ವಿವಿಧ ಕಾಲಘಟ್ಟಗಳಲ್ಲಿ ಈ ಪರಿಸರದಲ್ಲಾದ ಅನೇಕ ಅಂಶಗಳ ಪರಿವರ್ತನೆಗೆ ಕಾರಣೀಭೂತ ಅಂಶಗಳಾಗಿ ಮಹತ್ವ ಬೀರಿದ ಧಾರ್ಮಿಕ, ಸಾಮಾಜಿಕ, ಮತ್ತು ಆರ್ಥಿಕ ಸ್ಥಿತಿಗತಿ ಬದಲಾವಣೆ ಮತ್ತು ಬೆಳವಣಿಗೆಗಳನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ. ಅಳಿವಿನ ಅಂಚಿನಲ್ಲಿರುವಂತಹ ಸುತ್ತಮುತ್ತಲಿನ ಪುರಾತತ್ವ ಅವಶೇಷಗಳು ಹಾಗೂ ಪ್ರಚಲಿತದಲ್ಲಿರುವ ಪ್ರಾಚೀನ ಐತಿಹ್ಯ ಮತ್ತು ಮೌಖಿಕ ಕಥನಗಳು, ಸ್ಥಳಪುರಾಣ, ಸಾಂಸ್ಕೃತಿಕ ಅಧ್ಯಯನಕ್ಕೆ ಬಳಸಿಕೊಂಡು ಚರಿತ್ರೆ ಹಾಗೂ ಸ್ಥಳೀಯ ವಾದವನ್ನು ವಿಸ್ತರಿಸುವುದರ ಮೂಲಕವಾಗಿ ಈ ಪ್ರದೇಶದ ಅಧ್ಯಯನಗಳ ವಸ್ತುನಿಷ್ಟತೆಯನ್ನು ಮರು ವಿಮರ್ಶಿಸಿ ಅಧ್ಯಯನಕ್ಕೆ ಹೊಸ ರೂಪ ನೀಡಲು ಪ್ರಯತ್ನಿಸಲಾಗಿದೆ.

**ವ್ಯಾಪ್ತಿ**

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹಳ ಮುಖ್ಯ. ನಿರ್ಧಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆಯ ಯಶಸ್ಸಿಗೆ ಇದು ತುಂಬಾ ಸಹಾಯಕವಾಗಿರುತ್ತದೆ. ಹಾಗಾಗಿ ಪ್ರಸ್ತುತ "ಧರ್ಮಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ"ದ ವ್ಯಾಪ್ತಿಯನ್ನು ಭೌಗೋಳಿಕವಾಗಿ ವಿಸ್ತಾರ ಮತ್ತು ಕಾಲಾವಧಿಯ ಹಿನ್ನೆಲೆಯಲ್ಲಿ ನಿರ್ಧಿಷ್ಟ ಪಡಿಸಿಕೊಳ್ಳಲಾಗಿದೆ. ಭೌಗೋಳಿಕವಾಗಿ ಧರ್ಮಪುರ ಸುತ್ತಮುತ್ತಲಿನ ಹಳ್ಳಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದ್ದು ಕಾಲಾನುಕ್ರಮದಲ್ಲಿ ಪ್ರಾಗಿತಿಹಾಸ ಕಾಲದಿಂದ ಕ್ರಿ.ಶ.೧೬-೧೭ನೇ ಶತಮಾನದವರೆಗೆ ನಿಗದಿಪಡಿಸಿಕೊಂಡಿದ್ದರೂ ಸಾಂದರ್ಭಿಕವಾಗಿ ಅಕ್ಕಪಕ್ಕದಲ್ಲಿ ಬರುವಂತಹ ಪ್ರದೇಶಗಳನ್ನೂ ಈ ವಿಷಯದ ವ್ಯಾಪ್ತಿಗೆ ಸೇರಿಸಿಕೊಳ್ಳಲಾಗಿದೆ.

**ಮಹತ್ವ**

ಇದುವರೆವಿಗೂ ಈ ಪರಿಸರ ಕುರಿತಾಗಿ ಹಲವಾರು ಬಿಡಿ ಲೇಖನಗಳಲ್ಲಿ, ಸ್ಮರಣ ಸಂಚಿಕೆಗಳಲ್ಲಿ, ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರೂ ಸಹ ಸಮಗ್ರವಾದ ಒಂದು ಚಿತ್ರಣ

ಮೂಡಿಬಂದಿಲ್ಲ. ಆದುದರಿಂದ ಈಗಾಗಲೇ ಪ್ರಕಟಗೊಂಡಿರುವಂತಹ ಅಧ್ಯಯನಗಳ ಆಧಾರದ ಹಿನ್ನೆಲೆಯಲ್ಲಿ ಮುಂದೆ ಕೈಗೊಳ್ಳಬೇಕಾದಂತಹ ಅಂಶಗಳನ್ನು ಅರಿತು ಪ್ರಸ್ತುತ ಪ್ರಬಂಧವನ್ನು ರೂಪಿಸಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಧರ್ಮಪುರ ಪರಿಸರವು ಶ್ರೀಮಂತವಾಗಿದ್ದು ಲಭ್ಯವಿರುವಂತಹ ಆಧಾರಗಳನ್ನು ಅಧ್ಯಯನಕ್ಕೆ ಒಳಪಡಿಸುವ, ಅಲ್ಲಿಯ ಸಂಸ್ಕೃತಿಯನ್ನು ಮರು ರೂಪಿಸುವಂತಹ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಇದೇ ಪರಿಸರದಲ್ಲಿ ಹೇರಳವಾಗಿ ದೊರೆತಿರುವ ಮೌಖಿಕ ಹಾಗೂ ಐತಿಹ್ಯಗಳನ್ನು ಬಳಸಿಕೊಂಡು ಪ್ರಸ್ತುತ ಚರಿತ್ರೆಯ ಅಧ್ಯಯನದ ಮಹತ್ವವನ್ನು ಹೆಚ್ಚಿಸಲಾಗಿದೆ. ಅಧ್ಯಯನದ ಮೂಲಕ ಕಂಡುಕೊಳ್ಳುವ ಫಲಿತಾಂಶಗಳನ್ನು ಕ್ರೋಢೀಕರಿಸಿ ವಿಷಯದ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ. ಧರ್ಮಪುರ ಪರಿಸರದ ಸುತ್ತಮುತ್ತಲಿನ ಎಲ್ಲಾ ಗ್ರಾಮಗಳಲ್ಲಿರುವಂತಹ ಆಕರಗಳನ್ನು ಪರಿಚಯಿಸುವ ಹಾಗೂ ವಿಶ್ಲೇಷಿಸುವ ಮಹತ್ವದ ಕಾರ್ಯವನ್ನು ಈ ಪ್ರಬಂಧದ ರಚನೆಯ ಮುಖ್ಯ ಉದ್ದೇಶವಾಗಿದೆ.

**ವಿಧಾನ**

ಪ್ರಸ್ತುತ ಅಧ್ಯಯನ ಧರ್ಮಪುರ ವ್ಯಾಪ್ತಿಗೆ ಒಳಪಡುವಂತಹ ಪ್ರದೇಶಗಳಿಗೆ ನೇರವಾಗಿ ಬೇಟಿನೀಡಿ, ಅಲ್ಲಿ ದೊರೆತಿರುವ ಐತಿಹಾಸಿಕ ಅವಶೇಷಗಳನ್ನು, ಕ್ರೋಢೀಕರಿಸಿ, ದಾಖಲಿಸಿಕೊಳ್ಳುವುದರ ಮುಖಾಂತರವಾಗಿ ಮೌಖಿಕ ಕಥನಗಳನ್ನು ಹಾಗೂ ಐತಿಹ್ಯಗಳನ್ನು ಅರಿತಿರುವಂತಹ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯವನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ, ಪೂರಕವಾಗಿ ದೊರೆತಿರುವ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಚಲಿತದಲ್ಲಿರುವ ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನದ ವಿಧಾನಗಳನ್ನು ಅಳವಡಿಸಿಕೊಂಡು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಕರಗಳನ್ನು ವಿಷಯಾನುಸಾರ ಮತ್ತು ಅವಧಿಯನುಸಾರ ವಿಶ್ಲೇಷಿಸಿ, ಚರ್ಚಿಸಿ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಟವಾದ ವಿಧಾನಗಳನ್ನು ಈ ಕಿರು ಪ್ರಬಂಧದ ರಚನೆಯಲ್ಲಿ ಪ್ರಾಮಾಣಿಕವಾಗಿ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ.

**ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ**

ಪ್ರಸ್ತುತ ಅಧ್ಯಯನ ವಿಷಯವಾದ **"ಧರ್ಮಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ಅನೇಕ ಇತಿಹಾಸಕಾರರು, ಸಂಶೋಧಕರು, ಅಧ್ಯಯನಗಳು ನಡೆಸಿರುತ್ತಾರೆ. ಇಲ್ಲಿನ ದೇವಾಲಯ, ಮೂರ್ತಿಶಿಲ್ಪ, ಸ್ಮಾರಕಶಿಲ್ಪಗಳು, ಹಾಗೂ ಶಾಸನಗಳನ್ನು ಕುರಿತಂತೆ ಕೆಲವು ಕಿರು ಪ್ರಭಂಧಗಳು ಮತ್ತು ಬಿಡಿ ಲೇಖನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದಾಗಿದೆ. ಕೆಲವು ವಿಧ್ವಾಂಸರು ಬಿಡಿ ಲೇಖನಗಳನ್ನು ಸಂಗ್ರಹಿಸಿ ಸಂಪಾದಿತ ಕೃತಿಗಳನ್ನು ಪ್ರಕಟಸಿದ್ದಾರೆ. ಕೆಲವು ಸಂಶೋಧನಾ ಲೇಖನಗಳು

ಪ್ರಕಟಗೊಂಡಿವೆ. ಆದರೆ ಐತಿಹಾಸಿಕ ದೃಷ್ಟಿಕೋನದಿಂದ ಬಹುಮುಖ ಅಧ್ಯಯನ ನಡೆದಿರುವುದು ಬಹು ವಿರಳ ಎಂದೇ ಹೇಳಬಹುದು. ಪ್ರಮುಖ ಸಂಗತಿಗಳನ್ನು ಹಾಗೂ ಸ್ಥಳಗಳನ್ನು ಪ್ರಧಾನವಾಗಿ ಗಮನಿಸಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಧರ್ಮಪುರ ಪರಿಸರದ ಕುರಿತು ಹಲವು ದಿನ ಪತ್ರಿಕೆಗಳಲ್ಲಿ, ಗೆಜೆಟೀಯರ್, ವಿವಿಧ ಗ್ರಂಥಗಳು, ವಿಶ್ವಕೋಶಗಳಲ್ಲಿ ತಿಳಿಯಲಾಗಿದೆ. ಹಾಗೆಯೇ ೧೯೦೩ರಲ್ಲಿ ಪ್ರಕಟವಾದ ಬಿ.ಎಲ್. ರೈಸ್‌ರವರ "ಎಪಿಗ್ರಪಿಯಾ ಕರ್ನಾಟಕ" ಸಂಪುಟ-೧೧, ೧೯೬೭ರಲ್ಲಿ ಪ್ರಕಟಗೊಂಡಿರುವ ಬಿ.ಎನ್. ಸತ್ಯರವರ "ಚಿತ್ರದುರ್ಗ ಜಿಲ್ಲಾ ಗೆಜೆಟೀಯರ್," ಹುಲ್ಲೂರು ಶ್ರೀನಿವಾಸ ಜೋಯಿಸರ "ಸಂಶೋಧನಾ ಲೇಖನಗಳು" ಟಿ. ಗಿರಿಜಾರವರು ಪ್ರಕಟಿಸಿರುವ "ಚಿತ್ರದುರ್ಗ ಜಿಲ್ಲಾ ದರ್ಶಿನಿ" ಎಂ.ವಿ. ಶ್ರೀನಿವಾಸ, ಲಕ್ಷ್ಮಣ್ ತೆಲಗಾವಿಯವರು ಸಂಪಾದಿಸಿರುವ "ಚಂದ್ರವಳ್ಳಿ", ಬಾ.ರಾ. ಗೋಪಾಲರವರು ಸಂಪಾದಿತ "ಚಿತ್ರದುರ್ಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ" ಡಾ.ಬಿ.ಸುರೇಶ್‌ರವರ "ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳ ದೇವಾಲಯಗಳು" ಎಸ್. ತಿಪ್ಪೇಸ್ವಾಮಿಯವರ "ರಕ್ಷಣಾ ವಾಸ್ತುಶಿಲ್ಪ: ಚಿತ್ರದುರ್ಗ ಜಿಲ್ಲೆ" ಬಿ. ತಿಪ್ಪಣ್ಣ ಮರಿಕುಂಟೆಯವರು ಸಂಪಾದಿಸಿರುವ "ಮೇಲುದುರ್ಗ" ಮದಕರಿ ಬಳಗದ ವಾರ್ಷಿಕ ಸಂಚಿಕೆಗಳಾದ "ಚಿನ್ಮೂಲಾದ್ರಿ" ಲಕ್ಷ್ಮಣ್ ತೆಲಗವಿಯವರ "ಹರತಿಸಿರಿ" ಇತ್ಯಾದಿ ಲೇಖನ ಮತ್ತು ಕೃತಿಗಳು ಚರಿತ್ರೆಯನ್ನು ರಚಿಸುವಂತಹ ಕೆಲಸವನ್ನು ಮಾಡಿವೆ. ಹಾಗಾಗಿ ಮೇಲೆ ಉಲ್ಲೇಖಿಸಿದಂತಹ ಎಲ್ಲಾ ಗ್ರಂಥಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಧರ್ಮಪುರ ಪರಿಸರವನ್ನು ಗಮನದಲ್ಲಿಟ್ಟುಕೊಂಡು ಕ್ಷೇತ್ರಕಾರ್ಯದ ಮೂಲಕ ಅಲ್ಲಿರುವಂತಹ ವಸ್ತು ವಿಷಯವನ್ನು ಸಮಗ್ರವಾಗಿ ಸಂಗ್ರಹಿಸಿ, ಈ ಪರಿಸರದಲ್ಲಿ ಸಿಗುವಂತಹ ಎಲ್ಲಾ ಬಗೆಯ ಆಕರಗಳನ್ನು ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

**ಸ್ವರೂಪ**

**"ಧರ್ಮಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎನ್ನುವ ಈ ಕಿರು ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಪ್ರಮುಖ ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಪ್ರಮುಖ ಅಧ್ಯಾಯಗಳನ್ನು ಉಪ ಅಧ್ಯಾಯಗಳನ್ನಾಗಿಯೂ ಸಹ ವಿಂಗಡಿಸಲಾಗಿದೆ. ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ಸ್ವರೂಪ, ಅಧ್ಯಯನ ವಿಧಾನ, ಕುರಿತು ಚರ್ಚಿಸಲಾಗಿದೆ. ಹಾಗೆಯೇ ಅಧ್ಯಾಯ ಎರಡರಲ್ಲಿ ಭೌಗೋಳಿಕ ಪರಿಸರ ಕುರಿತಂತೆ ಇಲ್ಲಿಯ ಭೂರಚನೆ, ಬೆಟ್ಟಗುಡ್ಡಗಳು, ಹಳ್ಳಗಳು, ಕೆರೆ ಭಾವಿಗಳು, ವಾಯುಗುಣ, ಮುಂತಾದ ವಸ್ತು ವಿಷಯಗಳನ್ನು ವಿವರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಪ್ರಾಗಿತಿಹಾಸ, ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಕುರಿತು ವಿವರಿಸಲಾಗಿದೆ. ಈ ಪ್ರದೇಶವು ಚಾರಿತ್ರಿಕ ಅವಧಿಯಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ

ಕೆಲವು ಅರಸರ ಆಳ್ವಿಕೆಗೆ ಒಳಪಟ್ಟಿದ್ದು ಸ್ಥಳಿಯವಾಗಿ ಸಿಗುವಂತಹ ಇತಿಹಾಸಕಾಲದ ಆಧಾರಗಳನ್ನು, ಸ್ಥಳೀಯ, ಪುರಾಣಗಳ ಐತಿಹ್ಯಗಳನ್ನು, ಸ್ಥಳನಾಮಗಳನ್ನು ಬಳಸಿಕೊಂಡು ಚರಿತ್ರೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಸ್ಥಿತಿಗತಿಯನ್ನು ಇಲ್ಲಿ ದೊರೆತಿರಿವ ಶಾಸನಾಧಾರಗಳಿಂದ ಚರ್ಚಿಸಲಾಗಿದೆ. ಅಂದಿನ ಸಮಾಜದ ವರ್ಗ ವ್ಯವಸ್ಥೆ, ಧರ್ಮಗಳು, ಅವುಗಳ ನಡುವಿನ ಸಂಬಂಧ, ಸಮಾಜದಲ್ಲಿ ನಿರ್ವಹಿಸುತ್ತಿದ್ದ ಪಾತ್ರ, ಧಾರ್ಮಿಕ ಸಂಸ್ಥೆಗಳು ದಾನ-ದತ್ತಿ ಮೊದಲಾದ ಅಂಶಗಳ ಕುರಿತು ಸ್ಥೂಲವಾಗಿ ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ವಾಸ್ತು ಮತ್ತು ಮೂರ್ತಿಶಿಲ್ಪಕಲೆ ಕುರಿತಂತೆ ಮಹತ್ವವನ್ನು ತಿಳಿಸಲಾಗಿದೆ. ಈ ಪ್ರದೇಶದಲ್ಲಿ ಕಂಡುಬಂದಿರುವ ದೇವಾಲಯ ವಾಸ್ತುಶಿಲ್ಪ, ಮೂರ್ತಿಶಿಲ್ಪದ ಕುರಿತು ಚರ್ಚಿಸಲಾಗಿದೆ. ವಿವಿಧ ರಾಜಮನೆತನಗಳ ಅವಧಿಯಲ್ಲಿ ನಿರ್ಮಿಸಿದ ದೇವಾಲಯಗಳ ಮಾಹಿತಿ ಮತ್ತು ಮೂರ್ತಿಶಿಲ್ಪ ಕುರಿತು ವಿವರಣಾತ್ಮಕವಾಗಿ ವಿವರಿಸಲಾಗಿದೆ. ಹಾಗೆಯೇ ಜನಸಾಮಾನ್ಯರ ಭದ್ರತೆಗಾಗಿ, ಹಲವು ರಾಜ ಮನೆತನಗಳ ಕಾಲಾವಧಿಯಲ್ಲಿ ಹೋರಾಡಿ ಮಡಿದಂತಹ ವೀರರ ನೆನಪಿಗಾಗಿ ಮತ್ತು ಪತಿಹೋದ ಮಹಾಸತಿಯರಿಗಾಗಿ ನಿಲ್ಲಿಸಿದ ಮಾಸ್ತಿಗಲ್ಲುಗಳನ್ನು ಶಾಸನಾಧಾರಗಳಿಂದ ವಿವರಿಸಲಾಗಿದೆ. ರಕ್ಷಣೆ ಒದಗಿಸಿಕೊಡುವ ಪ್ರಮುಖ ಸಾಧನಗಳೆಂದರೆ ಕೋಟೆಗಳು ಈ ವಿಷಯದ ಕುರಿತು ಅಧ್ಯಯನ ಕೈಗೊಳ್ಳಲಾಗಿದ್ದು ಪ್ರಸ್ತುತ ಪರಿಸರದಲ್ಲಿ ದೊರೆತ ಕೋಟೆಗಳನ್ನು ವಿವರಣಾತ್ಮಕವಾಗಿ ವಿವರಿಸಲಾಗಿದೆ.

ಆರನೇ ಅಧ್ಯಾಯವು ಕೊನೆಯದಾಗಿದ್ದು, ಇದರಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳು, ಸಮೀಕ್ಷೆ ಫಲಿತಾಂಶಗಳು, ನಿರ್ಧಾರಗಳನ್ನು ಪ್ರಕಟಿಸುವಂತಹ ಪ್ರಯತ್ನ ಮಾಡಲಾಗಿದೆ. ಕೊನೆಯದಾಗಿ ಅಧ್ಯಯನಕ್ಕೆ ಪೂರಕವಾದ ಗ್ರಂಥಋಣ, ನಕ್ಷೆಗಳು, ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ.

* * *

# ಭೌಗೋಳಿಕ ಪರಿಸರ

ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಯು ಅಲ್ಲಿಯ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತು ಬಹಳ ಮುಖ್ಯವಾಗಿರುತ್ತದೆ. ಹಾಗೆಯೇ ರಿಚರ್ಡ ಹಕ್ಲೂಯತ್ ಹೇಳುವಂತೆ ಇತಿಹಾಸ ಮತ್ತು ಭೂಗೋಳ ಶಾಸ್ತ್ರಗಳು ಪರಸ್ಪರ ನಿಕಟವಾದ ಸಂಬಂಧವನ್ನು ಹೊಂದಿವೆ.[೧] ಒಂದು ಪ್ರದೇಶ ಕುರಿತು ಅಧ್ಯಯನ ಮಾಡುವ ಪೂರ್ವದಲ್ಲಿ ಆ ಪ್ರದೇಶದ ಸುತ್ತಮುತ್ತಲಿನ ಭೌಗೋಳಿಕ ವಿವರಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿರುತ್ತದೆ. ಏಕೆಂದರೆ ಆಯಾ ಪ್ರದೇಶದ ಜನರ ಜೀವನ ಅಲ್ಲಿನ ಪರಿಸರದ ಸ್ವರೂಪ ಹಾಗೂ ಭೌಗೋಳಿಕ ವೈಶಿಷ್ಟ್ಯತೆಗಳನ್ನು ಅರಿಯದೇ ಯಾವುದೇ ಒಂದು ಅಧ್ಯಯನ ಅಪೂರ್ಣ. ಪ್ರಾಚೀನ ನಾಗರೀಕತೆಗಳ ಉಗಮ ಮತ್ತು ವಿಕಾಸ ನದಿ ದಂಡೆಗಳ ಮೇಲೆ ಆಗಿರುವುದನ್ನು ಗಮನಿಸಿದಾಗ, ಭೌಗೋಳಿಕ ಅಂಶಗಳ ಪ್ರಾಮುಖ್ಯತೆಯನ್ನು ಅರಿಯಬಹುದು. ಈ ಹಿನ್ನೆಲೆಯಲ್ಲಿ ಆಯಾ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಗಳ ವಿಕಸನದಲ್ಲಿ ಅಲ್ಲಿನ ಭೌಗೋಳಿಕ ಪರಿಸರ ಸಂಪತ್ತು ಮತ್ತು ವೈಶಿಷ್ಟ್ಯತೆಗಳು ಬಹಳ ಮುಖ್ಯ ಪಾತ್ರವನ್ನು ವಹಿಸಿರುತ್ತದೆ.

ಯಾವುದೇ ಒಂದು ಪ್ರದೇಶದಲ್ಲಿ ಮನುಷ್ಯನ ಸ್ಥಿತಿ ಉತ್ತಮವಾಗಿರಲು ಆ ಪ್ರದೇಶದಲ್ಲಿರುವ ಪರ್ವತಶ್ರೇಣಿ, ಬೆಟ್ಟಗುಡ್ಡಗಳು, ಜಲಸಂಪತ್ತು, ತೀರಪ್ರದೇಶ, ವಾಯುಗುಣ, ಮಣ್ಣಿನ ರಚನೆ, ಮುಂತಾದ ಭೌಗೋಳಿಕ ಅಂಶಗಳು ಪ್ರಮುಖ ಕಾರಣವಾಗಿರುತ್ತವೆ. ಹಾಗೆಯೇ ಆ ಪರಿಸರವು ಅಲ್ಲಿನ ಜನರ ಜೀವನ ಹಾಗೂ ಸಾಂಸ್ಕೃತಿಕ ವಿಚಾರಗಳನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ಅಭಿವೃದ್ಧಿಗೊಳಿಸಲು ಸಹಕಾರಿಯಾಗಿ ನಿಲ್ಲುತ್ತದೆ.[೨] ಈ ಅಂಶಗಳನ್ನು ಪರಿಗಣಿಸಿ ಪ್ರಸ್ತುತ ಅಧ್ಯಯನ ಧರ್ಮಪುರಕ್ಕೆ ಸಂಬಂಧಿಸಿದ ಪರಿಸರದ ಭೌಗೋಳಿಕ ಲಕ್ಷಣಗಳು ಮಾನವನ ಜೀವನದ ಮೇಲೆ ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ.

ಕರ್ನಾಟಕ ರಾಜ್ಯದ ಮದ್ಯಭಾಗದಲ್ಲಿರುವ ಚಿತ್ರದುರ್ಗ ಜಿಲ್ಲೆಯು ಇತಿಹಾಸದಲ್ಲಿ ವೈವಿಧ್ಯಮಯ ವೈಶಿಷ್ಟ್ಯತೆಗಳನ್ನು ಹೊಂದಿರುವ ಪ್ರದೇಶಗಳಲ್ಲಿ ಒಂದಾಗಿದೆ. ಈ ಜಿಲ್ಲೆಯಲ್ಲಿ ಹಲವು ರಾಜಮನೆತನಗಳ ಆಳ್ವಿಕೆ ಮತ್ತು ಪಾಳೆಯಗಾರರ ಕೋಟೆ ಕೊತ್ತಲಗಳು ವೈವಿಧ್ಯತೆಯನ್ನು

ಸಾರುತ್ತವೆ. ಕಿರಿದಾದ ಪರ್ವತ ಶ್ರೇಣಿಗಳು ಅಲ್ಲಲ್ಲಿ ವ್ಯಾಪಿಸಿರುವುದು ಜಿಲ್ಲೆಯ ವಿಶಿಷ್ಟ ಗುಣವಾಗಿದೆ. ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಚಿತ್ರದುರ್ಗ, ಚಳ್ಳಕೆರೆ, ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ ಹಾಗೂ ಮೊಳಕಾಲ್ಮುರು ತಾಲ್ಲೂಕುಗಳಿವೆ. ಹಿರಿಯೂರು ತಾಲ್ಲೂಕು ಧರ್ಮಪುರ, ಜವನಗೊಂಡನಹಳ್ಳಿ, ಐಮಂಗಲ, ಹಾಗೂ ಕಸಬಾ ಹಿರಿಯೂರು ಹೋಬಳಿಗಳನ್ನು ಒಳಗೊಂಡಿದೆ.

ಧರ್ಮಪುರವು ಐತಿಹಾಸಿಕ ಸ್ಮಾರಕಗಳು ಹಾಗೂ ಇತಿಹಾಸವನ್ನು ಸಾರುವಂತಹ ಹೋಬಳಿಯಾಗಿದ್ದು ಈ ಗ್ರಾಮವು ವೈವಿಧ್ಯತೆಯಿಂದ ಕೂಡಿದೆ. ಈ ಹೋಬಳಿಯು ಸುಮಾರು ೬೦ ಗ್ರಾಮಗಳನ್ನು ಒಳಗೊಂಡಿದ್ದು, ಈ ಗ್ರಾಮಗಳಲ್ಲಿ ೧೫ ಗ್ರಾಮ ಲೆಕ್ಕಾಧಿಕಾರಿಗಳ ವೃತ್ತ ಗ್ರಾಮಗಳು, ೪೨ ಕಂದಾಯ ವೃತ್ತ ಗ್ರಾಮಗಳು, ೩ ಬೇಚಾರಕ್ ಗ್ರಾಮಗಳಿವೆ.

ಧರ್ಮಪುರವು ಜಿಲ್ಲಾ ಕೇಂದ್ರದಿಂದ ಈಶಾನ್ಯಕ್ಕೆ ಸುಮಾರು ೮೦ ಕಿ. ಮೀ. ಅಂತರದಲ್ಲಿದೆ. ಈ ಹೋಬಳಿಯ ಪೂರ್ವಕ್ಕೆ ಅಮರಾಪುರ, ಪಶ್ಚಿಮಕ್ಕೆ ಹಿರಿಯೂರು, ದಕ್ಷಿಣಕ್ಕೆ ಬರಗೂರು, ಉತ್ತರಕ್ಕೆ ಪರಶುರಾಂಪುರವಿದೆ. ಈ ಪ್ರದೇಶದ ವ್ಯಾಪ್ತಿಯು ೪೦° ಉತ್ತರ ಅಕ್ಷಾಂಶದಿಂದ ೪೮° ವರೆಗೂ ೭೭° ರೇಖಾಂಶದಿಂದ ೭೫° ವರೆಗೂ ಹಬ್ಬಿದ್ದು, ಒಟ್ಟು ೪೨೬೦ ಚ.ಕಿ.ಮೀ. ವಿಸ್ತೀರ್ಣವಿದೆ. ೨೦೦೧ರ ಜನಗಣತಿ ಪ್ರಕಾರ ಇಲ್ಲಿನ ಜನಸಂಖ್ಯೆ. ೨೨೦೦೦ ಇದ್ದು, ಇದರಲ್ಲಿ ೧೨೨೦೦ ಪುರುಷರು ಹಾಗೂ ೧೦,೮೦೦ ಸ್ತ್ರೀಯರು ಇರುವುದು. ಈ ಹೋಬಳಿಯ ಸಾಕ್ಷರತೆಯ ಪ್ರಮಾಣ ಶೇ.೫೦ ಆಗಿದ್ದು ಇದರಲ್ಲಿ ಪುರುಷರು ಶೇ.೨೭ ಹಾಗೂ ಮಹಿಳೆಯರು ಶೇ.೨೩ರಷ್ಟಿದೆ.[೩]

ಈ ಪರಿಸರದಲ್ಲಿ ಮಳೆಯ ಪ್ರಮಾಣ ಸಾದಾರಣವಾಗಿದ್ದು, ಹೆಚ್ಚು ಉಷ್ಣತೆಯನ್ನು ಹೊಂದಿದೆ. ಸಾಮಾನ್ಯವಾಗಿ ಉಷ್ಣವಲಯದಲ್ಲಿ ಬರುವಂತಹ ಈ ಪ್ರದೇಶವು ಸಮುದ್ರ ಮಟ್ಟದಿಂದ ಕಡಿಮೆ ಎತ್ತರದಲ್ಲಿದೆ. ಬೇಸಿಗೆಯಲ್ಲಿ ಹವಾಮಾನವು ಹೆಚ್ಚು ಉಷ್ಣಾಂಶದಿಂದ ಕೂಡಿದ್ದು ೪೦° ಸೆಲ್ಸಿಯಸ್‌ವರೆಗೆ ದಾಖಲಾಗುತ್ತಿದೆ. ಅಕ್ಟೋಬರ್, ನವಂಬರ್, ಡಿಸೆಂಬರ್ ತಿಂಗಳುಗಳಲ್ಲಿ ತಂಪಾದ ಹವಾಮಾನವನ್ನು ಹೊಂದಿರುತ್ತದೆ.

**ಭೂರಚನೆ**

ಹಿರಿಯೂರು ತಾಲ್ಲೂಕಿನಲ್ಲಿ ಬರುವ ನಾಲ್ಕು ಹೋಬಳಿಗಳಲ್ಲಿ ಧರ್ಮಪುರ ಸುತ್ತಮುತ್ತಲಿನ ಪರಿಸರವು ಸ್ವಲ್ಪಭಾಗ ಸಮತಟ್ಟಾಗಿದ್ದು, ಅಲ್ಲಲ್ಲಿ ಉಬ್ಬು ತಗ್ಗುಗಳಿಂದ ಕೂಡಿದೆ. ವಿಶೇಷವಾಗಿ ಈ ಪ್ರದೇಶದಲ್ಲಿ ಕಲ್ಲು ಜರುಗಿನಿಂದ ಕೂಡಿರುವ ಕಲ್ಲು ಮಿಶ್ರಿತ ಕೆಂಪು ಭೂಮಿ, ಹಾಗೆಯೇ ಕಪ್ಪು ಭೂಮಿಯನ್ನು ಒಳಗೊಂಡಿದೆ.[೪] ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯಾಗಿರುತ್ತದೆ.

ಹಲವು ಕಡೆಗಳಲ್ಲಿ ಮಣ್ಣು ಲವಣಯುಕ್ತವಾದುದಾಗಿದೆ. ಈ ಪ್ರದೇಶದಲ್ಲಿ ಕೆಂಪು ಮಣ್ಣು ಮತ್ತು ಕಪ್ಪು ಮಣ್ಣು ತೇವಾಂಶದಿಂದ ಕೂಡಿರುವುದರಿಂದ ಬೇಸಾಯ, ಜೊತೆಗೆ ತೋಟಗಾರಿಕೆ ಬೆಳೆಗಳನ್ನು ಸಹ ಅಲ್ಲಲ್ಲಿ ಕಾಣುತ್ತೇವೆ. ರಾಗಿ, ನವಣೆ, ತೊಗರಿ, ಶೇಂಗಾ, ಕಡಲೆ, ತಂಬಾಕು, ಕಡಲೆ, ಎಣ್ಣೆ ಬೀಜಗಳು, ಭತ್ತ ಇತ್ಯಾದಿ ಮುಖ್ಯ ಬೆಳೆಗಳಾಗಿವೆ.[೫] ಹಾಗೆಯೇ ಈರುಳ್ಳಿಯನ್ನು ಇತ್ತೀಚೆಗೆ ವಾಣಿಜ್ಯ ಬೆಳೆಯನ್ನಾಗಿ ಬೆಳೆಯುತ್ತಿದ್ದಾರೆ. ಕೆಲವು ಫಲವತ್ತಾದ ಕಪ್ಪು ಕೆಂಪು ಮಣ್ಣಿನ ನೀರಾವರಿ ವ್ಯವಸ್ಥೆಯಿರುವಲ್ಲಿ ಅಡಿಕೆ, ತೆಂಗು ಸಹ ಕಂಡು ಬರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಮುಖವಾಗಿ ಹರಿಯುವ ವೇದಾವತಿ ನದಿಯು ಈ ಹೋಬಳಿಯ ಪಕ್ಕದಲ್ಲೇ ಹರಿಯುತ್ತಿದ್ದು ಅದರ ಪ್ರಯೋಜನೆ ಈ ಪ್ರದೇಶಕ್ಕೆ ದೊರೆತಿಲ್ಲ. ಈ ಪ್ರದೇಶದಲ್ಲಿ ಜನರ ಬಳಕೆಗೆ ಹಾಗೂ ಸ್ವಲ್ಪಮಟ್ಟಿನ ಕೃಷಿಗೆ ನೀರನ್ನು ಒದಗಿಸುವಲ್ಲಿ ಕೆರೆಗಳು ಪ್ರಮುಖ ಪಾತ್ರ ವಹಿಸಿವೆ ಅವುಗಳೆಂದರೆ ಧರ್ಮಪುರ ಕೆರೆ, ಖಂಡೇನಹಳ್ಳಿಕೆರೆ, ಹೊಸಕೆರೆ, ಚಿಲ್ಲಹಳ್ಳಿಕೆರೆ, ಬೇತೂರು ಕೆರೆ, ವೇಣುಕಲ್ಲುಗುಡ್ಡದ ಕೆರೆ ಇವು ಮಳೆಗಾಲದಲ್ಲಿ ಮಾತ್ರ ತುಂಬಿ ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ಇಲ್ಲಿನ ಸುತ್ತಮುತ್ತಲಿನ ರೈತರು ವ್ಯವಸಾಯಕ್ಕೆ ಬಾವಿಗಳನ್ನು ನಂಬಿಕೊಂಡಿದ್ದರೂ ಸಹ ಇತ್ತೀಚಿನ ದಿನಗಳಲ್ಲಿ ಕೊಳವೆ ಬಾವಿಗಳಿಂದಾಗಿ ವ್ಯವಸಾಯವನ್ನು ನಿರ್ವಹಿಸುತ್ತಿದ್ದಾರೆ. ಆದರೂ ಅಂತರ್ಜಲ ಮಟ್ಟ ಇಳಿಮುಖವಾಗಿರುವುದರಿಂದ ಇತ್ತೀಚಿನ ದಿನಗಳಲ್ಲಿ ಕೆಲವೇ ರೈತರು ಮಾತ್ರ ಕೊಳವೆ ಬಾವಿಗಳ ನೀರಿನಿಂದ ವ್ಯವಸಾಯ ಮಾಡುತ್ತಿದ್ದಾರೆ. ಇಲ್ಲಿನ ಜನರ ಮುಖ್ಯ ವೃತ್ತಿ ವ್ಯವಸಾಯವಾಗಿದ್ದರಿಂದ ಇಲ್ಲಿ ಬೇಸಾಯ ನೀರಾವರಿ ಪದ್ಧತಿಗಳನ್ನು ಅನುಸರಿಸಲಾಗುತ್ತಿದೆ. ಕೆಲವರು ನೀರಾವರಿಯಿಂದ ದಾಳಿಂಬೆ, ಪಪ್ಪಾಯಿ, ಹಣ್ಣಿನ ತೋಟಗಾರಿಕೆ, ರೇಷ್ಮೆ ಕೃಷಿಯನ್ನು ಸಹ ಹೊಂದಿರುತ್ತದೆ.

ಇಲ್ಲಿನ ಪರಿಸರವು ಕೃಷಿಯೊಂದಿಗೆ ಕೃಷಿಯೇತರ ಚಟುವಟಿಕೆಗಳಿಗೂ ಸಹ ಅಷ್ಟೇ ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟಿದೆ. ಅಂದರೆ ಸುತ್ತಮುತ್ತಲಿನ ಕೈಗಾರಿಕೆಗಳು ಈ ಪ್ರದೇಶದ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ವ್ಯವಸಾಯದ ಜೊತೆಗೆ ಮಡಿಕೆ ತಯಾರಿಕೆ, ಬುಟ್ಟಿ ಹೆಣೆಯುವುದು, ಕುಂಬಾರಿಕೆ, ಮತ್ತು ಹಲವಾರು ವಸ್ತುಗಳನ್ನು ತಯಾರು ಮಾಡಿಕೊಂಡು ತಾಲೂಕಿನ ಎಲ್ಲಾ ಕಡೆಗೆ ಸರಬರಾಜು ಮಾಡುತ್ತಿರುವುದನ್ನು ಗಮನಿಸಿದರೆ ಕೃಷಿಯೇತರ ಚಟುವಟಿಕೆಯೂ ಸಹ ಇಲ್ಲಿನ ಜನರ ಮೇಲೆ ಸ್ವಲ್ಪ ಮಟ್ಟಿನ ಪ್ರಭಾವ ಬೀರಿದೆ ಎಂದು ಹೇಳಬಹುದು.

**ಅರಣ್ಯ ಸಂಪತ್ತು**

ಚಿತ್ರದುರ್ಗ ಜಿಲ್ಲೆಯು ಇದು ಶಾಶ್ವತ ಬರಪೀಡಿತ ಪ್ರದೇಶವೆಂದು ಸರ್ಕಾರದಿಂದಲೇ ಗುರುತಿಸಲ್ಪಟ್ಟ ಪ್ರದೇಶವಾಗಿದೆ. ಧರ್ಮಪರ ಪರಿಸರವೂ ಸಹ ಅತ್ಯಂತ ಕಡಿಮೆ ಮಳೆ

ಬೀಳುವ ಪ್ರದೇಶವೆಂದೇ ಹೇಳಬಹುದು. ಇಲ್ಲಿ ಅರಣ್ಯ ಸಂಪತ್ತು ಕಡಿಮೆಯೇ ಇದ್ದು 'ಬಯಲು ಸೀಮೆ' ಎಂದು ಗುರುತಿಸಲಾಗುತ್ತದೆ. ಈ ಹೋಬಳಿಯಲ್ಲಿ, ಮಳೆಯ ಪ್ರಮಾಣ ಕಡಿಮೆ ಇರುವುದರಿಂದ ದಟ್ಟವಾದ ಅರಣ್ಯಗಳಿರದೇ ಅಲ್ಲಲ್ಲಿ ಸೀಮೆ ಜಾಲಿ ಪೊದೆಗಳನ್ನು ಎತ್ತರವಲ್ಲದ, ಹಲವು ಜಾತಿಯ ಮರಗಳನ್ನು ಕಾಣಬಹುದಾಗಿದೆ. ಎಲೆ ಉದುರುವ ವೃಕ್ಷಗಳು, ಹೊಂಗೆ, ಮುಳ್ಳುಗಿಡಗಳು, ಕುರುಚಲು ಕಾಡು, ಕಳ್ಳಿ, ಸೀಮೆ ಜಾಲಿ, ಚಿಗರು, ಹುಣಸೆ, ಹಲಸು, ಕಾರೆ, ತಂಗಡಿ, ಪಾಪಾಸ್‌ಕಳ್ಳಿ, ಬಂದಗಳ್ಳಿ, ಕಳ್ಳಿಗಿಡ ಕಂಡು ಬರುತ್ತದೆ. ಸಾಮಾನ್ಯವಾಗಿ ಬೇಸಿಗೆಕಾಲದಲ್ಲಿ ಎಲೆಗಳು ಉದುರಿ, ಮಳೆಗಾಲದಲ್ಲಿ ಚಿಗಿತು ಇಲ್ಲಿನ ಪ್ರಕೃತಿ ಸೌಂದರ್ಯವನ್ನು ಸೂಸುತ್ತವೆ.

### ಬೆಟ್ಟ ಗುಡ್ಡಗಳು

ಬೆಟ್ಟಗುಡ್ಡಗಳು ಪರಿಸರಕ್ಕೆ ನೀಡಿದ ಉಚಿತವಾದ ನೈಸರ್ಗಿಕ ಸಂಪನ್ಮೂಲಗಳು. ಇವು ಮಾನವನ ಜೀವನದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪ್ರಭಾವ ಬೀರುತ್ತವೆ. ಅದರಂತೆ ಮಾನವನು ಸಹ ತನ್ನ ಬುದ್ಧಿ ಚಾತುರ್ಯದ ಮೂಲಕ ನೈಸರ್ಗಿಕ ಪರಿಸರವನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾನೆ. ಹಾಗೆಯೇ ಅರಸನು ಪರಿಸರದಿಂದ ನಿರ್ಬಂದಿತವಾದ ಚೌಕಟ್ಟಿನೊಳಗೆ ಕಾರ್ಯನಿರ್ವಹಿಸುತ್ತಾನೆ.

ಪ್ರಾಚೀನ ಕಾಲದಿಂದಲ್ಲೂ ಬೆಟ್ಟಗುಡ್ಡಗಳಲ್ಲಿ, ನದಿ ದಂಡೆಗಳಲ್ಲಿ ಮಾನವನು ವಾಸ ಮಾಡಿರುವುದು ಕಂಡುಬರುತ್ತಿದೆ. ಇಲ್ಲಿ ನೈಸರ್ಗಿಕ ಸಂಪನ್ಮೂಲಗಳು ಅದಿಕವಾಗಿ ಹಾಗೂ ಉಚಿತವಾಗಿ ದೊರೆಯುತ್ತವಲ್ಲದೆ. ಸಮುದ್ರಮಟ್ಟಕ್ಕಿಂತ ಹೆಚ್ಚು ಎತ್ತರವಾದ ಭೂಪ್ರದೇಶಗಳಲ್ಲಿ ಉಷ್ಣತೆ ಕಡಿಮೆಯಾಗಿ ಹವಮಾನ ತಂಪಾಗಿರುತ್ತದೆ. ಅಲ್ಲದೆ ಶತೃಗಳು ಪ್ರವೇಶ ಮಾಡದ ಹಾಗೆ ರಕ್ಷಿಸಿಕೊಳ್ಳಲು ಪ್ರಕೃತಿ ನಿರ್ಮಿತ ಗುಹೆಗಳು, ಕೋಟೆಗಳು, ಬತೇರಿಗಳು ಇವೆ. ಈ ಹೋಬಳಿ ಕೇಂದ್ರದಲ್ಲಿ ಚದುರಿದಂತೆ ಕೆಲವು ಕಣ ಶಿಲೆ ಬೆಟ್ಟ ಶ್ರೇಣಿಗಳಿವೆ. ಕೆಲವು ಕಡೆ ಏರು ತಗ್ಗಿನ ಮೈದಾನದ ಪ್ರದೇಶವಾಗಿದೆ. ಈ ಪ್ರದೇಶದಲ್ಲಿ ನಮಗೆ ಕಾಣಲಿರುವ ಪ್ರಮುಖ ಬೆಟ್ಟ ಗುಡ್ಡಗಳೆಂದರೆ ವೇಣುಕಲ್ಲುಗುಡ್ಡ, ಹರ್ತಿಕೋಟೆ, ಪರಶುರಾಮದೇವರಕೋಟೆ, ಬೆಟ್ಟಗೊಂಡನಹಳ್ಳಿ, ಕಣಜನಹಳ್ಳಿ. ಈ ಸುತ್ತಮುತ್ತಲ ಪರಿಸರದ ಬೆಟ್ಟ ಗುಡ್ಡಗಳಲ್ಲಿ ಪ್ರಾಚೀನ ಮಾನವನು ವಾಸಿಸಿರುವುದಕ್ಕೆ ಕೆಲವು ಕುರುಹುಗಳು ಕಂಡುಬರುತ್ತದೆ. ಇಲ್ಲಿಯೆ ಹತ್ತಿರದಲ್ಲಿ ಮರಡಿಹಳ್ಳಿಯ ಗುಡ್ಡ ಪ್ರದೇಶವಿದ್ದು ಇದನ್ನು ಭೂಗರ್ಭಶಾಸ್ತ್ರಜ್ಞರು ಸುಮಾರು ೨೫೦೦ಕೋಟಿ ವರ್ಷಗಳಷ್ಟು ಪ್ರಾಚೀನಬೆಟ್ಟ ಎಂದು ಹೇಳಿದ್ದಾರೆ. ಸರ್ಕಾರದವರು ಮರಡಿಹಳ್ಳಿಯ ಗುಡ್ಡ ಪ್ರದೇಶವನ್ನ ರಕ್ಷಿತ ಪ್ರದೇಶವೆಂದು ವೈಜ್ಞಾನಿಕ ಸ್ಮಾರಕವೆಂದು ಘೋಷಿಸಿದ್ದಾರೆ. ಇಲ್ಲಿನ ಶಿಲೆಗಳು ಉತ್ಕೃಷ್ಟವಾದುವೆಂದು ಲಂಡನ್ನಿನ ಮ್ಯೂಸಿಯಂನಲ್ಲಿ ಇರಿಸಿದ್ದಾರೆ. ಇದನ್ನು ಸಂಶೋದಿಸಿದವರು ಡಾ.ಸಿ.ಹೆಚ್.ಪಿಚ್ಚಮುತ್ತುರವರು.[೬]

**ಜಲ ಸಂಪತ್ತು**

ಈ ಪ್ರದೇಶ ಬಯಲು ಸೀಮೆಯಾದ್ದರಿಂದ ಇಲ್ಲಿನ ಪ್ರಮುಖ ಜಲಸಂಪನ್ಮೂಲಗಳು, ಕೆರೆಗಳು ಬಾವಿಗಳು, ಕೊಳವೆಬಾವಿಗಳು. ಪ್ರಾಚೀನ ಕಾಲದಿಂದ ನೀರಿನ ಆಸರೆಯಾಗಿ ಇಲ್ಲಿನ ಕೆರೆಗಳು ಪ್ರಮುಖ ಪಾತ್ರವಹಿಸಿರುವಂತೆ ಕಾಣುತ್ತದೆ. ಪಶ್ಚಿಮ ಭಾಗದಲ್ಲಿ ವೇದಾವತಿ ನದಿಯ ದಕ್ಷಿಣೋತ್ತರವಾಗಿ ಹರಿದು ಬಳ್ಳಾರಿ ಜಿಲ್ಲೆಯನ್ನು ಸೇರುತ್ತದೆ.

ಧರ್ಮಪುರ ಕೆರೆ ಅತ್ಯಂತ ದೊಡ್ಡದು ಈ ಹಿಂದೆ ಪ್ರಾಚೀನ ಕಾಲದಲ್ಲಿ ಅತೀ ಹೆಚ್ಚು ನೀರು ಶೇಖರಣೆಯಾಗಿ ಹಲವು ಗ್ರಾಮಗಳಿಗೆ ಸುಮಾರು ಎಕರೆಗೆ ವ್ಯವಸಾಯಕ್ಕೆ ನೀರಿನ ಸೌಲಭ್ಯ ಒದಗಿಸುತ್ತದೆ. ಇದಲ್ಲದೆ ಈ ಪ್ರದೇಶದಲ್ಲಿ ಖಂಡೇನಹಳ್ಳಿ ಕೆರೆ, ಹೊಸಕೆರೆ, ಅಬ್ಬಿನಹೊಳೆ ಕೆರೆ, ಸಕ್ರ ಮುಂತಾದ ಕೆರೆಗಳು ಸಹ ವ್ಯವಸಾಯಕ್ಕೆ ನೀರನ್ನು ಒದಗಿಸುವ ಪ್ರಮುಖ ಮೂಲಗಳಾಗಿದ್ದವೆಂದು ಹೇಳಬಹುದು.

**ಪ್ರಾಣಿ ವರ್ಗ**

ಧರ್ಮಪುರ ಸುತ್ತಮುತ್ತಲಿನ ಪರಿಸರದಲ್ಲಿ ಗಿಡ ಮರಗಳುದಟ್ಟವಾದ ಹಳ್ಳಕೊಳ್ಳಗಳು ಅರಣ್ಯ ಕಾಡಿನ ಸಂಪತ್ತು ಇದ್ದುದರಿಂದಾಗಿ ಗಿಡ್ಡದರ್ಜೆಯ ಪ್ರಾಣಿಗಳು ಸಹ ಕಂಡುಬರುತ್ತವೆ. ವಿಶೇಷವಾಗಿ ಎಂದರೆ ಮಾಂಸಹಾರಿ ಪ್ರಾಣಿಗಳೆಂದರೆ ನರಿ, ತೋಳ, ಕತ್ತೆಕಿರುಬಾ, ಚಿಗರೆ, ಅಪರೂಪಕ್ಕೆ ಚಿರತೆ, ನರಿ, ಕಾಣಿಸುತ್ತವೆ. ಅದೇ ರೀತಿ ಸಸ್ಯಹಾರಿಗಳಾದ ಕಾಡುಹಂದಿ, ಮುಳ್ಳುಹಂದಿ, ಮುಂಗುಸಿ, ಮೊಲ, ಉಡ, ನವಿಲು, ನಾಗರಹಾವು ಮುಂತಾದ ಪ್ರಾಣಿಗಳ ಸಂಕುಲಗಳನ್ನು ಕಾಣಬಹುದಾಗಿದೆ.

**ಖನಿಜ ಸಂಪತ್ತು**

ಚಿತ್ರದುರ್ಗ ಜಿಲ್ಲೆಯ ಭೀಮಸಮುದ್ರ, ಇಂಗಳದಾಳು, ಚಿತ್ರಹಳ್ಳಿ, ಹೊಸದುರ್ಗ ಇತ್ಯಾದಿ ಪ್ರದೇಶದಲ್ಲಿ ಹೇರಳವಾದ ಖನಿಜ ಸಂಪತ್ತು ಕಂಡುಬರುತ್ತದೆ. ಆದರೆ, ಧರ್ಮಪುರ ಹೋಬಳಿ ಪರಿಸರದಲ್ಲಿ ಮಹತ್ತರವಾದ ಲಾಭ ತರಬಹುದಾದ ಮುಖ್ಯ ಖನಿಜ ಸಂಪತ್ತು ಕಾಣಸಿಗುವುದಿಲ್ಲ. ಕಣಿವೆ ಮತ್ತು ವಿವಿಧ ವರ್ಣದ ಸುಣ್ಣದ ನಿಕ್ಷೇಪಗಳು, ಕಪ್ಪುಕಲ್ಲು ದೊರೆತಿವೆ.[೬] ಈ ಪ್ರದೇಶದಲ್ಲಿ ಕೆಲವು ಕಡೆ ಕಪ್ಪು ಜಿಗುಟು ಮಣ್ಣು ಕೆಂಪು ಮಿಶ್ರಿತ ಮಣ್ಣು ಕಾಣಲಾಗಿದೆ.

**ಅಡಿಟಿಪ್ಪಣಿಗಳು**

೧. ಸದಾಶಿವ ಕೆ., ಸಮಗ್ರ ಭಾರತ ಇತಿಹಾಸ, ಪುಟ-೨

೨. ವೆಂಕಟರಂಗೂ ಕಟ್ಟಿ, ಧಾ.ಗೇ, ಏಶಿಯನ್ ಎಜ್ಯುಕೇಶನ್ ಸರ್ವೀಸಸ್ ನವದೆಹಲಿ, ಪುಟ-೪೮

೩. ಧರ್ಮಪುರದ ನಾಡಕಛೇರಿ ಅಂಕಿ ಅಂಶಗಳು

೪. ಕನ್ನಡ ವಿಷಯ ವಿಶ್ವಕೋಶ, ಸಂಪುಟ-೨, ಪುಟ-೬೬

೫. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ-೨೬೧

೬. ಅದೇ, ಪುಟ-೩೬೧

೭. ಅದೇ, ಪುಟ-೩೭೦

* * *

# ಐತಿಹಾಸಿಕ ಹಿನ್ನೆಲೆ

ಕರ್ನಾಟಕದ ಇತಿಹಾಸದಲ್ಲಿ ಮಾತ್ರವಲ್ಲದೆ ಇಡೀ ಭಾರತದ ಇತಿಹಾಸದಲ್ಲಿ ಚಿತ್ರದುರ್ಗ ಜಿಲ್ಲೆ ವಿಶಿಷ್ಟವಾದ ಸ್ಥಾನವಿದೆ. ಈ ಪ್ರದೇಶವು ಭೌಗೋಳಿಕವಾಗಿ ಆಯಕಟ್ಟಿನ ಪ್ರದೇಶದಲ್ಲಿರುವುದೇ ಇದಕ್ಕೆ ಕಾರಣ ಎನ್ನಬಹುದು. ಈ ಜಿಲ್ಲೆಯಲ್ಲಿನ ಹಲವಾರು ತಾಲ್ಲೂಕುಗಳು ಸಹ ಅಷ್ಟೆ ಐತಿಹಾಸಿಕವಾಗಿ ಮಹತ್ವವನ್ನು ಬೀರಿವೆ. ಈ ಪ್ರದೇಶದ ಇತಿಹಾಸವನ್ನು ಪ್ರಾಗಿತಿಹಾಸಕಾಲ ಮತ್ತು ಐತಿಹಾಸಿಕಕಾಲ ಎಂದು ಎರೆಡು ಹಂತಗಳಲ್ಲಿ ಅಧ್ಯಯನಮಾಡಬಹುದು.

## ೩.೧ ಪ್ರಾಗಿತಿಹಾಸ

ಬರವಣಿಗೆಯ ರೂಪದ ಆಧಾರಗಳು ದೊರೆಯದೆ ಎಂದರೆ ಉಪಯೋಗಿಸಿದಂತಹ ವಿವಿದ ವಸ್ತುಗಳು, ಉಪಕರಣಗಳ ಬಗ್ಗೆ ತಿಳಿಯುವುದು ಅವಶ್ಯಕವಾಗಿರುತ್ತದೆ. ಆದುದರಿಂದಾಗಿ ಕೇವಲ ಪುರಾತತ್ವ ಅವಶೇಷಗಳ ಸಹಾಯದಿಂದ ಇತಿಹಾಸವನ್ನು ಅಧ್ಯಯನ ಮಾಡುವುದಕ್ಕೆ ಪ್ರಾಗಿತಿಹಾಸ ಎನ್ನಲಾಗಿದೆ. ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರೆಡು ಹಂತಗಳಲ್ಲಿ ವಿಂಗಡಿಸಬಹುದಾಗಿದ್ದು ಮೊದಲನೆಯದು ಅಕ್ಷರ ಜ್ಞಾನವಿಲ್ಲದ ಹಂತವೆಂದು, ಇದನ್ನು ಪ್ರಾಗಿತಿಹಾಸಕಾಲ ಎಂತಲೂ, ಎರಡನೆಯದು ಅಕ್ಷರ ಜ್ಞಾನವಿದ್ದ ಹಂತ ಇದನ್ನು ಇತಿಹಾಸಕಾಲವೆಂದು ಕರೆಯಲಾಗುತ್ತದೆ.

ಪ್ರಾಗಿತಿಹಾಸಕಾಲದಲ್ಲಿ ಶಿಲಾಯುಗ ಸಂಸ್ಕೃತಿ ಮತ್ತು ಲೋಹ ಸಂಸ್ಕೃತಿ ಎಂಬ ಎರಡು ಭಾಗಗಳಿವೆ. ಶಿಲಾಯುಗ ಸಂಸ್ಕೃತಿಯನ್ನು, ಹಳೆಯ ಶಿಲಾಯುಗ, ಸೂಕ್ಷ್ಮಶಿಲಾಯುಗ ಮತ್ತು ನವಶಿಲಾಯುಗ ಎಂದು ವಿಭಾಗಿಸಲಾಗಿದೆ. ಹಳೆಯ ಶಿಲಾಯುಗದಲ್ಲಿ ಆದಿ ಹಳೆಯ ಶಿಲಾಯುಗ, ಮಧ್ಯಶಿಲಾಯುಗ ಮತ್ತು ಅಂತಿಮ ಶಿಲಾಯುಗ ಎಂದು ವಿಭಾಗಿಸಲಾಗಿದೆ. ತದನಂತರವಾಗಿ ಲೋಹಯುಗದ ಆರಂಭದಲ್ಲಿ ಶಿಲೆಯ ಬಳಕೆಯ ಜೊತೆಗೆ ತಾಮ್ರದ ಬಳಕೆಯೂ ಸಹ ಕಂಡು ಬಂದುದರಿಂದ ಈ ಹಂತವನ್ನು ತಾಮ್ರ ಶಿಲಾಯುಗ ಎಂದೂ, ನಂತರದ ಕಾಲವನ್ನು ಕಬ್ಬಿಣಯುಗ, ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಐದು ಭಾಗಗಳಲ್ಲಿ ವಿಂಗಡಿಸಲಾಗಿದೆ.[೧]

ಪ್ರಾಗಿತಿಹಾಸದಕಾಲವನ್ನು ಇತಿಹಾಸ ಪೂರ್ವಕಾಲ ಎಂತಲೂ ಕರೆಯಲಾಗಿದೆ. ಪ್ರಾಚೀನ ಮಾನವನಿಂದ ಇತಿಹಾಸ ರಚನೆಗೊಂಡಿದ್ದು ಆತನು ಉಪಯೋಗಿಸಲ್ಪಟ್ಟ ಅವಶೇಷಗಳಾದ ಶಿಲಾಯುಧಗಳು, ಮಡಿಕೆ, ಕುಡಿಕೆಗಳು, ಆಟಿಕೆವಸ್ತುಗಳು, ಗುಹಾವರ್ಣ ಚಿತ್ರಗಳು ಆಭರಣಗಳು, ಇತ್ಯಾದಿ ಅವಶೇಷಗಳು ಈ ಕಾಲದ ಇತಿಹಾಸ ರಚನೆಗೆ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಈ ಪ್ರದೇಶದಲ್ಲಿ ಹಲವಾರು ವಿದ್ವಾಂಸರು ನಡೆಸಿರುವಂತಹ ಸಂಶೋದನಾ ಕಾರ್ಯ ಮತ್ತು ಭೂ ಉತ್ಖನನಗಳಲ್ಲಿ ದೊರೆತ ವಿವಿದ ರೀತಿಯ ಅವಶೇಷಗಳು ಈ ಪ್ರದೇಶದ ಪ್ರಾಗಿತಿಹಾಸಕಾಲದ ಮಹತ್ವವನ್ನು ಸಾರಿವೆ.

ದಕ್ಷಿಣ ಭಾರತದ ಪ್ರಾಗಿತಿಹಾಸ ಅಧ್ಯಯನಕ್ಕೆ ಬದ್ರ ಬುನಾದಿಯನ್ನು ಹಾಕಿದ ಪ್ರಸಿದ್ಧ ಭೂಗರ್ಭ ಶಾಸ್ತ್ರಜ್ಞರಾದ ರಾಬರ್ಟ್ ಬ್ರೂಸ್ ಫೂಟ್‌ರವರಿಗೆ ಸಲ್ಲುತ್ತದೆ. ಅವರು ೧೮೬೦ರ ದಶಕದಲ್ಲಿ ಈ ಪ್ರದೇಶದಲ್ಲಿ ಸಂಚರಿಸಿ ಅನೇಕ ಪ್ರಾಚ್ಯಾವಶೇಷಗಳನ್ನು ಪತ್ತೆಹಚ್ಚಿದರು.[೨] ಚಿತ್ರದುರ್ಗ ಜಿಲ್ಲೆಯಲ್ಲಿ ಹೊಳಲ್ಕೆರೆ ತಾಲ್ಲೂಕಿನ ತಾಳ್ಯ, ಹೊಸದುರ್ಗ ತಾಲ್ಲೂಕಿನ ಜಾನಕಲ್ಲುಗಳಲ್ಲಿ ಹಳೆಯ ಶಿಲಾಯುಗಕ್ಕೆ ಸಂಬಂದಿಸಿದ ಅನೇಕ ಶಿಲಾಯುಗಗಳು ದೊರಿತಿವೆ. ಈ ಪ್ರದೇಶ ಹಳೇ ಶಿಲಾಯುಗದ ಮಾನವನ ವಸತಿ ನಿವೇಶನವಾಗಿತ್ತು ಎನ್ನುವುದು ಇವುಗಳಿಂದ ತಿಳಿದುಬರುತ್ತದೆ.[೩]

ಇದೇ ರೀತಿಯಾಗಿ ಕೆ.ಆರ್. ನರಸಿಂಹಾಚಾರ್, ಎಂ.ಹೆಚ್.ಕೃಷ್ಣ, ಬಿ.ಎಲ್.ರೈಸ್, ಹಾಗೂ ಇನ್ನು ಹಲವಾರು ವಿದ್ವಾಂಸರು ಈ ಪ್ರದೇಶದಲ್ಲಿ ಅನೇಕ ಬಾರಿ ಭೂ ಸರ್ವೇಕ್ಷಣೆ ನಡೆಸಿದ್ದಾರೆ. ಇದರ ಪಲವಾಗಿ ಚಂದ್ರವಳ್ಳಿ, ಬ್ರಹ್ಮಗಿರಿ, ಇನ್ನಿತರ ಪ್ರಮುಖ ನೆಲೆಗಳು ಬೆಳಕಿಗೆ ಬಂದಿವೆ. ಈ ನೆಲೆಗಳಲ್ಲಿ ದೊರೆತ ಅವಶೇಷಗಳ ಸಹಾಯದಿಂದ ಈ ಪ್ರದೇಶವು ಸೂಕ್ಷ್ಮ ಶಿಲಾಯುಗ ಅಥವಾ ಸ್ಥಿತ್ಯಂತರ ಯುಗ, ನೂತನ ಶಿಲಾಯುಗ, ಬೃಹತ್ ಶಿಲಾಯುಗದಿಂದ ಹಿಡಿದು ಇತಿಹಾಸ ಪ್ರಾರಂಭದ ಕಾಲದವರೆಗೆ ಮಾನವನ ವಸತಿ ನೆಲೆಯಾಗಿತ್ತು ಎಂದು ಹೇಳಲಾಗಿದೆ.[೪]

ಈ ಪ್ರದೇಶದಲ್ಲಿ ಇತ್ತೀಚೆಗೆ ನಡೆದಿರುವ ಸಂಶೋದನೆಗಳ ಪಲವಾಗಿ ಎಲ್ಲಾ ತಾಲ್ಲೂಕುಗಳಲ್ಲಿಯೂ ಸಹ ಪ್ರಾಗಿತಿಹಾಸ ಕಾಲದ ವಸತಿ ನೆಲೆಗಳು ಪತ್ತೆಯಾಗಿವೆ. ಈ ಕಾಲದ ಮಾನವ ವಿಕಸನದ ಹಂತವನ್ನು ಗುರುತಿಸಿ ಶಿಲಾಯುಗವನ್ನು ವಿಭಾಗಗಳಾಗಿ ವಿಂಗಡಿಸಿ ಆಯಾ ಕಾಲಘಟ್ಟಗಳಲ್ಲಿ ಆಯುಧಗಳ ತಯಾರಿಕಾ ವಿಧಾನ ಹಾಗೂ ಅವುಗಳ ಸ್ವರೂಪವನ್ನು ಅರಿಯಾಲಾಗಿದೆ. ಶಿಲಾಯುಗಕ್ಕೆ ಸಂಬಂದಿಸಿದಂತೆ ತಾಳ್ಯ, ಹೋಳಲ್ಕೆರೆ, ಜಾನ್‌ಕಲ್ಲು, ತಕ್ಕನಹಳ್ಳಿ, ಹಾಗೆಯೇ ಮಧ್ಯಶಿಲಾಯುಗಕ್ಕೆ ಸಂಬಂದಿಸಿದಂತೆ ನುಂಕಿಮಲೆ, ಬ್ರಹ್ಮಗಿರಿ,ಹಳೆಕೆರೆ (ಮೊಳಕಾಲ್ಮೂರು) ಬೆನಕನಹಳ್ಳಿ, ಇತ್ಯಾದಿ ನೆಲೆಗಳು ಈ ಪರಿಸರದ

ಸುತ್ತಮುತ್ತಲಿನಲ್ಲಿ ಪರಶುರಾಂಪುರ, ನವಶಿಲಾಯುಗದ,[೫] ಮಹದೇವಪುರ, ದೊಡ್ಡೇರಿ, ಚಿಕ್ಕಮದುರೆ, ಪ್ರದೇಶಗಳಲ್ಲಿ ಬೃಹತ್‌ಶಿಲಾಯುಗದ ಸಂಸ್ಕೃತಿಯ ಉಪಕರಣಗಳು ದೊರೆತಿದ್ದು ಆದಿ ಮಾನವನ ವಸತಿ ನೆಲೆಯಾಗಿದ್ದಿತೆಂದು ಹೇಳಬಹುದು.[೬]

### ೩.೨. ಇತಿಹಾಸ ಕಾಲ

ಮಾನವನ ವಿಕಸನದ ಹಂತದಲ್ಲಿ ಅಕ್ಷರಗಳ ಆವಿಷ್ಕಾರ ಬಹು ಮುಖ್ಯವಾದ ಹಂತವಾಗಿದೆ. ಅಕ್ಷರಗಳನ್ನು ಕಂಡುಹಿಡಿದ ನಂತರದ ಕಾಲವನ್ನು ಇತಿಹಾಸಕಾಲವೆನ್ನಬಹುದು. ಶಾಸನಗಳು ದೊರೆಯುವ ಕಾಲದಿಂದ ಅಂದರೆ ಮೌರ್ಯರ ನಂತರದ ಕಾಲವನ್ನು ಇತಿಹಾಸಕಾಲ ಎಂದು ಕರೆಯಲಾಗುತ್ತದೆ. ಚಿತ್ರದುರ್ಗ ಜಿಲ್ಲೆಯು ಇತಿಹಾಸಕಾಲ ಹಾಗು ಇತಿಹಾಸ ಪೂರ್ವಕಾಲದ ಅನೇಕ ಕುರುಹುಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನ ಪ್ರದೇಶದ ಇತಿಹಾಸಕಾಲವನ್ನು ಸಂಕ್ಷಿಪ್ತವಾಗಿ ಈ ಮುಂದಿನತೆ ನೋಡಬಹುದು.

#### ಮೌರ್ಯರು

ಕರ್ನಾಟಕದ ಬಹುಭಾಗ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದಿತು. ಉತ್ತರ ಮತ್ತು ದಕ್ಷಿಣ ಭಾರತ ಪ್ರದೇಶವು ವಿಂಧ್ಯ ಪರ್ವತಶ್ರೇಣಿಗಳಿಂದ ಪ್ರತ್ಯೇಕಿಸಿದರೂ ಔತ್ತರೇಯರು ಈ ಗಡಿಗಳನ್ನು ದಾಟಿ ಬಂದು ತಮ್ಮ ರಾಜ್ಯಗಳನ್ನು ಇಲ್ಲಿಯವರೆಗೂ ವಿಸ್ತರಿಸಿದರು. ಕ್ರಿ.ಶ.ಪೂ ನಾಲ್ಕನೆಯ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯ ಸ್ಥಾಪನೆಯಾಗುವ ಮೊದಲೇ ಉತ್ತರದ ಸಾಮ್ರಾಜ್ಯ ಸ್ಥಾಪಕರು ದಕ್ಷಿಣ ಭಾರತದ ಅನೇಕ ಪ್ರದೇಶಗಳನ್ನು ಗೆದ್ದುಕೊಂಡು ತಮ್ಮ ಆಳ್ವಿಕೆಯನ್ನು ವಿಸ್ತರಿಸಿದರು. ಮೌರ್ಯರಿಗಿಂತ ಮೊದಲು ನಂದರು, ಶೈಶೂನಾಗರು ಕರ್ನಾಟಕದ ಸುತ್ತಮುತ್ತಲಿನ ಕೆಲವು ಭಾಗಗಳನ್ನು ಆಳಿದ್ದುದಕ್ಕೆ ಆಧಾರಗಳಿವೆ. ಚಿತ್ರದುರ್ಗ ಸುತ್ತಮುತ್ತಲಿನ ಪ್ರದೇಶವು ಸಹ ಕ್ರಿಸ್ತ.ಪೂರ್ವ ೬ನೇ ಶತಮಾನದಲ್ಲಿ ಔತ್ತರೇಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಲಾಗಿದೆ. ನಂದರ ಉತ್ತರಾಧಿಕಾರಿಗಳಾದ ಮೌರ್ಯರೂ ಸಹ ಈ ಭಾಗದಲ್ಲಿ ನಂದರ ನಂತರ ಒಡೆಯರಾದರು ಎಂದು ಹೇಳಬಹುದು.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ದೊರೆತಿರುವಂತಹ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಅಶೋಕನ ಎರಡು ಮತ್ತು ಹದಿಮೂರನೆಯ ಶಾಸನಗಳು ದಕ್ಷಿಣ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತವೆ. ಅವುಗಳು ಬ್ರಹ್ಮಗಿರಿಯ ಸಿದ್ಧಾಪುರ, ಜಟಿಂಗ ರಾಮೇಶ್ವರದಲ್ಲಿ ಮೌರ್ಯ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ ಎನ್ನುವುದು ಚರಿತ್ರೆಕಾರರ ಅಭಿಪ್ರಾಯವಾಗಿದೆ. ಇತ್ತೀಚೆಗೆ ನಡೆದ ಸಂಶೋಧನೆಗಳಿಂದ ಮೌರ್ಯ ಸಾಮ್ರಾಜ್ಯವು

ಮೊಳಕಾಲ್ಮುರು ತಾಲ್ಲೂಕಿನ ಕೆಲವು ಭಾಗಗಳಲ್ಲದೆ ಜಿಲ್ಲೆಯ ಪೂರ್ಣ ಭಾಗವನ್ನು ಒಳಗೊಂಡಿದ್ದಾಗಿ ತಿಳಿದು ಕೊಳ್ಳಬಹುದಾಗಿದೆ. ಇದರಿಂದ ಪ್ರಸ್ತುತ ಅಧ್ಯಯನ ಪ್ರದೇಶವಾದ ಹಿರಿಯೂರು ತಾಲ್ಲೂಕಿನ ಧರ್ಮಪುರವು ಸಹ ಮೌರ್ಯ ಸಾಮ್ರಾಜ್ಯದಲ್ಲಿತ್ತು.[೭] ಚಿತ್ರದುರ್ಗ ಜಿಲ್ಲೆಯ ಅನೇಕ ಭಾಗಗಳಲ್ಲಿ ಸಿಕ್ಕಿರುವ ಆಧಾರಗಳಿಂದ ಮೌರ್ಯ ಸಾಮ್ರಾಜ್ಯವು ೧೨ ಅಕ್ಷಾಂಶಕ್ಕೆ ಸೀಮಿತವಾಗಿರದೆ ೧೪ ಅಕ್ಷಾಂಶದವರೆಗೂ ವಿಸ್ತರಿಸುತ್ತೆಂಬುದಾಗಿ ತಿಳಿದುಬಂದಿದೆ. ಬ್ರಹ್ಮಗಿರಿಯ ಸಮೀಪದಲ್ಲಿ ಇಟ್ಟಿಗೆಯ ಕಟ್ಟಡ, ಚೈತ್ಯಾಲಯ ಮತ್ತು ಮೌರ್ಯರ ಕಾಲದ ಅನೇಕ ಅವಶೇಷಗಳು ದೊರೆತಿವೆ. ಇಸಿಲ ನಗರವು ಇಲ್ಲೇ ಇದ್ದ ನಗರವೆಂಬುದಕ್ಕೆ ಪ್ರಮುಖ ಆಧಾರಗಳು ಈ ಪ್ರದೇಶದಲ್ಲಿ ದೊರೆತ ಅವಶೇಷಗಳು ಅಶೋಕನ ಕಾಲಕ್ಕೆ ಸೇರಿದ್ದವು ಎನ್ನುವುದು ಡಾ. ಎಂಹೆಚ್.ಕೃಷ್ಣ, ಮಾರ್ಟಿಮರ್ ವೀಲರ್ ಮೊದಲಾದ ಪ್ರಾಕ್ತನ ಶಾಸ್ತ್ರಜ್ಞರ ಅಭಿಪ್ರಾಯ. ಹಾಗೆಯೇ ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶವೂ ಸಹ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು ಅವರ ದಕ್ಷ ಆಡಳಿತ ಪದ್ಧತಿ ಮೌರ್ಯರ ಸಾಂಸ್ಕೃತಿಕ ಪರಂಪರೆಯ ವ್ಯಾಪ್ತಿಗೆ ಒಳಪಟ್ಟಿತ್ತು. ಚಿತ್ರದುರ್ಗದ ಸುತ್ತಲೂ ಬೌದ್ಧ ಧರ್ಮದ ಹಲವಾರು ಸ್ಮಾರಕಗಳು ದೊರೆತಿವೆ. ಈ ರೀತಿಯಲ್ಲಿ ಚಿತ್ರದುರ್ಗ ಹಾಗೂ ಸುತ್ತಮುತ್ತಲಿನ ಕೆಲವು ಪ್ರದೇಶಗಳಲ್ಲಿ ಮೌರ್ಯರ ಶಾಸನ ಮತ್ತಿತರರ ಅವಶೇಷಗಳು ದೊರೆತಿದ್ದು, ಮೌರ್ಯ ಸಾಮ್ರಾಜ್ಯದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆ ಈ ಭಾಗದಲ್ಲಿ ಮುಂದುವರೆದಿತ್ತೆಂದು ಹೇಳಬಹುದು.

**ಶಾತವಾಹನರು**

ಕರ್ನಾಟಕದ ಚಾರಿತ್ರಿಕ ಯುಗದಲ್ಲಿ ಮೊಟ್ಟಮೊದಲಿಗೆ ಅಸ್ತಿತ್ವಕ್ಕೆ ಬಂದ ರಾಜ್ಯ ಮತ್ತು ಸಾಮ್ರಾಜ್ಯಗಳಲ್ಲಿ ಶಾತವಾಹನ ಸಾಮ್ರಾಜ್ಯ ಪ್ರಮುಖವಾದುದು. ಶಾತವಾಹನರು ಮೊದಲಿಗೆ ಮೌರ್ಯರ ಸಾಮಂತರಾಗಿದ್ದು ಅವರ ನಂತರ ದಕ್ಷಿಣ ಭಾರತದಲ್ಲಿ ಸ್ವತಂತ್ರರಾದರು. ಅವರ ಸಾಮ್ರಾಜ್ಯಗಳಲ್ಲಿ ಕರ್ನಾಟಕವು ಮೊದಲ ಭಾಗವಾಗಿದ್ದು ಅವರು ದಖನ್ನಿನಲ್ಲಿ ಮಾತ್ರವಲ್ಲದೆ ಉತ್ತರ ಭಾರತದ ಹಲವು ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿ ಉತ್ತರ ಭಾರತ ಮತ್ತು ದಕ್ಷಿಣ ಭಾರತವನ್ನು ಒಂದುಗೂಡಿಸಲು ಪ್ರಯತ್ನಿಸಿದರು. ಶಾತವಾಹನ ಆಳ್ವಿಕೆ ಬಗ್ಗೆ ಇತಿಹಾಸಕಾರರಲ್ಲಿ ವಿವಾದಗಳಿವೆ. ಆದರೂ ಸಹ ಸಾಮಾನ್ಯವಾಗಿ ಅವರು ಕ್ರಿ.ಪೂ.೨೩೫ ರಿಂದ ಕ್ರಿ.ಶ. ೨೧೫ ರವರೆಗೆ ಸುಮಾರು ೪೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದರೆಂದು ಹೆಳಲಾಗುತ್ತಿದೆ. ಅವರ ಸಾಮ್ರಾಜ್ಯ ಉತ್ತರದಲ್ಲಿ ಸಾಂಚಿಯಿಂದ ಹಿಡಿದು ದಕ್ಷಿಣದಲ್ಲಿ ಕೊಂಕಣದವರೆಗೆ ಮತ್ತು ಪೂರ್ವ ಪಶ್ಚಿಮಗಳ ಸಮುದ್ರದವರೆಗೂ ವಿಸ್ತರಿಸಿತ್ತು ಎನ್ನಲಾಗಿದೆ. ಶಾತವಾಹನ ಸಂತತಿಯಲ್ಲಿ ಗೌತಮಿ ಪುತ್ರ ಶಾತಕರ್ಣಿ, ವಾಶಿಷ್ಟ ಪುತ್ರ ಯಜ್ಞಶ್ರೀ ಶಾತಕರ್ಣಿ ಮುಂತಾದವರು ಪ್ರಖ್ಯಾತ ದೊರೆಗಳು ಸಾಮ್ರಾಜ್ಯದ ಪ್ರಗತಿ ಮತ್ತು

ವಿಖ್ಯಾತಿಗೆ ಕಾರಣರಾದವರು. ಇವರ ಆಳ್ವಿಕೆಯ ಕಾಲದಲ್ಲಿ ಪಾಶ್ಚಿಮಾತ್ಯ ರಾಜ್ಯಗಳೊಂದಿಗೆ ವ್ಯಾಪಾರ ಮತ್ತು ವಾಣಿಜ್ಯಗಳು ಅಭಿವೃದ್ಧಿ ಪಡೆದು ದೇಶವು ಸಂಪದ್ಭರಿತವಾಗಿತ್ತು. ಶಾತವಾಹನರು ವೈದಿಕ ಧರ್ಮದ ಅನುಯಾಯಿಗಳಾಗಿದ್ದರೂ ಬೌದ್ಧಧರ್ಮಕ್ಕೆ ಪ್ರಮುಖ ಸ್ಥಾನ ನೀಡಿದ್ದರು. ಈ ಕಾಲದಲ್ಲಿ ಕಲೆಯ ಚಟುವಟಿಕೆಗಳು ಪ್ರಗತಿದಾಯಕವಾಗಿದ್ದು ಬೌದ್ಧ ಕಲೆಯ ತನ್ನ ಅತ್ಯುನ್ನತ್ತಿಯನ್ನು ಮುಟ್ಟಿತು. ಶಾತವಾಹನರು ಕ್ರಿ.ಶ.೭೮೦ ರಲ್ಲಿ ಶಕ ಸಂವತ್ಸರವನ್ನು ಆರಂಭಿಸಿ ಎಲ್ಲಾ ವಲಯಗಳಲ್ಲಿ ಹೊಸ ಶಕೆಗೆ ನಾಂದಿಯನ್ನು ಹಾಡಿದರು.

ಚಿತ್ರದುರ್ಗ ಜಿಲ್ಲೆಯ ರಾಜಕೀಯ ಇತಿಹಾಸವನ್ನು ಕ್ರಿ.ಪೂ.೩ನೇ ಶತಮಾನದಿಂದಲೂ ಗುರುತಿಸಬಹುದು. ಕರ್ನಾಟಕದ ಪ್ರಮುಖ ರಾಜ ವಂಶದವರಾದ ಶಾತವಾಹನರು ತಮ್ಮನ್ನು ಕುಂತಳ ಸ್ವಾಮಿಗಳೆಂದು ಕರೆದುಕೊಂಡಿದ್ದುಂಟು. ಈ ರಾಜ ವಂಶದ ೩೦ ಮಂದಿ ದೊರೆಗಳ ಬಗೆಗೆ ದೊರೆತಿರುವ ಶಾಸನಗಳು ೩೦ಕ್ಕಿಂತಲೂ ಹೆಚ್ಚಿರಬಹುದು. ಆದರೆ ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಶಾತವಾಹನರ ಯಾವುದೇ ಶಾಸನಗಳು, ಶಿಲ್ಪಗಳು ಸಿಕ್ಕಿಲ್ಲ. ಆದರೂ ಬ್ರಹ್ಮಗಿರಿ, ಚಂದ್ರವಳ್ಳಿಗಳಲ್ಲಿ ಇದುವರೆಗೂ ಸಿಕ್ಕಿರುವಂತಹ ಪುರಾತತ್ವ ಅವಶೇಷಗಳನ್ನು, ಹಾಗೂ ನಾಣ್ಯಗಳನ್ನು ಆಧರಿಸಿ ಶಾತವಾಹನರ ಆಳ್ವಿಕೆ ಈ ಪ್ರದೇಶದ ಸುತ್ತಮುತ್ತಲೂ ಸಹ ಇದ್ದಿರಬೇಕು ಎಂದು ತಿಳಿಯುವ ಪ್ರಯತ್ನ ಮಾಡಬಹುದಾಗಿದೆ.[೮]

ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ದೊರೆತ ಉತ್ತಮ ಜಾತಿಯ ಜಾಸ್ಪರ್, ಕಾರ್ನೇಲಿಯನ್, ಆಗೇಟ್ ಮುಂತಾದ ಶಿಲೆಗಳು, ಮಣಿಗಳು, ದಂಥ, ಶಂಖ ಸುಟ್ಟಮಣ್ಣಿನ, ಗಾಜಿನ ನಾನಾ ಬಗೆಯ ಮಣಿಗಳು ಶಾತವಾಹನರ ಸಾಮಾಜಿಕ ಸಂಸ್ಕೃತಿಗೆ ಹಿಡಿದ ಕನ್ನಡಿಯಂತಿವೆ. ಆ ಕಾಲದಲ್ಲಿ ವ್ಯಾಪಾರ ವಾಣಿಜ್ಯಗಳಲ್ಲಿ ನಾಣ್ಯ ಚಲಾವಣೆಯಲ್ಲಿತ್ತೆನ್ನುವುದು ಸ್ಪಷ್ಟವಾಗಿದೆ. ಚಂದ್ರವಳ್ಳಿ ಉತ್ಖನನದಲ್ಲಿ ಎಂ.ಹೆಚ್.ಕೃಷ್ಣರವರಿಗೆ ಮೂವತ್ತಕ್ಕೂ ಹೆಚ್ಚು ನಾಣ್ಯಗಳು ದೊರೆತಿವೆ.[೯] ಬೆಳ್ಳಿ, ಸೀಸ, ತಾಮ್ರ, ತವರ, ಮತ್ತು ಮಿಶ್ರಿತ ಲೋಹ ಮುಂತಾದವುಗಳಲ್ಲಿ ಟಂಕಿಸಿದ ನಾಣ್ಯಗಳು ಈ ಭಾಗದಲ್ಲಿ ಆಳ್ವಿಕೆ ಮಾಡಿದ ಶಾತವಾಹನರ ಆರ್ಥಿಕ ಸ್ಥಿತಿಗತಿಯನ್ನು ಸೂಚಿಸುತ್ತವೆ. ಅವರ ಮಾಂಡಲೀಕರ ನಾಣ್ಯಗಳು ದೊರಕಿರುವುದರಿಂದ ಶಾತವಾಹನರ ಪೂರ್ವದಲ್ಲಿ ಅವರು ಈ ಭಾಗದಲ್ಲಿ ಆಳ್ವಿಕೆ ನಡೆಸಿದರೆಂದು ತಿಳಿದುಕೊಳ್ಳಲು ಆಧಾರಗಳು ದೊರೆತು ಸಹಾಯಕವಾಗಿವೆ.[೧೦]

ಚಿತ್ರದುರ್ಗ ಜಿಲ್ಲೆಯಲ್ಲಿ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕೈಗೊಂಡ ಉತ್ಖನನದಿಂದ ವಾಶಿಷ್ಠ ಪುತ್ರ ಶ್ರೀ ಪುಳುಮಾವಿ, ಮತ್ತು ಯಜ್ಞ ಶ್ರೀಶಾತಕರ್ಣಿ ಎಂಬ ಶಾತವಾಹನ ಅರಸರ ಹೆಸರುಗಳು ಮತ್ತು ಅವರ ಕಾಲಮಾನವು ಸ್ಪಷ್ಟವಾಗಿ ತಿಳಿದು ಬಂದಿದೆ. ಅಲ್ಲದೆ "ಸದಕಣ ಚುಟುಕನ ಮಹಾರತಿ" ಎಂಬ ಮಾಂಡಲಿಕರ ಹೆಸರುಗಳು ಮೊದಲಬಾರಿಗೆ

ಬೆಳಕಿಗೆ ಬಂದಿವೆ. ಇವರು ಬೌದ್ಧರಾಗಿದ್ದರೆಂದು ಅವರು ಟಂಕಿಸಿದ ನಾಣ್ಯಗಳಿಂದ ತಿಳಿದುಬರುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಚಿತ್ರದುರ್ಗ ಜಿಲ್ಲೆಯ ಹಾಗೂ ಪ್ರಸ್ತುತ ಅಧ್ಯಯನ ಪ್ರದೇಶದ ಸುತ್ತಮುತ್ತಲಿನಲ್ಲಿ ಶಾತವಾಹನರ ಆಳ್ವಿಕೆ ಇದ್ದಿತ್ತೆಂದು ಹೇಳಬಹುದು. ಕ್ರಿ.ಶ. ಸುಮಾರು ೨೦೦ರ ತರುವಾಯ ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತಿರುವುದರಿಂದ ಬಹುಷಃ ಚಂದ್ರವಳ್ಳಿ ಅವರ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ಹೇಳಬಹುದು. ಹಾಗೆಯೇ ಪ್ರಸ್ತುತ ಅಧ್ಯಯನ ಪ್ರದೇಶವಾದ ಧರ್ಮಪುರ ಪರಿಸರದಲ್ಲಿ ಶಾತವಾಹನರ ಶಾಸನಗಳು ಅಥವಾ ಯಾವುದೇ ರೀತಿಯ ಕುರುಹುಗಳು ಸಿಗದೇ ಇದ್ದರೂ ಸಹ ಚಿತ್ರದುರ್ಗ ಸುತ್ತಮುತ್ತಲಿನಲ್ಲಿ ಇವರ ಕುರುಹುಗಳು ದೊರೆತಿರುವುದರಿಂದ ಪ್ರಾಯಶಃ ಈ ಪ್ರದೇಶವೂ ಸಹ ಇವರ ಆಳ್ವಿಕೆಗೆ ಒಳಪಟ್ಟಿರಬಹುದು ಎಂದು ಹೇಳಬಹುದು.

**ಕದಂಬರು**

ಪ್ರಸ್ತುತ ಅಧ್ಯಯನ ಪ್ರದೇಶವು ಶಾತವಾಹನ ಹಾಗೂ ಚುಟು ಅರಸರ ನಂತರ ಕದಂಬರ ಆಳ್ವಿಕೆಗೆ ಒಳಪಟ್ಟಿದ್ದನ್ನು ಕಾಣುತ್ತೇವೆ. ಶಾತವಾಹನರ ಪತನದ ನಂತರ ಅವರ ಸಾಮ್ರಾಜ್ಯವು ಅನೇಕ ಚಿಕ್ಕಪುಟ್ಟ ಆಡಳಿತ ವಿಭಾಗಗಳಲ್ಲಿ ಹರಿದು ಹೋಯಿತು. ವಾಯುವ್ಯದಲ್ಲಿ ಅಭೀರರು ಮತ್ತು ತ್ರೈಕೂಟರು, ಪೂರ್ವದಲ್ಲಿ ರಾಷ್ಟ್ರಕೂಟರು, ಚುಟುಗಳು ಹಾಗೂ ನಾಗರಸರು, ದಕ್ಷಿಣದಲ್ಲಿ ಕದಂಬರು ಮತ್ತು ಪಲ್ಲವರು ಏಳಿಗೆಗೆ ಬಂದರು. ಹೀಗೆ ಶಾತವಾಹನರ ನಂತರ ಪ್ರಸ್ತುತ ಅಧ್ಯಯನ ಪ್ರದೇಶವು ಸಹ ಕದಂಬರ ಆಳ್ವಿಕೆಗೆ ಒಳಪಟ್ಟಿದ್ದನ್ನು ನೋಡಬಹುದು. ವೈಜಯಂತಿಪುರ ಅಥವಾ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಕದಂಬರು ಉತ್ತರ ಕನ್ನಡ, ಧಾರವಾಡ, ಹಾವೇರಿ, ಬೆಳಗಾಂ, ದಾವಣಗೆರೆ ಹಾಗೂ ಚಿತ್ರದುರ್ಗದ ಸುತ್ತಮುತ್ತಲಿನ ಭೂಪ್ರದೇಶವನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿದ್ದರು. ಧರ್ಮಪುರ ಪರಿಸರದಲ್ಲಿ ಕದಂಬರಿಗೆ ಸಂಬಂದಿಸಿದಂತಹ ಶಾಸನಗಳು ದೊರೆಯದೇ ಇದ್ದರೂ ಸಹ ಅವರ ಕಾಲದ ಪ್ರಮುಖ ಸಂಗತಿಗಳನ್ನು ತಿಳಿಸುವ ಕುರುಹುಗಳು ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿರುವ ಕೆಲವೇ ಶಾಸನಗಳಿಂದ ತಿಳಿಯಬಹುದಾಗಿದೆ.

ಕದಂಬರ ರಾಜ್ಯ ಸ್ಥಾಪಕನಾದ ಮಯೂರಶರ್ಮನ ಏಕೈಕ ಶಿಲಾಶಾಸನ ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ದೊರೆತಿದೆ. ಈ ಶಾಸನವನ್ನು ಕುರಿತು ಅಧ್ಯಯನ ನಡೆಸಿದ ಡಾ.ಎಂ.ಎಚ್. ಕೃಷ್ಣರವರು ಶಾಸನದ ಭಾಷೆ ಪ್ರಾಕೃತ ಎಂದು, ಇದರ ಕಾಲಮಾನ ಕ್ರಿ.ಶ. ೨೫೮ ಎಂದು ನಿರ್ಧರಿಸಿದ್ದಾರೆ. ಮೂರು ಸಾಲುಗಳಲ್ಲಿರುವ ಈ ಶಾಸನವು ಈ ಪ್ರದೇಶದಲ್ಲಿ ಒಂದು

ಕೆರೆಯನ್ನು ನಿರ್ಮಿಸಿದ್ದು ಹಾಗೂ ಅನೇಕ ದಿಗ್ವಿಜಯಗಳನ್ನು ತಿಳಿಸುತ್ತದೆ. ತ್ರೈಕೂಟ, ಅಭೀರ, ಪಲ್ಲವ, ಪಾರಿಯಾತ್ರಿಕ, ಶಕಸ್ತಾನ ಸೈಯಿಂದಕ ಪುಣಾಟ ಹಾಗೂ ಮೋಕರರೀಣ. ಹೀಗೆ ಪಶ್ಚಿಮ ಭಾರತದ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದನೆಂದು ಡಾ.ಎಂ.ಎಚ್. ಕೃಷ್ಣರವರು ಅಭಿಪ್ರಾಯಪಟ್ಟಿದ್ದಾರೆ.[೧೧] ನಂತರ ಈ ಶಾಸನದ ಕಾಲ, ಭಾಷೆ, ಮತ್ತು ಇದರ ವಸ್ತು ವಿಷಯವನ್ನು ಕುರಿತಂತೆ ಅನೇಕ ವಿದ್ವಾಂಸರು ಅಧ್ಯಯನ ನಡೆಸಿ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಸ್ಥಳೀಯ ಸಂಶೋಧಕರಾದ ಡಾ.ಬಿ. ರಾಜಶೇಖರಪ್ಪನವರು ಪುನರ್ ಅಧ್ಯಯನ ನೆಡೆಸಿ ಹಲವಾರು ಹೊಸ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಮಯೂರಶರ್ಮನು ಈ ಕಾಲಕ್ಕೆ ಮಯೂರವರ್ಮನಾಗಿರಲಿಲ್ಲವೆಂದು ಶಾಸನದ ಭಾಷೆ ಪ್ರೌಢಸಂಸ್ಕೃತ ಹಾಗೂ ಶಾಸನದ ಮೂಲ ಉದ್ದೇಶ ಇಲ್ಲಿನ ಕೆರೆಯನ್ನು ಮತ್ತಷ್ಟು ಬಲಪಡಿಸಿದನೆನ್ನುವುದಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ರೀತಿಯಾಗಿ ಪ್ರಸ್ತುತ ಶಾಸನದ ಮರುಪರಿಶೀಲನೆಯಿಂದ ಅವರು ಮಯೂರಶರ್ಮನು ಆಗಲೇ ಇದ್ದ ಕೆರೆಯೊಂದನ್ನು ದುರಸ್ಥಿ ಪಡಿಸಿ ಬಲಪಡಿಸಿದ್ದನ್ನು ಹಾಗೂ ಇಲ್ಲಿ ಕಾಡಿನ ವಾಸದ ನೆಲೆಯೊಂದನ್ನು ಮಾಡಿಕೊಂಡಿದ್ದುದನ್ನು ತಿಳಿಸಿದ್ದಾರೆ. ಆದರೆ ಆತನ ಯಾವುದೇ ದಿಗ್ವಿಜಯಗಳ ವಿಷಯಗಳು ಶಾಸನಗಳಲ್ಲಿ. ಮತ್ತು ಶಾಸನಗಳ ಕೊನೆಯಲ್ಲಿರುವಂತಹ ಕುವಣಚಮೊ ಪದವು ಸಹ ಶಾಸನದ ಲಿಪಿಕಾರನಿರಬೇಕೆಂದು ಅವರ ಅಭಿಪ್ರಾಯ.[೧೨]

ಈ ಪ್ರದೇಶದ ಸುತ್ತಮುತ್ತಲಿನಲ್ಲಿ ಮೂಲ ಕದಂಬರಿಗೆ ಸಂಬಂಧಿಸಿದ ವಿವರಗಳನ್ನು ತಿಳಿಸುವ ಶಾಸನಗಳು ವಿರಳವಾದರೂ ಅವರ ಶಾಖೆಗಳನ್ನು ಕುರಿತಂತೆ ವಿವರ ನೀಡುವ ಮತ್ತಷ್ಟು ಶಾಸನಗಳು ಕಂಡುಬಂದಿವೆ.

**ಬದಾಮಿ ಚಾಲುಕ್ಯರು**

ಈ ಪ್ರದೇಶದಲ್ಲಿ ನೇರವಾಗಿ ಬದಾಮಿ ಚಾಲುಕ್ಯರಿಗೆ ಸಂಬಂಧಿಸಿದ ಶಾಸನಗಳು ದೊರೆಯದೇ ಹೋದರೂ ಪರೋಕ್ಷವಾಗಿ ಅವರ ರಾಜಕೀಯ ಪ್ರಭಾವ ಈ ಪ್ರದೇಶದ ಮೇಲಿದ್ದಿತು. ಇದರಿಂದಾಗಿ ಈ ಪ್ರದೇಶವೂ ಸಹ ಕದಂಬ ಚಾಲುಕ್ಯರ ಸಾಂಸ್ಕೃತಿಕ ಪ್ರದೇಶವಾಗಿತ್ತು ಎಂದು ಹೇಳಬಹುದು. ಕ್ರಿ.ಶ. ೬ನೇ ಶತಮಾನದ ಆದಿಭಾಗದಿಂದ ಕ್ರಿ.ಶ.೭೫೭ರವರೆಗೆ ಆಳ್ವಿಕೆ ನಡೆಸಿದ ಇವರು ಕರ್ನಾಟಕ ಇತಿಹಾಸಕ್ಕೆ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ತರವಾದ ಕಾಣಿಕೆಗಳನ್ನು ನೀಡಿದ್ದಾರೆ. ಇದೇ ಸಂಧರ್ಭದಲ್ಲಿ ದಕ್ಷಿಣದಲ್ಲಿ ಏಳಿಗೆಗೆ ಬಂದ ಕಂಚಿಯ ಪಲ್ಲವರಿಗೂ, ಮಧುರೆಯ ಪಾಂಡ್ಯರಿಗೂ ಬದಾಮಿ ಚಾಲುಕ್ಯರಿಗೂ ಆಗಾಗ ಘರ್ಷಣೆಗಳೂ ಸಂಭವಿಸಿದ್ದು, ಪಲ್ಲವರಿಗೂ ಮತ್ತು ಬದಾಮಿ ಚಾಲುಕ್ಯರಿಗೂ ಗಡಿಭಾಗದಲ್ಲಿದ್ದ ಈ ಪ್ರದೇಶವು ಅವರೀರ್ವರ ಕಾಳಗದ ಭೂಪ್ರದೇಶವಾಗಿತ್ತು.

ಕಾಲಘಟ್ಟದ ರಾಜಕೀಯ ಪರಿಸ್ಥಿತಿಯಲ್ಲಿ ಧರ್ಮಪುರ ಪ್ರದೇಶದಲ್ಲಿರುವ ಹೆಂಜೇರುವಿನ ನೊಳಂಬರು, ಉಚ್ಚಂಗಿಯ ಪಾಂಡ್ಯರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಈ ಕಾಲದ ಕೆಲವು ಶಾಸನಗಳಲ್ಲಿ ಕದಂಬಾಳಿಗೆ, ನೊಣಂಬಾಳಿಗೆ ಎಂದೂ ಸಹ ಈ ಪ್ರದೇಶವನ್ನು ಹೆಸರಿಸಲಾಗಿದೆ.[೧೩]

ಇಮ್ಮಡಿಯಪುಲಿಕೇಶಿಯ ಕಾಲಕ್ಕೆ ಈ ಭಾಗವು ಆತನ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದರ ಬಗ್ಗೆ ದಾವಣಗೆರೆ ತಾಲ್ಲೂಕಿನ ನಲ್ಕುಂದ ಗ್ರಾಮದಲ್ಲಿ ದೊರೆತಿರುವ ತಾಮ್ರದ ಶಾಸನವೊಂದು ಬೆಳಕನ್ನು ಚೆಲ್ಲುತ್ತದೆ. ಅಭಿನವಾದಿತ್ಯನ ಶಾಸನವೆಂದೇ ಪ್ರಸಿದ್ಧವಾದ ಈ ಶಾಸನದಲ್ಲಿ ನಲ್ಕುಂದ ಗ್ರಾಮವನ್ನು ನಲ್ಲಿಕುಡಿ ಎಂದು ಹೆಸರಿಸಲಾಗಿದೆ. ಉಚ್ಚಂಗಿ ಪರಿಸರದಲ್ಲಿರುವ ಈ ಶಾಸನವು ದಾನಶಾಸನವಾಗಿದ್ದು ಇಲ್ಲಿನ ಕುಪ್ಪಶರ್ಮನೆಂಬ ಬ್ರಾಹ್ಮಣನಿಗೆ ದಾನ ನೀಡಿದ ವಿವರಗಳನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಅಭಿನವಾದಿತ್ಯನು ತನ್ನನ್ನು ಸತ್ಯಾಶ್ರಯ ಮತ್ತು ಪರಮೇಶ್ವರ ಎಂಬುದಾಗಿ ಪೃಥ್ವಿ ವಲ್ಲಭ, ಮಹಾರಾಜಾಧಿರಾಜ ಎಂದೂ ಸಹ ಕರೆದುಕೊಂಡಿದ್ದಾನೆ. ಇದರಿಂದಾಗಿ ಈತನು ಪುಲಿಕೇಶಿಯ ನಂತರ ಈ ಪ್ರದೇಶದಲ್ಲಿ ಆಳ್ವಿಕೆ ನೆಡೆಸಿದಂತೆ ತೋರುತ್ತದೆ. ಈ ಪ್ರದೇಶದಲ್ಲಿ ಸೂಗೂರು ಗ್ರಾಮದ ಪಟೇಲ ರುದ್ರಗೌಡರ ಬಳಿ ದೊರೆತ ತಾಮ್ರಶಾಸನ ಬದಾಮಿ ಚಾಲುಕ್ಯರ ಕಾಲಾವಧಿಯದಾಗಿದ್ದು ದಾನ ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ.[೧೪]

**ರಾಷ್ಟ್ರಕೂಟರು**

ಬದಾಮಿ ಚಾಲುಕ್ಯರ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರೂ ಸಹ ಬಲಿಷ್ಟ ರಾಜಮನೆತನದವರಾಗಿದ್ದಾರೆ. ಸುಮಾರು ೨ ಶತಮಾನಗಳ ಕಾಲ ವಿಶಾಲ ಸಾಮ್ರಾಜ್ಯವನ್ನಾಳಿದ ರಾಷ್ಟ್ರಕೂಟರು ಕರ್ನಾಟಕದ ಇತಿಹಾಸದಲ್ಲಿ ಮಹತ್ವರೆನಿಸಿದ್ದಾರೆ. ಇವರ ಸಾಮ್ರಾಜ್ಯ ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಾವೇರಿಯವರೆಗೂ, ಪಶ್ಚಿಮದಲ್ಲಿ ಅರಬ್ಬೀಸಮುದ್ರ ಮತ್ತು ಮಾಳವದಿಂದ ಪೂರ್ವದಲ್ಲಿ ಆಂಧ್ರಪ್ರದೇಶ, ವಾರಂಗಲ್ ಮತ್ತು ಕಡಪ ಜಿಲ್ಲೆಗಳವರೆಗೂ ವಿಸ್ತರಿಸಿಕೊಂಡಿತ್ತು ಎಂದು ಹೇಳಬಹುದಾಗಿದೆ. ಇಂತಹ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿ ಕನ್ನಡ ಸಂಸ್ಕೃತಿ ನಾಡು ನುಡಿಗಳಿಗೆ ರಾಷ್ಟ್ರಕೂಟರು ನೀಡಿದ ಕೊಡುಗೆ ಅಮೋಘವಾದುದಾಗಿದೆ. ಇವರು ಸಹ ಚಾಲುಕ್ಯರಂತೆ ಉತ್ತಮ ಹಾಗೂ ದಕ್ಷ ಆಡಳಿತಗಾರರಾಗಿದ್ದು ಚೋಳ, ಗಂಗ ಹಾಗೂ ನೊಳಂಬರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದು, ಕರ್ನಾಟಕದ ಸಂಸ್ಕೃತಿಗೆ ಪ್ರಮುಖ ಕೊಡುಗೆಗಳನ್ನು ನೀಡಿದ್ದಾರೆ. ಪ್ರಸ್ತುತ ಪ್ರದೇಶದಲ್ಲಿ ಇವರ ಶಾಸನಗಳು ದೊರೆಯದಿದ್ದರೂ ಸುತ್ತಮುತ್ತಲಿನ ಪ್ರದೇಶದಲ್ಲಿ ಇವರ ಅನೇಕ ಶಾಸನಗಳು ವೀರಗಲ್ಲುಗಳು ಹಾಗೂ ಇನ್ನಿತರ ಅವಶೇಷಗಳು ದೊರೆಯುತ್ತಿವೆ.

ಎಪಿಗ್ರಫಿಯ ಕರ್ನಾಟಿಕ ಸಂಪುಟ ಹನ್ನೊಂದರಲ್ಲಿ ಇವರ ಕಾಲದ ಅನೇಕ ಶಾಸನಗಳು ಪ್ರಕಟಗೊಂಡಿವೆ. ಇವುಗಳಲ್ಲಿ ಎರಡನೇ ಗೋವಿಂದ, ಎರಡನೇ ಕೃಷ್ಣ, ಎರಡನೇ ಅಮೋಘವರ್ಷ, ಮೂರನೇ ಕೃಷ್ಣ ಹಾಗೂ ಮೂರನೇ ಕರ್ಕರ ಶಾಸನಗಳು ಪ್ರಮುಖವು. ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಲ್ಲಿ ಮೊದಲನೆಯದು ಎರಡನೇ ಗೋವಿಂದನಿಗೆ ಸಂಬಂಧಿಸಿದ್ದು. ಈತನನ್ನು ಜಗತ್ತುಂಗ, ಪ್ರಭೂತವರ್ಷ, ಪ್ರತಾಪಲೋಕ ಮತ್ತು ಶ್ರೀವಲ್ಲಭ ಎಂಬುದಾಗಿ ಹೊಗಳಲಾಗಿದೆ.

ಚಿತ್ರದುರ್ಗ ತಾಲ್ಲೂಕಿನ ಇಸಾಮುದ್ರ ಗ್ರಾಮದಲ್ಲಿ ದೊರೆತಿರುವ ಶಾಸನವು ಕ್ರಿ.ಶ. ೯೩೮ರಲ್ಲಿ ರಚನೆಗೊಂಡಿದ್ದು ರಾಷ್ಟ್ರಕೂಟರ ವಂಶಾವಳಿಯನ್ನು ನೀಡುತ್ತದೆ.[೧೫] ಇಸಾಮುದ್ರದಲ್ಲಿರುವ ಮತ್ತೆರಡು ಶಾಸನಗಳು ರಾಷ್ಟ್ರಕೂಟ ಅರಸ ಎರಡನೇ ಅಮೋಘವರ್ಷನಿಗೆ ಸೇರಿದ್ದಾಗಿವೆ. ಈ ಪ್ರದೇಶದಲ್ಲಿ ಕನ್ನಯ್ಯ ಎಂಬ ಅರಸನು ಆಳ್ವಿಕೆ ನಡೆಸುತ್ತಿದ್ದನು ಎನ್ನುವ ವಿಷಯ ಪ್ರಸ್ತಾಪವಾಗುತ್ತದೆ. ಹಾಗೆಯೇ ಈ ಪ್ರದೇಶವನ್ನು ಅಣ್ಣಿಗ ಅಥವಾ ಅಣ್ಣಯ್ಯನು ಆಳುತ್ತಿದ್ದನು. ಈತನಿಗೆ ಬೀರನೊಳಂಬ ಎನ್ನುವ ಬಿರುದಿದ್ದಿತು. ರಾಷ್ಟ್ರಕೂಟ ಮೂರನೇ ಕೃಷ್ಣನ ಅನೇಕ ಶಾಸನಗಳು ಈ ಪ್ರದೇಶಕ್ಕೆ ಹೊಂದಿಕೊಂಡಂತೆ ದೊರೆಯುತ್ತವೆ. ಹೀಗೆ ರಾಷ್ಟ್ರಕೂಟ ಅರಸರಿಗೆ ಸಂಬಂಧಿಸಿದ ಅನೇಕ ಶಾಸನಗಳು ಧರ್ಮಪುರ ಪರಿಸರದಲ್ಲಿ ದೊರೆಯದೇ ಇದ್ದರೂ ಸಹ ಇದರ ಸುತ್ತಮುತ್ತಲಿನ ಪ್ರದೇಶದಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಶಾಸನಗಳು ದೊರೆತಿವೆ. ಆದರೆ ಈ ಪ್ರದೇಶದಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಅನೇಕ ವೀರಗಲ್ಲುಗಳು ಮಾತ್ರ ದೊರೆಯುತ್ತವೆ. ಧರ್ಮಪುರದ ಪಂಚಲಿಂಗೇಶ್ವರ ಪ್ರೌಢಶಾಲೆಯ ಮುಂಬಾಗದಲ್ಲಿ ಮತ್ತು ಹಳೆಯ ಪ್ರಾಥಮಿಕ ಶಾಲೆಯ ಮುಂಬಾಗದಲ್ಲಿ ವೀರಗಲ್ಲುಗಳು ರಾಷ್ಟ್ರಕೂಟ ಕಾಲದ್ದಾಗಿವೆ.

### ಕಲ್ಯಾಣದ ಚಾಲುಕ್ಯರು

ಕಲ್ಯಾಣದ ಚಾಲುಕ್ಯರು ಸು.ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಶೇಷವಾಗಿ ಕರ್ನಾಟಕದ ಇತಿಹಾಸದಲ್ಲಿ ಮಹತ್ತರವಾದ ಪಾತ್ರವಹಿಸಿದ್ದಾರೆ. ಕ್ರಿ.ಶ. ೯೭೩ರ ಸುಮಾರಿನಲ್ಲಿ ರಾಷ್ಟ್ರಕೂಟರ ಕೊನೆಯ ಅರಸ ಎರಡನೇ ಕರ್ಕನನ್ನು ಚಾಲುಕ್ಯ ವಂಶದ ಎರಡನೇ ತೈಲಪನು ಅಧಿಕಾರದಿಂದ ಕೆಳಗಿಳಿಸಿ ಚಾಲುಕ್ಯವಂಶವನ್ನು ಪುನಃ ಸ್ಥಾಪಿಸಿದನು. ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರಿಂದಾಗಿ ಇವರನ್ನು ಕಲ್ಯಾಣದ ಚಾಲುಕ್ಯರು ಎಂದು ಕರೆಯಲಾಗುತ್ತಿದೆ.

ಕಲ್ಯಾಣದ ಚಾಲುಕ್ಯರು ಕರ್ನಾಟಕದುದ್ದಕ್ಕೂ ಆಳ್ವಿಕೆ ನಡೆಸಿ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ದಾನದತ್ತಿಗಳನ್ನು ಯುದ್ದದ ಸನ್ನಿವೇಶಗಳು

ವಿವರಿಸುವಂತಹ ಅನೇಕ ಶಾಸನಗಳನ್ನು ರಚಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಬಾಗಳಿ ಕಲ್ಲೇಶ್ವರ ದೇವಾಲಯ, ನೀಲಗುಂದ ಭೀಮೇಶ್ವರ, ನಂದಿ ತಾವರೆಯ ಅಮೃತಮಾಣಿಕೇಶ್ವರ ದೇವಾಲಯ ಇತ್ಯಾದಿ ದೇವಾಲಯಗಳು ಇವರ ಕಾಲಾವದಿಯಲ್ಲಿ ನಿರ್ಮಾಣವಾಗಿರುವುದನ್ನು ನೋಡುತೇವೆ.

ಕಲ್ಯಾಣದ ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ದಿಯನ್ನು ಪಡೆದ ಅರಸರುಗಳೆಂದರೆ ಎರಡನೆ ಜಯಸಿಂಹ, ಸೋಮೇಶ್ವರ, ವಿಕ್ರಮಾದಿತ್ಯ ಇತ್ಯಾದಿ ಅರಸರು ಕಲ್ಯಾಣದ ಚಾಲುಕ್ಯರಿಗೆ ಸಂಬಂಧಿಸಿದ ಶಾಸನಗಳು ಮತ್ತು ವೀರಗಲ್ಲುಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ವಿರಳವಾಗಿದ್ದರೂ ಇವರಿಗೆ ಸಂಬಂಧಿಸಿದ ಕೆಲವೇ ಶಾಸನಗಳು, ವೀರಗಲ್ಲುಗಳು ದೊರೆತಿದ್ದು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಇವರ ಆಳ್ವಿಕೆಯ ನಂಟು ಇದ್ದಿತು ಎಂದು ಅಂದಾಜಿಸಲಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶವಾದ ಶಿಡ್ಲಯ್ಯನಕೋಟೆ ಗ್ರಾಮದ ಬ್ರಹ್ಮದೇವರ ದೇವಾಲಯದಲ್ಲಿ ಬಿದ್ದಿರುವ ಕಲ್ಲು[೧೬] ಹಾಗೂ ಅಬ್ಬಿನಹೊಳೆ ಗ್ರಾಮದ ಏಳುಮಂದ್ಯಕ್ಕನ ದೇವಾಲಯದ ಬಳಿ ಇರುವ ಶಾಸನವು ಕಾಲ್ಯಾಣದ ಚಾಲುಕ್ಯರ ಸಮಕಾಲಿನದಾಗಿದೆ ಎಂದು ಹೇಳಬಹುದು.[೧೭]

ಈ ರೀತಿಯಾಗಿ ಕಲ್ಯಾಣದ ಚಾಲುಕ್ಯ ಅರಸರ ಅನೇಕ ಶಾಸನಗಳು ವೀರಗಲ್ಲುಗಳು ಪ್ರಸ್ತುತ ಪ್ರದೇಶದಲ್ಲಿ ದೊರೆತು ಅವರ ಸಾಮಂತರಾಗಿ ನೊಳಂಬ ಪಲ್ಲವರು ಮತ್ತು ಪಾಂಡ್ಯರು ಈ ಭಾಗದಲ್ಲಿ ಆಳ್ವಿಕೆ ನಡೆಸಿದ್ದಾರೆ ಎನ್ನುವ ವಿವರಗಳು ದೊರೆಯುತ್ತವೆ. ಪ್ರಸ್ತುತ ಭಾಗದಲ್ಲಿ ದೊರೆತಿರುವ ಪ್ರಾರಂಭದ ದೇವಾಲಯಗಳು ಈ ಕಾಲಮಾನದಲ್ಲೇ ರಚನೆಗೊಂಡಿರುವುದರಿಂದ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಈ ಅರಸರು ಹೆಚ್ಚು ಪ್ರಾಮುಖ್ಯತೆ ನೀಡಿರುವುದು ತಿಳಿದುಬರುತ್ತದೆ.

**ನೊಳಂಬರು**

ಕರ್ನಾಟಕದಲ್ಲಿ ಕ್ರಿ.ಶ.೮ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಡಳಿತ ನಡೆಸಿದ ನೊಳಂಬರು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರು. ಇವರ ರಾಜಧಾನಿ ಪ್ರಸ್ತುತ ಅಧ್ಯಯನ ಪರಿಸರದ ಗಡಿಪ್ರದೇಶವಾದ ಈಗಿನ ಆಂಧ್ರಪ್ರದೇಶದ ಮಡಕಶಿರಾ ತಾಲೂಕಿನ ಹೆಂಜೇರು ಅಥವಾ ಹೇಮಾವತಿಯಾಗಿತ್ತು ಅನಂತರ ಕ್ರಿ.ಶ. ೧೧ನೇ ಶತಮಾನದಲ್ಲಿ ಇವರು ತಮ್ಮ ರಾಜಧಾನಿಯನ್ನು ತುಂಗಾಭದ್ರಾ ತೀರದಲ್ಲಿರುವ ಕಂಪಲಿಗೆ ವರ್ಗಾಯಿಸಿಕೊಂಡರು. ಪ್ರಾರಂಭದಲ್ಲಿ ನೊಳಂಬಾಳಿಗೆ ಸಾಸಿರವೆಂಬ ಸಣ್ಣ ಪ್ರಾಂತ್ಯದ ಮೇಲೆ ಆಡಳಿತ ನಡೆಸಿದ್ದರು. ಈ ಪ್ರಾಂತ್ಯವು ಈಗಿನ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳನ್ನೊಳಗೊಂಡಿತ್ತು. ಕಾಲಕ್ರಮೇಣ ಅಂದರೆ ಕ್ರಿ.ಶ.೯-೧೦ನೇ ಶತಮಾನದಲ್ಲಿ ಇವರ ಪ್ರಾಬಲ್ಯವು ವೃದ್ದಿಸಿ ಇವರ ರಾಜ್ಯವೂ ಸಹ ವಿಸ್ತಾರಗೊಂಡು ನೊಳಂಬವಾಡಿ ೩೨೦೦೦ಎಂದು

ವಿಸ್ತಾರವಾದ ಪ್ರಾಂತ್ಯವಾಯಿತು. ಈ ಪ್ರಾಂತ್ಯವು ಕರ್ನಾಟಕದ ಕೊಲಾರ, ತುಮಕೂರು, ಚಿತ್ರದುರ್ಗ, ಮತ್ತು ಅದಕ್ಕೆ ಸೇರಿದಂತಿರುವ ಸುತ್ತಮುತ್ತಲಿನ ಪ್ರದೇಶಗಳು ವ್ಯಾಪಿಸಿತ್ತು ಎಂದು ಹೇಳಬಹುದು.[೧೮]

ತಲಕಾಡಿನ ಗಂಗರ ಕೈಕೆಳಗೆ ಆಡಳಿತವನ್ನು ಪ್ರಾರಂಬಿಸಿದ ನೊಳಂಬರು ಕಾಲಕ್ರಮೇಣ ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರ ಮಾರಡಲಿಕರಾಗಿ ಆಳ್ವಿಕೆ ನಡೆಸಿದರು. ಚೊಳರು, ಬಾಣರು, ವೈಡುಂಬರರನ್ನು ಸದೆಬಡಿದರು. ಗಂಗರು, ಚೊಳರು, ಪಲ್ಲವರು ಮತ್ತು ವೆಂಗಿಯ ಚಾಲುಕ್ಯರ ಕೂಡ ಯುದ್ದಗಳನ್ನು ಮಾಡಿ ಅನೇಕ ಯುದ್ದಗಳನ್ನು ಗೆದ್ದು ವೀರರು ಎನಿಸಿಕೊಂಡರು. ಬನವಾಸಿ ಕದಂಬರು ಹಾಗೂ ಕಲ್ಯಾಣದ ಚಾಲುಕ್ಯರ ವಂಶದೊಂದಿಗೆ ವಿವಾಹ ಸಂಬಂಥ ಸಹ ಬೆಳೆಸಿದರು. ಇಷ್ಟೆಲ್ಲಾ ಕಾರ್ಯ ಚಟುವಟಿಕೆಗಳನ್ನು ನಡೆಸಿ ಸುಮಾರು ೩ ಶತಮಾನಗಳ ಕಾಲ ಕರ್ನಾಟಕದಲ್ಲಿ ಆಳಿದ ನೊಳಂಬರು ಭವ್ಯ ಇತಿಹಾಸ ಭದ್ರ ಬುನಾದಿಯನ್ನು ಹಾಕಿದವರಲ್ಲೊಬ್ಬರಾಗಿದ್ದರು.

ನೊಳಂಬರು ರಾಜಕೀಯ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದಂತೆ ಹಾಗೆಯೆ ಕರ್ನಾಟಕದ ಭವ್ಯಸಾಂಸ್ಕೃತಿಕ ಪರಂಪರೆಯನ್ನು ಬೆಳಗಿಸಿದರು. ಇವರ ಕಾಲದಲ್ಲಿ ವಾಸ್ತು ಶಿಲ್ಪ ಕಲೆಯಲ್ಲಿ ತನ್ನದೆ ಆದ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿದ್ದರು. ಇವರ ರಾಜದಾನಿಯಾದ ಹೇಮಾವತಿಯಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರ ಅವಶೇಷಗಳು ಈ ಪ್ರದೇಶದಲ್ಲಿ ಇಂದಿಗೂ ಅಳಿವಿನ ಅಂಚಿನಲ್ಲಿರುವುದನ್ನು ಕಾಣಬಹುದು. ಪರಿಸರದ ಧರ್ಮಪುರ ಪರಿಸರದಲ್ಲಿಯೂ ಸಹ ಇವರ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳನ್ನು ಕಂಡರಿಸಲಾಗಿದೆ.

ನೊಳಂಬ ಎಂಬ ಪದದ ಉಗಮ ಅದರ ವ್ಯಾಪ್ತಿಯನ್ನು ಹಿಂದಿನ ಲೇಖನಗಳಲ್ಲಿ ಕಂಡರಿಸಿದ್ದು ನೊಳಂಬ ಪದವು ಅವರ ವಂಶದ ಹೆಸರಾಗಿತ್ತೆಂದು ಖಚಿತವಾಗಿ ಹೇಳಬಹುದು. ಚಾಮರಾಜನಗರದ ಒಂದು ಶಾಸನದಲ್ಲಿ ರಾಜಕುಮಾರಿಯೊಬ್ಬಳು ತಾನು ನೊಳಂಬ ಮತ್ತು ಪಲ್ಲವ ಕುಲದವಳೆಂದು ಹೇಳಲ್ಪಟ್ಟಿದ್ದಾಳೆ.[೧೯] ಹಾಗೆಯೆ ಗಂಗಮಾರಸಿಂಹನು "ನೊಳಂಬ ಕುಲಾಂತಕ" ಎಂದು ಆತನು ನೊಳಂಬರೆಲ್ಲರನ್ನು ಕೊಂದನೆಂದು ಶಾಸನಗಳಲ್ಲಿ ವರ್ಣಿತನಾಗಿದ್ದಾನೆ. ನೊಳಂಬ ವಂಶವು ಹೇಮಾವತಿಯ ಸ್ತಂಬಶಾಸನದಲ್ಲಿ ಉಕ್ತವಾಗಿರುವ ಹಾಗೆ ಮತ್ತು ನೊಳಂಬರ ಬಿರುದು ಬಾವಲಿಗಳನ್ನು ಪಲ್ಲವರ ಕುಲದಿಂದ ಬಂದವರು, ನೊಳಂಬರ ಮೊದಲನೇ ರಾಜನಾದ ಮಂಗಳನು ಈಶ್ವರ ವಂಶಜನಾದ ಹಾಗೂ ಕಂಚಿಪತಿಯಾದ ತ್ರಿನಯಪಲ್ಲವನ ಕುಲದಲ್ಲಿ ಹುಟ್ಟಿದವನೆಂದು ಹೇಳುತ್ತದೆ.[೨೦] ನೊಳಂಬರ ಬಿರುದಗಳಿಂದ ಪಲ್ಲವಮಲ್ಲ, ಪಲ್ಲವಭಯ, ಪಲ್ಲವಕುಲತಿಲಕ, ಪಲ್ಲವರಾಜ ಇತ್ಯಾದಿಗಳು ಮೂಲಪಲ್ಲವ ವಂಶದಿಂದ ಬಂದವರೆಂಬುದನ್ನು ತಿಳಿಸುತ್ತದೆ.

ಹೇಮಾವತಿಯ ಸ್ತಂಬಶಾಸನದಿಂದ ನೊಳಂಬರ ವಂಶಾವಳಿಯ ಮೊದಲ ಭಾಗವನ್ನು ಈ ರೀತಿ ತಿಳಿಂಯುಬಹುದು. ಈಶ್ವರ ವಂಶನಾದ ತ್ರಿಣಂಯುನನ ವಂಶದಲ್ಲಿ ಮಂಗಳನೊಳಂಬಾಧಿರಾಜನು ಹುಟ್ಟಿದ್ದನು ಈತನ ಮಗ ಸಿಂಹಪೋತ, ಇವನ ಮಗ ಚಾರುಪೊನ್ನೇರ ಈತನ ಮಕ್ಕಳು ಅಣ್ಣೀಗೆನೊಳಂಬ ಮತ್ತು ಇರಿವನೊಳಂಬ ದಿಲೀಪ, ಕೊನೆಯ ಅರಸ ದಿಲೀಪನು ಈ ಶಾಸನವನ್ನು ಕ್ರಿ.ಶ. ೯೪೨ರಲ್ಲಿ ಸ್ಥಾಪಿಸಿದನು.[೨೧] ಚಿತ್ತೂರು ಜಿಲ್ಲೆಯ ನೆಲಪಲ್ಲಿಯ ಶಾಸನದಿಂದ ಇರಿವನೊಳಂಬನ ನಂತರ ಅವನ ಮಗ ನನ್ನಿನೊಳಂಬ ಅವನ ಮಗ ಪೊಳಲ್ಚೋರ, ಅವನ ಮಗ ವೀರಮಹೇಂದ್ರ ನಂತರ ಅವನ ತಮ್ಮ ಇರಿವನೊಳಂಬ ಘಟೆಯಂಕಕಾರ ಪಲ್ಲವಾದಿತ್ಯನು ಆಳಿದವರೆಂದು ತಿಳಿಯುತ್ತದೆ. ಕೊನೆಯ ಅರಸನಾದಿ ಇರಿವನೊಳಂಬ ಘಟೆಯಂಕಕಾರ ಕಾಲಕ್ಕೆ ನೊಳಂಬರು ತಮ್ಮ ನಿಷ್ಠೆಯನ್ನು ಸಂಪೂರ್ಣವಾಗಿ ಕಲ್ಯಾಣಚಾಲುಕ್ಯರಿಗೆ ಮುಡುಪಾಗಿಸಿಟ್ಟಿದ್ದರು. ಆದುದರಿಂದಾಗಿ ಇವರ ಹೆಸರುಗಳು ಅವರ ಸಮಕಾಲಿನ ಚಾಲುಕ್ಯ ರಾಜನ ಹೆಸರನ್ನೊಳಗೊಂಡಿರುತ್ತವೆ. ಬಳ್ಳಾರಿ ಜಿಲ್ಲೆಯ ಮೋರಿಗೇರಿ ಶಾಸನದಿಂದ ಇರಿವನೊಳಂಬ ಘಟೆಯಂಕಕಾರನ ನಂತರ ಆಳಿದ ನೊಳಂಬ ದೊರೆಗಳ ಬಗ್ಗೆ ತಿಳಿಯಬಹುದು. ಇರಿವನೊಳಂಬ ಘಟೆಯಂಕಕಾರನ ಮಗ ಜಗದೇಕಮಲ್ಲ ಇರ್ಮಡಿನೊಳಂಬ ಅವನ ತಮ್ಮ ತ್ರೈಲೊಕ್ಯಮಲ್ಲನೊಳಂಬ ಪಲ್ಲವ ಪೆರ್ಮಾನಡಿ. ಕಡೆಯ ರಾಜನ ಕನೆಯಕಾಲ ಕ್ರಿ.ಶ. ೧೦೫೬. ಜಯಸಿಂಫದೇವನೆಂಬ ರಾಜನು ಚಾಲುಕ್ಯರ ಕೈಕೆಳಗೆ ಆಳ್ವಿಕೆ ಮಾಡಿದನು. ಶಾಸನದಲ್ಲಿ ಈತನು ಸೋಮೇಶ್ವರನ ಪುತ್ರನೂ ಹಾಗೂ ೬ ನೇ ವಿಕ್ರಮಾದಿತ್ಯನ ತಮ್ಮನೆಂದು ಹೇಳಲ್ಪಟ್ಟಿದೆ. ಈತನಿಗೂ ಮತ್ತು ಮೂಲ ನೋಳಂಬ ವಂಶಕ್ಕೂ ಯಾವ ರೀತಿಯ ಸಂಬಂಧವಿದ್ದಿತೆಂಬುದನ್ನು ಹೇಳಲು ಅಸಾದ್ಯ. ಆದುದರಿಂದ ಕ್ರಿ.ಶ. ೧೦೫೫ರಲ್ಲಿ ತ್ರೈಲೋಕ್ಯಮಲ್ಲನೊಂದಿಗೆ ಮೂಲನೊಳಂಬಸಂತತಿ ಮುಕ್ತಾಯವಾಯಿತು ಎಂದು ಹೇಳಬಹುದು.

ನೊಳಂಬ ಕಾಲದ ನಂತರದ ಶಾಸನಗಳಲ್ಲಿ ಅನೇಕ ನೊಳಂಬರ ಹೆಸರುಗಳುಳ್ಳ ಅಧಿಕಾರಿಗಳ ಕಲ್ಯಾಣ ಚಾಲುಕ್ಯರ, ಹೊಯ್ಸಳರ, ಚೋಳ, ವಿಜಯನಗರದ ಅರಸರ ಕೈಕೆಳಗೆ ಯುದ್ದಗಳಲ್ಲಿ ಸೇವೆ ಸಲ್ಲಿಸುತ್ತಿರುವುದನ್ನು ಕಾಣುತ್ತೇವೆ. ಇವರ ಮೂಲಗಳನ್ನು ಹುಡುಕಿ ಅವರಿಗೂ ಮೂಲನೊಳಂಬ ರಾಜವಂಶಕ್ಕೆ ಇದ್ದ ಸಂಬಂಧವನ್ನು ಹೇಳಲಿಕ್ಕೆ ಅಗುವುದಿಲ್ಲ. ಇವರುಗಳೆಲ್ಲರು ಒಂದಲ್ಲ ಒಂದು ರೀತಿಯಲ್ಲಿ ನೊಳಂಬರ ರಾಜವಂಶಕ್ಕೆ ಸಂಬಂಧವನ್ನು ಹೊಂದಿದ್ದು ನೊಳಂಬರ ಪತನ ನಂತರ ಚದುರಿಹೋಗಿ ಇತರ ರಾಜರ ಅಶ್ರಯದಲ್ಲಿ ವಿವಿದ ಹುದ್ದೆಗಳನ್ನು ಅಲಂಕರಿಸಿದ್ದರು ಎಂದು ಹೇಳಬಹುದು. ಮೇಲೆ ತಿಳಿಸಲಾದ ನೊಳಂಬರ ರಾಜರ ಹೆಸರುಗಳಲ್ಲದೆ ಅವರ ವಂಶದ ಇತರ ರಾಜಕುಮಾರರ ಹೆಸರುಗಳನ್ನು ಶಾಸನಗಳಲ್ಲಿ

ಕಾಣುತ್ತೇವೆ. ಅವರುಗಳೆಂದರೆ ಮಯ್ಯುನೊಳಂಬ, ಅಂಕನಾನ, ಇರುಳಚೋರ, ಅಯ್ಯಪ್ಪದೇವಗನ್ನರ ಇತ್ಯಾದಿ. ನೊಳಂಬರ ಪೂರ್ವಇತಿಹಾಸದ ಬಗ್ಗೆ ಹೆಚ್ಚಿನ ಮಾಹಿತಿಗಳು ನಮಗೆ ದೊರೆತಿಲ್ಲ.

ಚಿತ್ರದುರ್ಗ ಜಿಲ್ಲೆಯಲ್ಲಿ ಹಿರಿಯೂರು, ಚಳ್ಳಕೆರೆ ತಾಲ್ಲೂಕುಗಳಲ್ಲಿ ಕ್ರಿ.ಶ. ೮೧೫ರ ಕಾಲಕ್ಕೆ ಸಂಬಂಧಿಸಿದಂತೆ ನೊಳಂಬರು ಸಹ ಈ ಪ್ರದೇಶದಲ್ಲಿ ಆಳ್ವಿಕೆ ನಡಿಸಿದ್ದಾರೆ. ಚಿಕ್ಕಮದುರೆ ದೇವಾಲಯದಲ್ಲಿ ದೊರೆತಿರುವ ಶಾಸನಗಳಲ್ಲಿ ಸಿಂಹ ಪೋತನ ಮಗ ಪಲ್ಲವಾದಿ ರಾಜ ಮತ್ತು ಅವನ ಮಗ ಪಲ್ಲವ ಮಲ್ಲ ರಾಷ್ಟ್ರಕೂಟರ ಸಾಮಂತರಾಗಿ ಆಡಳಿತ ನಡೆಸುತ್ತಿದ್ದರೆಂದು ತಿಳಿಸುವವು.

ಪ್ರಸ್ತುತ ಅಧ್ಯಯನದ ಪ್ರದೇಶದ ಸುತ್ತಮುತ್ತಲಿನಲ್ಲಿ ನೊಳಂಬರಿಗೆ ಸಂಬಂಧಿಸಿದ ಶಾಸನಗಳು, ದೇವಾಲಯಗಳು, ವೀರಗಲ್ಲುಗಳು ದೊರೆತಿದ್ದು ಇವರು ಸಹ ಈ ಪ್ರದೇಶದಲ್ಲಿ ತಮ್ಮ ರಾಜಕೀಯ ಪ್ರಾಬಲ್ಯ ಮೆರೆದರು ಎಂದು ಹೇಳಬಹುದಾಗಿದೆ. ಅಂದರೆ ಕ್ರಿ.ಶ. ೮೯೦ರ(ಹಿರಿಯೂರು-೩೩) ಶಾಸನವು ನೊಳಂಬ ಪಲ್ಲವರಾಜ ಮಹೇಂದ್ರನ ಆಳ್ವಿಕೆಯಲ್ಲಿ ಚಿತ್ತಪ್ಪನ ಕೆರೆ ನಿರ್ಮಾಣವಾದುದ್ದನ್ನು ತಿಳಿಸುತ್ತದೆ.[೨೨] ಚಿತ್ರದುರ್ಗ ಜಿಲ್ಲೆಯಲ್ಲಿ ಹಲವು ಶತಮಾನಗಳವರೆಗೆ ವೈಭವದಿಂದ ಆಳಿದ ನೊಳಂಬರು ಕರ್ನಾಟಕದ ಸಾಮಂತ ರಾಜ ಮನೆತನಗಳಲ್ಲಿ ಮಹತ್ವದ ಸ್ಥಾನ ಪಡೆದಿದ್ದರು. ಇವರ ಆಳ್ವಿಕೆ ಪ್ರಸ್ತುತ ಪ್ರದೇಶಕ್ಕೆ ಸೀಮಿತವಾಗಿರದೇ ಸುತ್ತಮುತ್ತಲಿನ ಜಿಲ್ಲೆಗಳಿಗೂ ವಿಸ್ತರಿಸಿದ್ದಿತು ಎನ್ನುವ ಸಂಗತಿ ದೊರೆತಿರುವ ಶಾಸನಗಳ ಆಧಾರಗಳಿಂದ ತಿಳಿದುಕೊಳ್ಳಬಹುದಾಗಿದೆ. ನೊಳಂಬರು ಬಹುತೇಕ ಶಾಸನಗಳನ್ನು ಕನ್ನಡದಲ್ಲಿಯೇ ರಚಿಸಿ ಕನ್ನಡ ನಾಡು, ನುಡಿ, ಸಂಸ್ಕೃತಿ ಬೆಳವಣಿಗೆಗೆ ಶ್ರಮಿಸಿದ ನೊಳಂಬರ ಸ್ಥಾನ ಕರ್ನಾಟಕದ ಇತಿಹಾಸದಲ್ಲಿ ಅದ್ವಿತೀಯವಾಗಿದೆ.

ಈ ರೀತಿಯಾಗಿ ನೊಳಂಬರೂ ಸಹ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದು ಯತೇಚ್ಚವಾಗಿ ನೊಳಂಬರಿಗೆ ಸಂಬಂಧಿಸಿದಂತೆ ಶಾಸನಗಳು ಈ ಪ್ರದೇಶದಲ್ಲಿ ದೊರೆಯುತ್ತವೆ. ಇವರು ಉತ್ತಮವಾದ ಆಳ್ವಿಕೆ ನಡೆಸಿದ್ದರೆನ್ನುವುದು ಸಹ ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.[೨೩]

## ಹೊಯ್ಸಳರು

ಕರ್ನಾಟಕದ ರಾಜಮನೆತನಗಳಲ್ಲಿ ಹೊಯ್ಸಳರ ಸ್ಥಾನ ಮಹತ್ವವಾದುದು. ಸುಮಾರು ಕ್ರಿ.ಶ. ೧೨ನೇ ಶತಮಾನದ ಆದಿಭಾಗದಿಂದ ೧೪ನೇ ಶತಮಾನದ ಮಧ್ಯಭಾಗದವರೆಗೆ ಆಳ್ವಿಕೆ ನಡೆಸಿದ ಇವರು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವುದರ ಮೂಲಕ ವಿಶಿಷ್ಟ ರೀತಿಯ ಕಾಣಿಕೆಗಳನ್ನು ಸಲ್ಲಿಸಿದ್ದಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯನ್ನು ತಿಳಿಯಲು ಸುಮಾರು ಐವತಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ಅವುಗಳ ಆಧಾರದಿಂದ ಹೊಯ್ಸಳರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಇಡೀ ಜಿಲ್ಲೆಯನ್ನು ಆಕ್ರಮಿಸಿಕೊಂಡಿದ್ದು ಸುತ್ತಮುತ್ತಲಿನ ಪ್ರದೇಶಗಳಲ್ಲಿಯೂ, ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ, ಕಾಲುವೆ, ದೇವಾಲಯ, ಅಗ್ರಹಾರ, ಇತ್ಯಾದಿಗಳನ್ನು ಕುರಿತಾಗಿ ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳು ವಿವರಣೆ ನೀಡುತ್ತವೆ.

ಹೊಯ್ಸಳ ಪ್ರಭು ಇಮ್ಮಡಿಬಲ್ಲಾಳನ ಶಾಸನವು ಈ ಜಿಲ್ಲೆಯಲ್ಲಿ ದೊರೆತ ಹೊಯ್ಸಳ ಮನೆತನದ ಪ್ರಥಮ ಶಾಸನವಾಗಿದೆ. ಇಮ್ಮಡಿ ಬಲ್ಲಾಳನ ಕಾಲದ ಈ ಪ್ರದೇಶದಲ್ಲಿ ಎರಡು ಶಾಸನಗಳು (ಹಿರಿಯೂರು-೭೦, ಹೊಳಲ್ಕೆರೆ-೨೮) ದೊರೆತಿವೆ. ಈ ಶಾಸನಗಳು ಅವನ ಕಾಲದ ರಾಜಕೀಯ, ಸಾಮಾಜಿಕ ಮತ್ತಿತರ ಸಂಗತಿಗಳನ್ನು ಕುರಿತು ವಿವರಗಳನ್ನು ನೀಡುತ್ತವೆ.[೨೪]

ಈ ಪ್ರದೇಶಗಳಲ್ಲಿ ಅಂದರೆ ಹಿರಿಯೂರು ತಾಲ್ಲೂಕು ಯರಬಳ್ಳಿ ಗ್ರಾಮದಲ್ಲಿರುವ ಕ್ರಿ.ಶ.೧೨೦೫ರ ಶಾಸನವು ಇಮ್ಮಡಿ ಬಲ್ಲಾಳನ ಮಗ ಬೇಚಿಯ ದಣ್ಣಾಯಕನು ಕಾಡಕರೆ ಪರಮಗೌಡನ ಮಗ ನಾಗೇಯ ನಾಯಕನಿಗೆ ನೆತ್ತರು ಕೊಡುಗೆ ನೀಡಿದುದನ್ನು ತಿಳಿಸುತ್ತದೆ.[೨೫] ಈ ಪ್ರದೇಶದಲ್ಲಿ ಅಂದರೆ ಅರಳೀಕೆರೆ, ಧರ್ಮಪುರ, ಅಬ್ಬಿನಹೊಳೆ, ಇತ್ಯಾದಿ ಸ್ಥಳಗಳಲ್ಲಿ ಹೊಯ್ಸಳರ ಶಾಸನಗಳು ದೊರೆಯದಿದ್ದರೂ ಅನೇಕ ವೀರಗಲ್ಲುಗಳು ದೊರೆತಿವೆ. ಹಾಗಾಗಿ ಈ ಪ್ರದೇಶವೂ ಸಹ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದು.

**ಸೇವುಣರು**

ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಕದಂಬ, ಚಾಲುಕ್ಯ, ರಾಷ್ಟ್ರಕೂಟರ ಮನೆತನಗಳಂತೆ ದೇವಗಿರಿಯ ಸೇವುಣರು ಸಹ ಕೆಲವು ಕಾಲ ಇಲ್ಲಿ ಆಳ್ವಿಕೆ ನಡೆಸಿದ್ದಾರೆ ಎನ್ನುವುದು ತಿಳಿದುಬರುತ್ತದೆ. ಇವರಿಗೆ ಸಂಬಂಧಿಸಿದ ಶಾಸನಗಳು, ದೊರೆಯದೇ ಇದ್ದರೂ ಚಿತ್ರದುರ್ಗ ಜಿಲ್ಲೆಯಾದ್ಯಂತ ದೊರೆತಂತಹ ಶಾಸನಗಳ ಆಧಾರದಿಂದ ಈ ಪ್ರದೇಶವೂ ಸಹ ಸೇವುಣರಿಗೆ ಸಂಬಂಧಿಸಿದ್ದಾಗಿದ್ದಿತೆಂದು ಹೇಳಬಹುದು.

ಸೇವುಣರ ಆಳ್ವಿಕೆಯ ಅವದಿಯಲ್ಲಿ ಇತರ ರಾಜ ಮನೆತನಗಳೊಂದಿಗೆ ಇಟ್ಟುಕೊಂಡಿದ್ದ ಸಂಬಂಧಗಳು ಮತ್ತು ಇತ್ಯಾದಿಗಳ ಬಗ್ಗೆ ಅವರ ಶಾಸನಗಳಿಂದ ತಿಳಿದುಕೊಳ್ಳಬಹುದಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸೇವುಣರ ಆಳ್ವಿಕೆಯ ಬಗ್ಗೆ ಸುಮಾರು ಇಪ್ಪತ್ತು ಶಾಸನಗಳು ದೊರೆತಿವೆ. ಅವುಗಳಲ್ಲಿ ಅವರ ರಾಜಕೀಯ ಮತ್ತಿತರ ವಿವರಗಳ ಬಗ್ಗೆ ತಿಳಿಯಬಹುದಾಗಿದೆ. ಈ ಜಿಲ್ಲೆಯ ಕೆಲವು ಭಾಗಗಳು ಇವರ ಅಧೀನಕ್ಕೆ ಒಳಪಟ್ಟಿವೆ ಎಂದು ಈ ಶಾಸನಗಳ ಸಹಾಯದಿಂದ ಸ್ಪಷ್ಟಪಡಿಸಬಹುದು.

ಕೆಲವು ಶಾಸನಗಳಲ್ಲಿ ಸೇವುಣರು ತಮ್ಮನ್ನು ಯಾದವರೆಂದು ಕರೆದುಕೊಂಡಿದ್ದಾರೆ. ಆದರೆ ಹೊಯ್ಸಳರ ಶಾಸನಗಳು ಅವರನ್ನು ಸೇವುಣರೆಂದೇ ಉಲ್ಲೇಖಿಸಿವೆ.[೨೬] ಸೇವುಣ ಸಿಂಘಣ (ಕ್ರಿ.ಶ.೧೨೧೦-೧೨೪೭)ಈ ಮನೆತನದ ಪ್ರಸಿದ್ಧ ಹಾಗೂ ಸಮರ್ಥ ದೊರೆಗಳಲ್ಲಿ ಒಬ್ಬನಾಗಿದ್ದಾನೆ.

ಪ್ರಸ್ತುತ ಚಿತ್ರದುರ್ಗ ಜಿಲ್ಲೆಯಲ್ಲಿ ಈ ವಂಶಕ್ಕೆ ಸೇರಿದ ಹಲವಾರು ಶಾಸನಗಳು ದೊರೆತಿದ್ದು ಅವುಗಳೆಲ್ಲವೂ ಸಿಂಘಣ್ಣನ ಅನಂತರ ಕಾಲದವುಗಳಾಗಿವೆ. ಕನ್ನರ ಮಹಾದೇವ ಹಾಗೂ ರಾಮಚಂದ್ರ ಇವರ ಆಳ್ವಿಕೆಯ ಕಾಲಕ್ಕೆ ಸೇರಿದ ಶಾಸನಗಳು ಲಭ್ಯವಿರುವುದನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ಪ್ರದೇಶದಲ್ಲಿಯೂ ಸಹ ಸೇವುಣರ ಆಳ್ವಿಕೆ ಇದ್ದಿತ್ತೆಂದು ಹೇಳಬಹುದು.

**ವಿಜಯನಗರದ ಅರಸರು**

ಹೊಯ್ಸಳರ ಸಾಮ್ರಾಜ್ಯ ಪತನ ಹೊಂದಿದ ತರುವಾಯ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು ಮರೆತು ಹೋದ ಹಾಗೂ ಮರೆಯಲಾಗದ ಸಾಮ್ರಾಜ್ಯವೆಂದು ಇತಿಹಾಸಕಾರರು ಬಣ್ಣಿಸಿದ್ದಾರೆ. ಹದಿನಾರನೆ ದಶಕದಲ್ಲಿ ಅಸ್ತಂಗತವಾದ ವಿಜಯನಗರವು ಇಡೀ ಭಾರತದಲ್ಲಿ ಮಾತ್ರವಲ್ಲದೆ ಪ್ರಪಂಚದಲ್ಲಿಯೇ ಖ್ಯಾತಿ ಪಡೆದಿತ್ತು. ಕ್ರಿ.ಶ. ೧೩೩೬ ರಿಂದ ೧೫೬೫ ರವರೆಗೆ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಚಿತ್ರದುರ್ಗ ಜಿಲ್ಲೆಯನ್ನು ತಮ್ಮ ಸಾಮ್ರಾಜ್ಯದ ಭಾಗವನ್ನಾಗಿಸಿಕೊಂಡು ಆಳ್ವಿಕೆ ನಡೆಸಿದರು. ವಿಜಯನಗರದ ಅರಸರು ಅನೇಕ ವಿಭಾಗಗಳನ್ನು ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಈ ವಿಭಾಗಗಳು ಮೊದಲನೆಯ ಬುಕ್ಕನ ಕಾಲದಿಂದಲೇ ಇದ್ದವು ಎಂಬುದಕ್ಕೆ ಹಲವು ಶಾಸನಗಳ ಆಧಾರವಿದೆ. ವಿಜಯನಗರದ ಅರಸರು ಕ್ರಮಬದ್ಧವಾದ ಆಡಳಿತ ನಡೆಸಿರುವುದರ ಜೊತೆಗೆ ಕೃಷಿ ಅಭಿವೃದ್ಧಿಗೆ, ದೇವಾಲಯಗಳ ಜೀರ್ಣೋದ್ದಾರಕ್ಕೆ ದಾನ ದತ್ತಿಗಳನ್ನು ನೀಡಿದ ಬಗ್ಗೆ ಶಾಸನಗಳಿಂದ ತಿಳಿಯಬಹುದಾಗಿದೆ.

ಧರ್ಮಪುರ ಪರಿಸರದಲ್ಲಿಯೂ ವಿಜಯನಗರ ಅರಸರ ದೇವಾಲಯಗಳು, ವೀರಗಲ್ಲುಗಳು ಶಾಸನಗಳು ದೊರೆತಿವೆ. ಅಂಬಲಗೆರೆಯ ರಂಗನಾಥ ಸ್ವಾಮಿ ದೇವಾಲಯದ ಗರ್ಭಗೃಹದಲ್ಲಿರುವ ಶಾಸನದಲ್ಲಿ ರಂಗನಾಥನನ್ನು ತಿರುವೆಂಗಳನಾಥನೆಂದು ಕರೆಯಲಾಗಿದೆ. ಇಲ್ಲಿಯ ಸ್ತಂಭಶಾಸನವು ಅಂಬಲಗೆರೆಯ ತಿರುವೆಂಗಳನಾಥನ ನಂದಾದೀಪಕ್ಕಾಗಿ ಗ್ರಾಮದ ಸುಂಕವನ್ನು ನೀಡಿದ ಬಗ್ಗೆ ಉಲ್ಲೇಖಿಸುತ್ತದೆ. ಹಾಗೆಯೇ ಕ್ರಿ.ಶ. ೧೫೫೪ರ ಶಾಸನ ಸದಾಶಿವರಾಯನು ಆಳ್ವಿಕೆ ಮಾಡುತ್ತಿರುವ ಸಂದರ್ಭದಲ್ಲಿ ಅಂಬಲಗೆರೆಯ ತಿರುವೆಂಗಳನಾತ ದೇವರಿಗೆ ಗೋಸಿಕೆರೆ ನಾಡೊಳಗಿರುವ ಉಪರಿಕರಹಳ್ಳಿಗೆ ವೆಂಗಳಾಪುರ ಎಂದು ಮರುನಾಮಕರಣ ಮಾಡಿ ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ.[೨೭] ಧರ್ಮಪುರ ಗ್ರಾಮದ ಶಾನಭೋಗ

ಸುಬ್ಬರಾಯಪ್ಪನ ಗದ್ದೆಯಲ್ಲಿರುವಂತಹ ಶಾಸನವು ಖಂಡೇನಹಳ್ಳಿ ಪಟೇಲ ದಾಸೇಗೌಡನ ಮಗ ಗಂಗೇಗೌಡನಲ್ಲಿದ್ದ ತಾಮ್ರಶಾಸನ ಇತ್ಯಾದಿಗಳು ವಿಜಯನಗರ ಅರಸರ ವಿವರಗಳನ್ನು ತಿಳಿಸುತ್ತವೆ.[೨೮] ಪ್ರಸ್ತುತ ಪರಿಸರದ ಸುತ್ತಮುತ್ತಲಿನಲ್ಲಿ ಇನ್ನು ಹಲವಾರು ವೀರಗಲ್ಲುಗಳು, ಜೀರ್ಣೋದ್ಧಾರವಾಗಿರುವ ದೇವಾಲಯಗಳು ಪ್ರಭಾವವನ್ನು ನಿರೂಪಿಸುತ್ತವೆ.

**ಚಿತ್ರದುರ್ಗದ ಪಾಳೆಯಗಾರರು**

ಮಧ್ಯಯುಗೀನ ಭಾರತದ ಇತಿಹಾಸದಲ್ಲಿ ಅತ್ಯಂತ ಉನ್ನತವಾದ ಕಾಲಘಟ್ಟವೆಂದರೆ ವಿಜಯನಗರ ಸಾಮ್ರಾಜ್ಯದ ಕಾಲಾವದಿ. ಕ್ರಿ.ಶ.೧೪ ನೇ ಶತಮಾನದ ಪೂರ್ವಾರ್ಧದಲ್ಲಿ ಏಳಿಗೆಗೆ ಬಂದ ವಿಜಯನಗರ ಅರಸರು ಬಹು ವಿಶಾಲವಾದ ಸಾಮ್ರಾಜ್ಯವನ್ನು ನಿರ್ಮಿಸಿ ಭಾರತದ ಆಚೆ ಕೀರ್ತಿ ಪತಾಕೆಯನ್ನು ಹಾರಿಸಿದರು. ಕ್ರಿ.ಶ.೧೫೬೫ ರಲ್ಲಿ ನಡೆದಂತಹ ರಕ್ಕಸತಂಗಡಿ ಯುದ್ಧದ ನಂತರ ಸಾಮ್ರಾಜ್ಯವು ನಾಶಗೊಂಡ ಸಂದರ್ಭದಲ್ಲಿ ಹಲವಾರು ಆಧೀನ ಪಾಳೆಗಾರರು ಸ್ವತಂತ್ರ ಹೊಂದಿದರು. ವಿಜಯನಗರದ ಪತನದ ನಂತರ ಇವರು ಸ್ವತಂತ್ರವಾಗಿ ಆಳ್ವಿಕೆ ಮಾಡಲು ಪ್ರಾರಂಭಿಸಿದರು.

ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲ ಪ್ರದೇಶಗಳನ್ನೊಳಗೊಂಡಂತೆ ಈ ಭಾಗದಲ್ಲಿ ಸುಮಾರು ಎಳು ಪಾಳೆಗಾರರ ಮನೆತನಗಳು ಆಳ್ವಿಕೆ ನಡೆಸಿವೆ. ಅಂದರೆ ಹರ್ತಿಕೋಟೆ, ಬೇಲೂರು, ಚಿತ್ರದುರ್ಗ, ಸಂತೆಬೆನ್ನೂರು, ನಾಯಕನಹಟ್ಟಿ, ಮತ್ತಿನಾಡು(ಮತ್ತೋಡು). ಅವರಲ್ಲಿ ಚಿತ್ರದುರ್ಗ ಪಾಳೆಗಾರರು ಪ್ರಮುಖರೆನಿಸಿದ್ದಾರೆ. ಇವರುಗಳ ಬಗ್ಗೆ ಅನೇಕ ಶಿಲಾಶಾಸನ, ತಾಮ್ರಪಟ ಶಾಸನಗಳು ಇತ್ಯಾದಿ ಆಧಾರಗಳು ದೊರೆತಿವೆ. ಇವರುಗಳು ನಿರ್ಮಿಸಿದ ಮತ್ತು ಜೀರ್ಣೋದ್ಧಾರಗೊಳಿಸಿದ ದೇವಾಲಯಗಳು, ಕೋಟೆಕೊತ್ತಲುಗಳು, ಕೆರೆಕಾಲುವೆಗಳು ಹಾಗೂ ದತ್ತಿಬಿಟ್ಟ ವಿವರಗಳನ್ನು ತಿಳಿಯಬಹುದು. ಸುತ್ತಮುತ್ತಲಿನ ಪ್ರದೇಶದ ವೇಣುಕಲ್ಲುಗುಡ್ಡವು ಪಾಳೆಗಾರರ ಆಳ್ವಿಕೆಯ ಪ್ರಮುಖ ಕೇಂದ್ರವಾಗಿದ್ದಿತು. ಈ ಪ್ರದೇಶದಲ್ಲಿ ಇವರುಗಳು ಕಟ್ಟಿ ಜೀರ್ಣೋದ್ಧಾರಗೊಳಿಸಿದ ಐತಿಹಾಸಿಕ ಕುರುಹುಗಳನ್ನು ಇದಿಂಗೂ ಕಾಣಬಹುದು. ಚಿತ್ರದುರ್ಗದ ಪಾಳೆಗಾರರು ಮೂಲತಃ ಬೇಡ ಜನಾಂಗದವರಾಗಿದ್ದು ವಾಲ್ಮೀಕಿ ಗೋತ್ರದ ಕಾಮಗೇತಿ ವಂಶಸ್ಥರು. ಇವರು ಆಂಧ್ರಪ್ರದೇಶದ ತಿರುಪತಿ ಬಳಿಯ ಜಡೆಕಲ್ ದುರ್ಗದಿಂದ ವಲಸೆ ಬಂದರೆನ್ನುವುದು ಪ್ರತೀತಿ. ಚಿತ್ರದುರ್ಗವನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಸುಮಾರು ೨೧೦ ವರ್ಷಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದಾರೆ.[೨೯] ಚಿತ್ರದುರ್ಗ ಪಾಳೆಯಪಟ್ಟನ್ನು ಕಟ್ಟಿದ ಕೀರ್ತಿ ಮತ್ತಿ ತಿಮ್ಮಣ್ಣ ನಾಯಕನಿಗೆ ಸಲ್ಲುತ್ತದೆ. ಈತನ ಆಡಳಿತದ ಕಾಲದಿಂದ ನಮಗೆ ಶಾಸನಗಳು ದೊರೆಯುತ್ತವೆ. ಕ್ರಿ.ಶ. ೧೫೬೮ರ ಹೊಳಲ್ಕೆರೆ ಶಾಸನವು ವೀರ ಪ್ರತಾಪ ಸದಾಶಿವರಾಯ ಮಹಾರಾಯನಿಗೆ ಸಂಬಂಧಿಸಿದ್ದಾಗಿದೆ. ಅಳಿಯ ರಾಮರಾಯನ

ಆಳ್ವಿಕೆಯ ಕಾಲದಲ್ಲಿ ತಿರುಮಲರಾಯನು ಹೊಳಲ್ಕೆರೆ ಸೀಮೆಯನ್ನು ಕಾಮಗೇತಿ ಕಸ್ತೂರಿ ಮದಕರಿ ನಾಯಕನಿಗೆ ನೀಡಿದನು ಎನ್ನುವ ವಿವರ ನೀಡುತ್ತದೆ. ಹೀಗೆ ವಿಜಯನಗರ ಅರಸರಿಂದ ಅಮರ ಮಾಗಣಿಯಾಗಿ ಪಡೆದ ಪಾಳೆಗಾರನು ನಂತರ ಹೊಳಲ್ಕೆರೆ ಸೀಮೆಯಿಂದ ಹಿರಿಯೂರು ಸೀಮೆಯ ಅಧಿಕಾರಿಯಾಗಿ, ಅಲ್ಲಿಂದ ಚಿತ್ರದುರ್ಗ ಸೀಮೆಯ ಅಧಿಕಾರಿಯಾಗಿ ನೇಮಕಗೊಂಡು ನಂತರ ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದನ್ನು ನೋಡುತ್ತೇವೆ.

ಮತ್ತಿ ತಿಮ್ಮಣ್ಣ ನಾಯಕನು ಹೊಳಲ್ಕೆರೆ ಸೀಮೆಯಿಂದ ಹಿರಿಯೂರು ಸೀಮೆಯ ಅಧಿಕಾರಿಯಾಗಿ ನೇಮಿಸಲ್ಪಟ್ಟ ಆನಂತರ ಇವರಿಗೆ ಚಿತ್ರದುರ್ಗದ ಅದಿಪತ್ಯ ದೊರೆಯಿತು. ಈತನು ಶೂರನೂ, ಸಾಹಸಿಯೂ ಆಗಿದ್ದನೆಂಬುದಕ್ಕೆ ಕೆಲವು ಘಟನೆಗಳು ಸಾಕ್ಷಿಯಾಗಿವೆ. ಚಿತ್ರದುರ್ಗವನ್ನು ಮುತ್ತಿದ ಸಾಳುವ ನರಸಿಂಹರಾಯನ ಪಾಳೆಯವನ್ನು ನುಗ್ಗಿ ಅಲ್ಲಿದ್ದ ಖಾಸಾ ಕುದುರೆಯನ್ನು ಬಿಚ್ಚಿ ತಂದಿದ್ದು, ಈ ಘಟನೆಯೊಂದಿಗೆ ಸಂದಿ ಮಾಡಿಕೊಂಡು ಕಲ್ಬುರ್ಗಿ ಕೋಟೆಯನ್ನು ಗೆದ್ದಿದ್ದು ಇತ್ಯಾದಿ ಘಟನೆಗಳು ಸಾಕ್ಷಿಯೆನಿಸಿವೆ. ಕಲ್ಬುರ್ಗಿ ಕೋಟೆಯನ್ನು ನಿಂದಿಸಿದ್ದರಿಂದ  ಇವನಿಗೆ "ಹಗಲು ಕಗ್ಗೊಲೆಯ ಮಾನ್ಯ" ಎಂಬ ಬಿರುದು ಬಂದಿತು. ತಿಮ್ಮಣ್ಣ ನಾಯಕ ಸಹಾಸಿಯಾಗಿದ್ದಂತೆ ಸ್ವಾಭಿಮಾನಿಯೂ ಸಹ ಆಗಿದ್ದನು ಈತನನ್ನು ವಿಜಯನಗರದ ಅರಸರು ಬರಮಾಡಿಕೊಂಡು ಸೆರೆಮನೆಯಲ್ಲಿಟ್ಟರು. ತಿಮ್ಮಣ್ಣ ಅಲ್ಲಿಯೇ ಮರಣ ಹೊಂದಿದನು. ಈತನ ಆಳ್ವಿಕೆಯ ಸಂದರ್ಭದಲ್ಲಿ ಚಿತ್ರದುರ್ಗ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕೋಟೆಗಳನ್ನು ಬಲಪಡಿಸಿದ್ದನು. ಈತನ ತರುವಾಯ ಇನ್ನೂ ಹಲವಾರು ನಾಯಕರುಗಳು ಚಿತ್ರದುರ್ಗ ಪಾಳೆಯ ಆಡಳಿತ ನಡೆಸಿದರು ಎಂದು ಹೇಳಬಹುದು. ಅವರುಗಳೆಂದರೆ ಭರಮಣ್ಣನಾಯಕ, ಓಬಣ್ಣನಾಯಕ, ಕಸ್ತೂರಿ ರಂಗಪ್ಪನಾಯಕ. ಈತನು ಧರ್ಮಪುರ ಪರಿಸರದ ವೇಣುಕಲ್ಲುಗುಡ್ಡದಲ್ಲಿ ಕೋಟೆಯನ್ನು ನಿರ್ಮಿಸಿ ಈ ಪ್ರದೇಶದ ಸುತ್ತಮುತ್ತಲಿನ ಆಡಳಿತ ನಡೆಸಿದ ವಿವರ ತಿಳಿಯುತ್ತದೆ. ಈತನ ತರುವಾಯ ಬಿಚ್ಚುಗತ್ತಿ ಭರಮಣ್ಣನಾಯಕ, ಓಬಣ್ಣನಾಯಕ, ಈತನು 'ಮದಕರಿ ನಾಯಕ' ಎಂಬ ಬಿರುದನ್ನು ಧರಿಸಿ ಕ್ರಿ.ಶ. ೧೬೭೨ ರವರೆಗೆ ಆಳ್ವಿಕೆ ನಡೆಸಿದನು. ಈತನ ಆಡಳಿತಾವದಿಯಲ್ಲಿ ಚಿತ್ರದುರ್ಗವು ಸ್ವಾತಂತ್ರ್ಯ ರಾಜ್ಯವಾಯಿತು. ತದನಂತರ ಹೈದರನಿಗೆ ಮದಕರಿನಾಯಕನು ಸುಲಭವಾಗಿ ಸೆರೆಸಿಕ್ಕನು. ಹೀಗೆ ಹಿರೇಮದಕರಿನಾಯಕನನ್ನು ಸೆರೆಹಿಡಿಯುವುದರ ಮೂಲಕ ಹೈದರಾಲಿಯು ಚಿತ್ರದುರ್ಗ ಸಂಸ್ಥಾನವನ್ನು ಮೈಸೂರು ಸಂಸ್ಥಾನದಲ್ಲಿ ವಿಲೀನಗೊಳಿಸಿಕೊಂಡನು.[೨೦]

ಧರ್ಮಪುರ ಪರಿಸರದಲ್ಲಿ ಪಾಳೇಗಾರರಿಗೆ ಸಂಬಂದಿಸಿದ ಕೆಲವು ಮಾಹಿತಿಗಳು ಲಭ್ಯವಾಗಿದ್ದು ಪಾಳೆಗಾರರು ಆಳ್ವಿಕೆ ನಡೆಸಿದ್ದುದರ ಬಗ್ಗೆ ಅನೇಕ ಮಾಹಿತಿಗಳಿವೆ. ವೇಣುಕಲ್ಲುಗುಡ್ಡದಲ್ಲಿ ಕಸ್ತೂರಿ ರಂಗಪ್ಪನಾಯಕನು ಕೋಟೆಯನ್ನು ನಿರ್ಮಿಸಿ ಆಳ್ವಿಕೆ ನಡೆಸಿದ್ದುದು

ಇದೇ ಪ್ರದೇಶದಲ್ಲಿನ ಕಣಜನಹಳ್ಳಿಯನ್ನು ನಿಡಗಲ್ಲು ಸಂಸ್ಥೆಗೆ ಸೇರಿದ್ದು.[೩೧] ನಿಡುಗಲ್ಲಿನಿಂದ ಸಂಡೂರು ಸಂಸ್ಥಾನಕ್ಕೆ ಸೇನೆ ಮುಂತಾದುವುಗಳನ್ನು ಈ ಮಾರ್ಗದಲ್ಲಿ ಸಂಚರಿಸುತ್ತಿದ್ದರು. ಈ ಹಳ್ಳಿಯನ್ನು ಪಾಳೆಗಾರರ ಧವಸ ಧಾನ್ಯಗಳನ್ನು ರಕ್ಷಿಸಲು ಕಣಜಗಳನ್ನು ಮತ್ತು ರಕ್ಷಣೆಗಾಗಿ ಬೃಹತ್ತಾದ ಬತೇರಿಯನ್ನು ನಿರ್ಮಿಸಿಕೊಂಡಿರುವುದು ರತ್ನಗಿರಿ ಪಾಳೆಗಾರರು ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ವಸೂಲಾದ ಕಂದಾಯ ಪೂಗದಿ ಮುಂತಾದವುಗಳನ್ನು ಸಂಗ್ರಹಿಸಲು ಈ ಊರಿನ ಸುತ್ತಮುತ್ತಲಿನಲ್ಲಿ ನೂರಾರು ಕಣಜಗಳನ್ನು ಈಗಲೂ ನೋಡಬಹುದಾಗಿದೆ.

ಹರ್ತಿಕೋಟೆಯು ಪಾಳೆಗಾರರು ಸಹ ಬಳಸಿಕೊಂಡಿದ್ದರು ಎನ್ನಲಾಗಿದ್ದು ಹರ್ತಿನಾಯಕರಿಗೆ ಸಂಬಂಧಿಸಿದ ಶಾಸನಗಳು ಹಿರಿಯೂರು, ಚಳ್ಳಕೆರೆ, ಚಿತ್ರದುರ್ಗ ತಾಲ್ಲೂಕುಗಳಲ್ಲಿ ದೊರೆತಿವೆ. ಈ ಶಾಸನಗಳಿಂದ ಹರ್ತಿಕೋಟೆಯ ಪಾಳೆಯಗಾರರಲ್ಲಿ ಹದಿನಾಲ್ಕು ರಾಜರು ಮುಖ್ಯರಾಗಿದ್ದಾರೆ. ಅವರುಗಳಲ್ಲಿ ಪ್ರಮುಖವಾಗಿ ಹರತಿಯ ತಿಮ್ಮೇಂದ್ರ (ತಿಪ್ಪರಾಜ) ಚಿಕ್ಕತಿಪ್ಪನಪಾಲ, ಹೊಟ್ಟೆಪ್ಪನಾಯಕ, ವೀರಹೊಟ್ಟೆಣ್ಣ ನಾಯಕ ಮುಂತಾದವರನ್ನು ಉಲ್ಲೇಖಿಸಬಹುದಾಗಿದೆ. ಕ್ರಿ.ಶ. ೧೫೩೩–೧೭೩೯ ರವರೆಗಿನ ಶಾಸನಗಳು ಹರತಿ ಪಾಳೆಗಾರರ ಬೆಳವಣಿಗೆಯನ್ನು ತಿಳಿಯಲು ಸಹಾಯಕವಾಗಿವೆ. ಚಿತ್ರದುರ್ಗ ಪಾಳೆಗಾರರಿಗಿಂತಲೂ ಮೊದಲೇ ಇವರು ಅಸ್ತಿತ್ವದಲ್ಲಿದ್ದವರೆಂದು ಮೇಲಿನ ಶಾಸನಗಳಿಂದ ತಿಳಿದು ಬರುತ್ತದೆ.[೩೨] ಇವರು ಹರ್ತಿಕೋಟೆಯನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದ್ದಾರೆ. ತಿಪ್ಪಳನಾಯಕನು ಮಾಚೀಸಮುದ್ರ, ಗೋಸಿಕೆರೆಗಳನ್ನು ಕಟ್ಟಿಸಿ ಬಿಜಾಪುರದಲ್ಲಿ ನೆಲೆಸಿದ್ದ ತನ್ನ ಹಿರಿಯರ ನೆನಪಿಗಾಗಿ ತಾನು ಕಟ್ಟಿಸುವ ಪಟ್ಟಣಗಳಿಗೆ ಹರತಿ ದೊಡ್ಡೇರಿಗಳೆಂದು ಹೆಸರಿಟ್ಟನು. ಈತನ ಕಾಲದಲ್ಲಿ ಚಿತ್ರದುರ್ಗದಿಂದ ಪಾವಗಡದವರೆಗೆ, ಮೊಳಕಾಲ್ಮೂರಿನಿಂದ ಸಿರಾದವರೆಗೆ ಇವನ ರಾಜ್ಯ ವಿಸ್ತಾರಗೊಂಡಿತ್ತು. ತನ್ನ ಕೊನೆಯ ಕಾಲದಲ್ಲಿ ಏಳು ಜನ ಮಕ್ಕಳಿಗೆ ರಾಜ್ಯವನ್ನು ಹಂಚಿಕೊಟ್ಟಿದ್ದಾನೆ. ಹರತಿ ನಾಯಕರಲ್ಲಿ ವೀರಹೊಟ್ಟೆಣ್ಣ ನಾಯಕನೆಂಬುವನು ಬಹಳ ಪ್ರಸಿದ್ಧವಾದವನು. ಬಿಜಾಪುರದ ಸೇನೆಯ ದಾಳಿಯಿಂದ ಹರತಿ ಪಾಳೆಗಾರರು ನಿಡುಗಲ್ಲನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಹರತಿ ನಿಡುಗಲ್ಲು ನಾಯಕರೆಂದೇ ಪ್ರಸಿದ್ಧರಾಗಿದ್ದರು. ಹರ್ತಿ ಕೋಟೆ ಗ್ರಾಮದಲ್ಲಿ ಕಲ್ಲೇದೇವರ ಗುಡಿಯ ಬಯಲಿನಲ್ಲಿ ಕೋಟೆ ಪ್ರದೇಶವಿದ್ದು ಈ ಕೋಟೆಗೆ ಕಸ್ತೂರಿ ರಂಗಪ್ಪನಾಯಕರ ಕೋಟೆಯೆಂದೇ ಹೆಸರಿದೆ. ಆದರೆ ಕೋಟೆಯ ಅವಶೇಷಗಳು ಇತ್ತೀಚಿನ ದಿನಗಳಲ್ಲಿ ನಶಿಸಿ ಹೋಗಿವೆ. ಅಲ್ಪಸ್ವಲ್ಪ ದೇವಾಲಯಗಳು ಅಂದರೆ ಅಹೋಬಲ ನರಸಿಂಹಸ್ವಾಮಿ, ವೀರಮಾಸ್ತಿಕಲ್ಲುಗಳು ಮಾತ್ರ ಉಳಿದಿವೆ. ಕೆಲ ನಾಯಕರುಗಳ ಸಮಾದಿಗಳನ್ನು ಕಾಣಲಾಗಿದ್ದು ಸಮಾಧಿಗಳ ಮೇಲೆ ಪಾಳೆಗಾರರ ಹೆಸರುಗಳನ್ನು ಬರೆಯಲಾಗಿದೆ.

ಹೀಗೆ ಪ್ರಸ್ತುತ ಧರ್ಮಪುರ ಪರಿಸರದ ಸುತ್ತಮುತ್ತಲಿನ ಪ್ರದೇಶಗಳಾದ ವೇಣುಕಲ್ಲುಗುಡ್ಡ, ಕಣಜನಹಳ್ಳಿ, ಹರ್ತಿಕೋಟೆ, ಪಿ.ಡಿ.ಕೋಟೆ, ಶಿಡ್ಲಯ್ಯನಕೋಟೆ, ಪಾಳೆಗಾರರ ಕೇಂದ್ರಗಳಾಗಿಯೂ ಆಡಳಿತ ಗ್ರಾಮಗಳಾಗಿಯೂ ನಿರ್ಮಿಸಿದ ಕೋಟೆ ಕೊತ್ತಲುಗಳು, ವೀರಮಾಸ್ತಿಕಲ್ಲುಗಳು, ದೇವಾಲಯಗಳು ಇಂದಿಗೂ ಕಂಡುಬರುತ್ತವೆ. ಧರ್ಮಪುರ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗಿ ಚಿತ್ರದುರ್ಗ ಪಾಳೆಗಾರರ ಆಳ್ವಿಕೆವರೆಗೂ ನಿರಂತರವಾಗಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಂದ ಕೂಡಿ ಬೆಳೆದು ಬಂದಿದೆ. ಪಾಳೆಗಾರರ ನಂತರವು ಸಹ ಈ ಪ್ರದೇಶವು ಮೈಸೂರು ಸಂಸ್ಥಾನದಲ್ಲಿ ಮುಂದುವರೆದಿದ್ದು ತನ್ನದೇ ಆದ ಸಾಂಸ್ಕೃತಿಕ ಕುರುಹುಗಳನ್ನು ಉಳಿಸಿಕೊಂಡು ಬಂದಿದೆ ಈ ಭಾಗದ ಇತಿಹಾಸವನ್ನು ವಾಸ್ತವವಾಗಿ ಅರಿಯುವುದಾದರೆ ಮೌರ್ಯ ಪೂರ್ವಕಾಲದಿಂದಲೇ ಅಂದರೆ ಹಳೆ ಶಿಲಾಯುಗ ಕಾಲದಿಂದ ಹಿಡಿದು ಮಾನವನ ಜೀವನದ ವಿವಿಧ ಹಂತಗಳ ಮೆಟ್ಟಲುಗಳನ್ನು ಏರುತ್ತ ಬಂದಿದೆ. ಇದಕ್ಕೆ ಪೂರ್ವಕವಾದಂತಹ ಶಿಲೋಪಕರಣಗಳು, ಮಡಿಕೆಕುಡಿಕೆಗಳು, ಸಮಾಧಿ ಸ್ಥಳಗಳು ಕಂಡುಬರುತ್ತವೆ. ಮೌರ್ಯರ ನಂತರವಾಗಿ ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ನೂಳಂಬರು, ಸೇವಣರು, ಹೊಯ್ಸಳರು, ವಿಜಯನಗರದ ಅರಸರು ಹಾಗೂ ಪಾಳೆಯಗಾರರು ಸಹ ಪ್ರಸ್ತುತ ಪ್ರದೇಶವನ್ನು ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ಎಲ್ಲಾ ದೃಷ್ಟಿಕೋನದಿಂದ ಬೆಳೆಸಿ ಆಳ್ವಿಕೆ ನಡೆಸಿದರು ಎಂದು ಹೇಳಬಹುದು. ಇದಕ್ಕೆ ಆಧಾರಗಳು ಆಯಾಕಾಲದ ಶಾಸನಗಳು, ದೇವಾಲಯಗಳು ಶಿಲ್ಪಗಳು, ಸ್ಮಾರಕ ಶಿಲ್ಪಗಳು, ಕೋಟೆಕೊತ್ತಲುಗಳು, ಹಾಗೂ ಇತ್ಯಾದಿ ಅವಶೇಷಗಳು ಇಂದಿಗೂ ಉಳಿದುಕೊಂಡು ಬಂದಿವೆ. ಕೆಲವು ನಶಿಸಿ ಹೋಗಿ ಅಳಿವಿನ ಅಂಚಿನಲ್ಲಿವೆ.

**ಅಡಿಟಿಪ್ಪಣಿಗಳು**

೧. ಹೂಗಾರ. ಬಿ.ಪಿ., ಪ್ರಾಚೀನ ಭಾರತದ ಇತಿಹಾಸ, ಪುಟ-೪೪

೨. ಸುರೇಶ, ಬಿ., ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪುಟ-೧೦

೩. ಅದೇ, ಪುಟ-೧೦

೪. ಸುರೇಶ ಬಿ., ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪುಟ-೧೧

೫. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನಯುಗ, ಪುಟ-೨೦೭

೬. ಅದೇ, ಪುಟ-೨೧೩

೭. ಕರ್ನಾಟಕದ ಪರಂಪರೆ, ಭಾಗ-೧, (ಚಾರಿತ್ರಿಕಯುಗ), ಪುಟ-೧೧೭

೮. Krishna M.H., Excavation at Chandravalli and Bramhagiri, P.271

೯. Ibid-P.277

೧೦. Ibid-P.278

೧೧. ಸುರೇಶ ಬಿ., ಪೂರ್ವೋಕ್ತ, ಪುಟ-೧೮

೧೨. ಶ್ರೀನಿವಾಸ ಎಂ.ವಿ., ಮತ್ತು ಲಕ್ಷ್ಮಣ್ ತೆಲಗಾವಿ, (ಸಂ), ಚಂದ್ರವಳ್ಳಿ, ಪುಟ-೧೩

೧೩. ಎ.ಕ. ಸಂ. XI, ಸಂಖ್ಯೆ-೩೯, ಹಿರಿಯೂರು, ಪುಟ-೩೦೨

೧೪. ಅದೇ ಸಂಖ್ಯೆ-೭೬, ಚಿತ್ರದುರ್ಗ, ಪುಟ-೪೬

೧೫. ಅದೇ ಸಂಖ್ಯೆ-೨೩, ಹಿರಿಯೂರು, ಪುಟ-೨೯೬

೧೬. ಅದೇ ಸಂಖ್ಯೆ-೩೭, ಹಿರಿಯೂರು,ಪುಟ-೩೦೧

೧೭. ಪೂರ್ವೋಕ್ತ (ಸಂ) ಚಂದ್ರವಳ್ಳಿ, ಪುಟ-೨೦

೧೮. ಬಸವರಾಜು ಕೆ.ಆರ್., (ಸಂಪಾದನ ಗ್ರಂಥ) ನೊಳಂಬ ಇತಿಹಾಸ ದರ್ಶನ, ಪುಟ-೧೮

೧೯. ಅದೇ ಪುಟ-೧೯

೨೦. ಅದೇ ಪುಟ-೧೯

೨೧. ಅದೇ ಪುಟ-೨೦

೨೨. ಎ.ಕ. ಸಂ. XI, ಹಿರಿಯೂರು -೩೩

೨೩. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ, (ಸಂ.), ಚಂದ್ರವಳ್ಳಿ, ಪುಟ-೩೫

೨೪. ಎ.ಕ. ಸಂ. XI, ಚಿತ್ರದುರ್ಗ-೧೬

೨೫. ಅದೇ ಹಿರಿಯೂರು-೭೦

೨೬. ಶ್ರೀನಿವಾಸ ಎಂ.ವಿ., ಲಕ್ಷ್ಮಣ ತೆಲಗಾವಿ, (ಸಂ.), ಪೂರ್ವೋಕ್ತ, ಪುಟ-೩೬

೨೭. ಎ.ಕ. ಸಂ. XI ,ಸಂಖ್ಯೆ-೨೨ ಹಿರಿಯೂರು, ಪುಟ ೩೦೨

೨೮. ಅದೇ ಸಂಖ್ಯೆ-೨೯, ಹಿರಿಯೂರು, ಪುಟ-೨೯೮

೨೯. ಸುರೇಶ ಬಿ., ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪುಟ-೩೧

೩೦. ಚಿತ್ರದುರ್ಗ ಜಿಲ್ಲಾ ಗೆಜೆಟೀಯರ್

೩೧. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ-೩೫೨

೩೨. ಅದೇ, ಪುಟ-೩೮೫

* * *

### ೩.೩. ಸ್ಥಳ ಪುರಾಣ

ಸ್ಥಳಪುರಾಣಗಳು ಚರಿತ್ರೆಯ ಪ್ರಮುಖ ಆಧಾರಗಳಾಗಿವೆ, ಪುರಾಣಗಳು ಎಂದರೆ ಈ ಹಿಂದೆ ನಡೆದ ಘಟನೆಗಳು ಎಂದು ಹೇಳಲಾಗಿದೆ. ಇವು ಗತಿಸಿದ ಘಟನೆಗಳನ್ನು ಮತ್ತು ನೀತಿಯನ್ನು ತಿಳಿಸುತ್ತವೆ. ಪುರಾಣಗಳು ಅರಸರ ಜೀವನ, ವಂಶಾವಾಳಿ, ಸಂತರ ಜೀವನ ವೃತ್ತಾಂತರ ದೇವರ ಅವತಾರ ಕಥೆಗಳನ್ನು ಒಳಗೊಂಡಿರುತ್ತವೆ.[೧] ಪುರಾಣಗಳಲ್ಲಿ ಅತೀವ ವರ್ಣನೆ ಮತ್ತು ಕಾಲಗಣನೆ ಇಲ್ಲದಿರುವುದು ಪ್ರಮುಖ ದೋಷವಾಗಿದೆ. ಸ್ಥಳಪುರಾಣಗಳು ಒಂದು ಪ್ರದೇಶದ ಧಾರ್ಮಿಕ ಮಹತ್ವವನ್ನು ಹಾಗೂ ಆ ಪ್ರದೇಶದೊಂದಿಗೆ ದೇವತೆಗಳು ಹೊಂದಿರುವ ಸಂಬಂಧವನ್ನು ತಿಳಿಸುತ್ತವೆ.

ಧರ್ಮಪುರ ಪ್ರದೇಶವು ಪುರಾಣದ ಹಿನ್ನೆಲೆಯನ್ನು ಹೊಂದಿರುವ ಪ್ರದೇಶವಾಗಿದೆ. ಇದಕ್ಕೆ ಬಹುಮುಖ್ಯ ಕಾರಣವೇನೆಂದರೆ ಧರ್ಮಪುರದಲ್ಲಿ ಪಂಚಲಿಂಗಗಳಿರುವುದು. ಪಾಂಡವರು ವನವಾಸದ ಸಂಧರ್ಭದಲ್ಲಿ ಧರ್ಮಪುರದಲ್ಲಿ ಕೆಲವು ದಿನಗಳು ತಂಗಿದ್ದರೆಂಬ ಪ್ರತೀತಿ ಇದೆ. ಈ ಕಾರಣದಿಂದ ಈಗಲೂ ಸಹ ಧರ್ಮಪುರದ ಜನತೆಗೆ ಪಾಂಡವರ ಮೇಲೆ ವಿಶೇಷವಾದ ಪ್ರೀತಿ ಇರುವುದನ್ನು ಕಾಣಬಹುದಾಗಿದೆ. ಪಾಂಡವರು ವನವಾಸ ಅನುಭವಿಸುವ ಸಂದರ್ಭದಲ್ಲಿ ಈ ಗ್ರಾಮಕ್ಕೆ ಬರುವುದರೊಂದಿಗೆ ಇಲ್ಲಿನ ಕಥೆ ಆರಂಭವಾಗಿರುತ್ತದೆ.

ವನವಾಸದಲ್ಲಿದ್ದ ಪಾಂಡವರು ಪಯಣಿಸುತ್ತಿರುವ ಸಂಧರ್ಭದಲ್ಲಿ ಇಲ್ಲಿಗೆ ಬರುವಷ್ಟರಲ್ಲಿ ಕತ್ತಲೆಯಾಗಿದ್ದರಿಂದ ಮಾರ್ಗದಲ್ಲೇ ಇದ್ದ ಈ ಧರ್ಮಪುರ ಗ್ರಾಮದಲ್ಲಿ ತಂಗುತ್ತಾರೆ. ನಂತರ ಅವರು ಅಡುಗೆಯನ್ನು ಮಾಡಿಕೊಳ್ಳುವುದಕ್ಕಾಗಿ ಸೌದೆಯನ್ನು ತರಲು ಹೊರಟರು. ಸೌದೆಯನ್ನು ಹುಡುಕುತ್ತಾ ಹೊರಟ ಪಾಂಡವರಿಗೆ ಎಲ್ಲೊ ಒಂದು ಕಡೆ ಮರದ ಚಕ್ಕೆಗಳು ದೊರೆತವು. ಹೀಗೆ ಸಿಕ್ಕಂತಹ ಚಕ್ಕೆಗಳನ್ನು ನೋಡಿದಾಗ ಅದರಲ್ಲಿ ಬುಡ, ಯಾವುದು? ತುದಿಯಾವುದು? ಎಂದು ತಿಳಿಯದೆ ಹೋಯಿತು. ಇದರಿಂದ ಮುಂದೆ ಸೌದೆಯನ್ನು ಹುಡುಕುತ್ತಾ ಹೊರಟರು. ಸೌದೆ ಸಿಗದೆ ಅವರು ಒಲೆಯನ್ನು ಹೊತ್ತಿಸಲಿಲ್ಲ. ಹೀಗಾಗಿ ಅಂದು ಪಾಂಡವರು ಅಡುಗೆಯನ್ನು ಮಾಡದೇ ಉಪವಾಸದಿಂದಿರಬೇಕಾಯಿತಂತೆ.[೨]

ಪಾಂಡವರು ತುಂಬಾ ಸಂಪ್ರದಾಯವಾದಿಗಳಾಗಿದ್ದರಿಂದ ಹಿಂದೂ ಸಂಪ್ರದಾಯದ ಪ್ರಕಾರ ಬುಡದ ಕಡೆಯಿಂದಲೇ ಒಲೆಗೆ ಸೌದೆಯನ್ನು ಇಡಬೇಕಾದುದು ನಿಯಮವಾದ್ದರಿಂದ ಬುಡ ತುದಿ ಒಂದೂ ತಿಳಿಯದೆ ಸೌದೆಯನ್ನು ಅವರು ಬಳಸಿ ಅಡುಗೆ ಮಾಡಲಿಲ್ಲ. ಇದರಿಂದಾಗಿ ಅವರು ಇಡೀ ರಾತ್ರಿ ಉಪವಾಸದಿಂದಲೇ ಇರುತ್ತಾರೆ. ಹೀಗಾಗಿ ಈ ಊರಿಗೆ ಉಪವಾಸಪುರ ಎಂಬ ಹೆಸರು ಬರುತ್ತದೆ. ತದನಂತರವಾಗಿ ಈ ಗ್ರಾಮಕ್ಕೆ ಧರ್ಮಪುರ ಎಂದು ಮರುನಾಮಕರಣವಾಯಿತು ಎನ್ನುವುದು ಸ್ಥಳೀಯರ ಅಭಿಮತ.

ಹೀಗೆ ಪಾಂಡವರು ಉಪವಾಸ ಇದ್ದ ಕಾರಣದಿಂದಾಗಿ ಆಧುನಿಕ ಕಾಲದಲ್ಲಿ ಅಂದರೆ ಈಗಲೂ ಸಹ ಈ ಗ್ರಾಮದಲ್ಲಿ ಪ್ರತಿದಿನ ೫ ಜನ ಯಾವುದಾದರೂ ಒಂದು ಕಾರಣದಿಂದ ಉಪವಾಸ ಇರುತ್ತಾರಂತೆ. ಈ ನಂಬಿಕೆ ಅಂದಿನಿಂದ ಇಂದಿನವರೆವಿಗೂ ಪ್ರತೀತಿಯಾಗಿ ಉಳಿದು ಬಂದಿದೆ.[೬]

ಪಾಂಡವರು ವನವಾಸ ಮಾಡುತ್ತಿದ್ದಂತಹ ಸಂದರ್ಭದಲ್ಲಿ ಧರ್ಮಪುರ ಗ್ರಾಮದಲ್ಲಿ ಕೆಲವು ದಿನಗಳ ಕಾಲ ತಂಗಿದ್ದರು ಎಂಬ ಕಾರಣದಿಂದ ಅಂದಿನ ನೊಳಂಬವಾಡಿ ೩೨೦೦೦ ಆಡಳಿತ ನಡೆಸುತ್ತಿದ್ದಂತಹ ರಾಜರುಗಳು ಈ ಗ್ರಾಮದಲ್ಲಿ ಪಂಚಲಿಂಗಗಳನ್ನು ಪ್ರತಿಷ್ಠಾಪಿಸಿದ್ದಾರೆ. ಈ ಪಂಚ ಲಿಂಗಗಳನ್ನು ಇಂದಿಗೂ ಸಹ ಕಾಣಬಹುದು. ಆದರೆ ಈಗ ಪಂಚಲಿಂಗಗಳ ದೇವಾಲಯಗಳು ನಶಿಸಿ ಹೋಗುವಂತಹ ಅಂಚಿನಲ್ಲಿವೆ. ನೊಳಂಬ ಮನೆತನದವರು ಶೈವಧರ್ಮದವರಾಗಿದ್ದರಿಂದ ಪಾಂಡವರನ್ನು ಲಿಂಗರೂಪದಲ್ಲಿ ಕಾಣಲು ಇಷ್ಟಪಟ್ಟರು. ಇದರಿಂದಾಗಿ ಪಂಚಲಿಂಗಗಳನ್ನು ನಿರ್ಮಿಸಿದ್ದಾರೆ. ಅವುಗಳೆಂದರೆ ಧರ್ಮಲಿಂಗೇಶ್ವರ, ಭೀಮಲಿಂಗೇಶ್ವರ, ನಕುಲ ಮತ್ತು ಸಹದೇವ, ಅರ್ಜುನ ದೇವಾಲಯಗಳು. ಈ ರೀತಿ ಪಂಚಲಿಂಗಗಳನ್ನು ಹೊಂದಿರುವ ಕೆಲವೇ ಗ್ರಾಮಗಳನ್ನು ನಾವು ಭಾರತದಾದ್ಯಂತ ಕಾಣುತ್ತೇವೆ. ಅದೇ ರೀತಿ ಚಿತ್ರದುರ್ಗ ಜಿಲ್ಲೆಯಲ್ಲಿರುವ ಚಂದ್ರವಳ್ಳಿಯಲ್ಲಿ ಇದೇ ರೀತಿಯ ಪಂಚಲಿಂಗಳಿರುವುದು ಕಂಡುಬರುತ್ತದೆ. ಇಲ್ಲಿಯೂ ಸಹ ಅವುಗಳನ್ನು ಪಾಂಡವರ ಹೆಸರಿನಿಂದ ಕರೆಯಲಾಗುತ್ತಿರುವುದೆ ಗಮನಾರ್ಹ ಸಂಗತಿ.

**ಯಕ್ಷ ಸರೋವರ**

ಧರ್ಮಪುರ ಹೊರವಲಯದಲ್ಲಿ ಒಂದು ಬೃಹತ್ತಾದ ಕೆರೆ ಇದೆ. ಈ ಕೆರೆಯ ಕುರಿತು ಒಂದು ಇತಿಹಾಸ ಅಡಗಿರುವುದನ್ನು ನಾವು ಕಾಣುತ್ತೇವೆ. ಸಾವಿರಾರು ಎಕರೆ ಪ್ರದೇಶವನ್ನು ಒಳಗೊಂಡಿರುವ ಈ ಕೆರೆಯಲ್ಲಿ ಇಂದು ನೀರಿಲ್ಲ. ಈ ಕೆರೆ ೧೯೮೦ರಿಂದೀಚೆಗೆ ತುಂಬಿಲ್ಲವಂತೆ. ಈ ಹಿಂದೆ ಈ ಕೆರೆಯು ಸದಾಕಾಲ ನೀರಿನಿಂದ ತುಂಬಿರುತ್ತಿತ್ತು. ಇದರಿಂದ ಧರ್ಮಪುರದ ಸುತ್ತಮುತ್ತಲಿನ ಹಳ್ಳಿಯ ಜನರು ಈ ಕೆರೆಯ ನೀರನ್ನು ಯತೇಚ್ಛವಾಗಿ ಬಳಸಿಕೊಂಡು ಸಮೃದ್ಧವಾದ ಬೆಳೆಗಳನ್ನು ಬೆಳೆದು ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ಕೆರೆಯಲ್ಲಿ ನೀರಿನ ಪ್ರಮಾಣ ಕುಸಿದಿದೆ. ಈ ಹಿಂದೆ ಪಾಂಡವರು ಧರ್ಮಪುರಕ್ಕೆ ಬಂದಾಗ ನೀರು ಕುಡಿಯಲು ಒಬ್ಬೊಬ್ಬರಾಗಿ ಈ ಕೆರೆಗೆ ಹೋದರಂತೆ. ಹೀಗೆ ಹೋದವರು ಹಿಂದಿರುಗಲೇ ಇಲ್ಲವಂತೆ. ಕೊನೆಯದಾಗಿ ಧರ್ಮರಾಯ ಯೋಚಿಸುತ್ತಾ ನೀರು ಕುಡಿಯಲು ಹೋದವರು, ಎಷ್ಟು ಹೊತ್ತಾದರೂ ಬರಲಿಲ್ಲವಲ್ಲ ಎಂದು ಅರಿತು ತಾನು ಆ ಕೆರೆಯ ಬಳಿಹೋದ ಆಗ. ನೀರು ಕುಡಿಯಲು ಹೋದವರೆಲ್ಲಾ ಮೂರ್ಛೆ ಬಿದ್ದಿದ್ದರು. ಆ ಸರೋವರದಲ್ಲಿ

ಒಬ್ಬ ಯಕ್ಷ ಇದ್ದನಂತೆ ಆತನನನ್ನು ವಿಚಾರಿಸಲು ಇಲ್ಲಿಗೆ ಬಂದವರಿಗೆಲ್ಲಾ ಒಂದೊಂದು ಪ್ರಶ್ನೆ ಕೇಳುತ್ತೇನೆ, ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲು ವಿಫಲರಾದರು ಎಂದು ಹೇಳಿತು. ಹಾಗೆಯೇ ಧರ್ಮರಾಯನಿಗೂ ಸಹ ಯಕ್ಷನು ಪ್ರಶ್ನೆ ಹಾಕುತ್ತಾ ಈ ಪ್ರಶ್ನೆಗೆ ಉತ್ತರಿಸಿದರೆ ಮೂರ್ಚೆಗೊಂಡವರು ಎಚ್ಚರವಾಗುತ್ತಾರೆ ಎಂದು ಪ್ರಶ್ನೆ ಹಾಕಿದ. ತದನಂತರ ಧರ್ಮರಾಯನು ಯಕ್ಷನ ಪ್ರಶ್ನೆಗೆ ಉತ್ತರಿಸಿದನಂತೆ ಮೂರ್ಚೆಗೊಂಡವರು ಎಚ್ಚೆತ್ತುಕೊಂಡರಂತೆ. ಇದರಿಂದಾಗಿ ಈ ಕೆರೆಗೆ "ಯಕ್ಷಸರೋವರ" ಎಂಬ ಹೆಸರು ಬಂದಿತಂತೆ. ಕೆರೆಗೆ ಈಗಲೂ ಸಹ ಅದೇ ಹೆಸರಿನಿಂದ ಕರೆಯಲಾಗುತ್ತಿದ್ದು ಹೀಗೆ ಧರ್ಮಪುರದ ಕೆರೆಯ ವಿಷ ಸರೋವರ ಅಥವಾ ಯಕ್ಷ ಸರೋವರವಾಗಿ ತನ್ನದೇ ಆದ ಒಂದು ಸ್ಥಳ ಪುರಾಣವನ್ನು ಒಳಗೊಂಡಿದೆ.[9]

## ಧರ್ಮಪುರದ ಕೆರೆಯಲ್ಲಿ ಕಪ್ಪೆಯ ವಿಶಿಷ್ಟತೆ

ಧರ್ಮಪುರದಲ್ಲಿ ಪಾಂಡವರು ವನವಾಸದ ಸಂದರ್ಭದಲ್ಲಿ ಕೆಲ ಕಾಲ ತಂಗಿದ್ದರು ಎಂದು ಈ ಹಿಂದೆಯೇ ತಿಳಿದುಕೊಳ್ಳಲಾಗಿದೆ. ಹೀಗೆ ವನವಾಸಕ್ಕೆ ಬಂದ ಪಾಂಡವರಲ್ಲಿ ಭೀಮನಿಗೆ ಬಾಯಾರಿಕೆಯಾದಾಗ ಅವಸರವಾಗಿ ಕೆರೆಯ ನೀರನ್ನು ಕುಡಿಯಲು ಬೊಗಸೆಯಲ್ಲಿ ಕೆರೆಯ ನೀರನ್ನು ತೆಗೆದುಕೊಂಡನಂತೆ. ಆಗ ಅವನ ಬೊಗಸೆಯಲ್ಲಿ ಕಪ್ಪೆಯೊಂದು ಬಂದಿತು. ಆಗ ಭೀಮನು ಅತೃಪ್ತಿಯಿಂದ ಕೈಯಲ್ಲಿದ್ದ ಕಪ್ಪೆಯನ್ನು ತೆಗೆದು ಏರಿಯ ಮೇಲೆ ಎಸೆದು, ಈ ಕೆರೆಯಲ್ಲಿ ಕಪ್ಪೆಗಳು ವಾಸಿಸಬಾರದೆಂದು ಶಾಪವಿತ್ತನಂತೆ. ಅಂದಿನಿಂದ ಇಂದಿನವರೆವಿಗೂ ಕಪ್ಪೆಗಳು ಮಾತ್ರ ಅಲ್ಲಿ ಇರುವುದಿಲ್ಲ. ಕೆರೆಯ ಅಕ್ಕಪಕ್ಕದಲ್ಲಿ ಕೋಡಿಯ ಕೆಳಭಾಗದಲ್ಲಿ ಮಾತ್ರ ಕಪ್ಪೆಗಳು ವಾಸಿಸುತ್ತವೆಯಂತೆ ಆದರೆ ಕೆರೆಯ ಅಂಗಳದಲ್ಲಿ ಮಾತ್ರ ಕಪ್ಪೆಗಳು ಕಾಣಬರುವುದಿಲ್ಲ.[10]

## ನೀರಗಂಟಿ ಶ್ರವಣಪ್ಪನ ದುರಂತ ಕಥೆ

ಈ ಧರ್ಮಪುರ ಗ್ರಾಮದಲ್ಲಿ ನೀರಗಂಟಿ ಶ್ರವಣಪ್ಪನ ಮತ್ತೊಂದು ದುರಂತ ಕಥೆಯನ್ನು ಕಾಣಬಹುದು. ಶ್ರವಣಪ್ಪನ ಆಳೆತ್ತರದ ಪ್ರತಿಮೆಯನ್ನು ಕೆರೆ ಕೋಡಿಯ ಬಳಿ ಆತನ ನೆನಪಿಗಾಗಿ ನಿಲ್ಲಿಸಲಾಗಿದೆ.

ಈ ಹಿಂದೆ ಊರನ್ನು ನೋಡಿಕೊಳ್ಳಲು ತಳವಾರನನ್ನು ನೇಮಿಸುವ ಪದ್ಧತಿಯಿತ್ತು. ಹಾಗೆಯೇ ಕೆರೆಯನ್ನು ನೋಡಿಕೊಳ್ಳಲು ಒಬ್ಬ ನೀರಗಂಟಿಯನ್ನು ಊರಿನ ಹಿರಿಯರು ನೇಮಿಸುತ್ತಿದ್ದರು. ಅದರಂತೆ ಧರ್ಮಪುರದ ಕೆರೆಯನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಶ್ರವಣಕುಮಾರನಿಗೆ ವಹಿಸಿದ್ದರು. ಈ ಶ್ರವಣಕುಮಾರನು ಶೂದ್ರವರ್ಗಕ್ಕೆ ಸೇರಿದವನೆಂದು ಕೆಲವರು ಹೇಳುತ್ತಾರೆ.[11] ಆದರೆ ಇದು ವಿವಾದದಿಂದ ಕೂಡಿದೆ. ಈ ನೀರಗಂಟಿ ಶ್ರವಣಕುಮಾರ ಯಾವ ವರ್ಗಕ್ಕೆ ಸೇರಿದವನು ಎನ್ನುವ ಗೊಂದಲವನ್ನು ಕೈ ಬಿಟ್ಟರೆ ಈತ ಜಿನ ವ್ಯಕ್ತಿಯೋ?

ಹಿಂದೂ ವ್ಯಕ್ತಿಯೋ? ಎಂಬುದು ಗೊಂದಲವಾಗಿದೆ. ಏನೇ ಗೊಂದಲಗಳಿದ್ದರೂ ಈತ ಕೆರೆಯನ್ನು ಕಾಯುವ ಕಾವಲುಗಾರನಾಗಿದ್ದ ಎಂಬುದು ಮಾತ್ರ ಸತ್ಯದ ಸಂಗತಿಯಾಗಿದೆ. ಈತ ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳಬೇಕಾಗಿತ್ತು. ಕೆರೆಗೆ ಕಟ್ಟೆ ಹಾಕುವುದು, ನೀರಿನ ಸಮಾನ ಹಂಚಿಕೆ, ತೂಬುಗಳ ಪರಿಶೀಲನೆ, ಕೋಡಿಗಳ ಭದ್ರತೆ ಈ ರೀತಿಯ ಎಲ್ಲಾ ಜವಾಬ್ದಾರಿಗಳು ಶ್ರವಣಕುಮಾರ ನೋಡಿಕೊಳ್ಳಬೇಕಾಗಿತ್ತು.

ಮುಂಗಾರು ಮಳೆಯ ಕಾಲದಲ್ಲಿ ಆರ್ಭಟಿಸುತ್ತಿರುವ ಗುಡುಗು ಮಿಂಚುಗಳೊಂದಿಗೆ ಧಾರಾಕಾರವಾಗಿ ಮಳೆಯು ಸುರಿಯುತ್ತಿತ್ತು. ಹೀಗೆ ಸುರಿದ ಮಳೆಯಿಂದಾಗಿ ಧರ್ಮಪುರದ ಕೆರೆಯು ತುಂಬಿ ಬೋರ್ಗರೆಯುತ್ತಿತ್ತು ಮತ್ತು ಕೆರೆಯ ನೀರು ಕೋಡಿಯ ಮೂಲಕ ಹೋಗುವಂತಹ ಪರಿಸ್ಥಿತಿ ಕಂಡು ಬಂದಿತು.

ಈ ಹಿಂದೆ ಎಲ್ಲದಕ್ಕೂ ಹೇಳಿಕೆ-ಕೇಳಿಕೆಗಳು ಇದ್ದವಂತೆ ಅದು ನೀರಾಗಿರಬಹುದು, ಗಿಡ ಮರಗಳಾಗಿರಬಹುದು. ಹೀಗಿರುವಾಗ ದಾರಾಕಾರವಾದ ಮಳೆಯಿಂದ ಕೆರೆಯು ತುಂಬಿ ತೇಲಾಡುತ್ತಿತ್ತು. ಆಗ "ಗಂಗವ್ವ ತಾಯಿಯು ನೀರಗಂಟೆಯನ್ನು ತಾನು ಕೋಡಿಯಿಂದ ಹೊರಗೆ ಹೋಗುತ್ತೇನೆಂದು ನೀರಗಂಟಿಯನ್ನು ಕೇಳುತ್ತಾಳೆ. ಆಗ ಶ್ರವಣಪ್ಪ ಇಲ್ಲ ತಾಯಿ ನೀನು ಇಲ್ಲಿಂದ ಹೋಗಬೇಡ ನೀನು ಇಲ್ಲಿಂದ ಹೊರಗಡೆ ಹೋದರೆ ನಮ್ಮ ಊರಿನ ಫಲವತ್ತತೆ ಹೋದಂತೆ ಎಂದು ಹೇಳುತ್ತಾನೆ.6 ಆದರೂ ಗಂಗವ್ವ ತಾನು ಹೋಗಲೇ ಬೇಕು ಒಪ್ಪಿಗೆಯನ್ನು ನೀಡು ಎಂದು ಕೇಳಿಕೊಂಡಾಗ, ಊರಿನ ಶಾನಬೋಗನನ್ನು ಕೇಳಿಬರುತ್ತೇನೆ "ನಾನು ಬರುವವರೆಗೆ ನೀನು ಈ ಕೆರೆಯಿಂದ ಹೊರಗೆ ಹೋಗಬಾರದು ಎಂದು ವಚನ ಪಡೆದು ಶಾನಬೋಗರ ಬಳಿ ಹೋಗುತ್ತಾನೆ. ಶ್ರವಣಕುಮಾರ ಆ ಕರಾಳ ರಾತ್ರಿಯಲ್ಲಿ ಗುಡುಗು ಮಿಂಚಿನೊಂದಿಗೆ ಬೋರ್ಗರೆಯುತ್ತಾ ಧಾರಾಕಾರವಾಗಿ ಸುರಿಯುತ್ತಿರುವ ಭಯಂಕರ ಮಳೆಯಲ್ಲಿ ಊರ ಒಳಗೆ ಶಾನಬೋಗರ ಬಳಿ ಹೋಗುತ್ತಾನೆ. ಇತ್ತ ಗಂಗವ್ವ ಕೆರೆಯಲ್ಲಿ ಶ್ರವಣಪ್ಪನ ಬರುವಿಕೆಗಾಗಿ ಕಾಯುತ್ತಾ ಕುಳಿತಿರುತ್ತಾಳೆ.

ಕತ್ತಲಿನಲ್ಲಿ ಶ್ರವಣಕುಮಾರ ಊರ ಪ್ರಮುಖರಾದ ಗೌಡ, ಪಟೇಲರು, ಶಾನುಬೋಗರು ಇವರೆಲ್ಲರಿಗೂ ವಿಷಯವನ್ನು ತಿಳಿಸುತ್ತಾನೆ. ಆಗ ಇವರೆಲ್ಲರೂ ಗಂಗವ್ವ ತಾಯಿಯ ಕೋರಿಕೆಯನ್ನು ಚರ್ಚೆಯ ಮೂಲಕ ಮಾತನಾಡುತ್ತಾ "ಗಂಗವ್ವನನ್ನು ಹಾಗೆಯೇ ಬಿಟ್ಟರೆ ನಮ್ಮೂರಿನ ಹುಲುಸು ಹೋಗುತ್ತದೆ ಎಂದು ಆಲೋಚಿಸಿದರು.

ಊರಿನ ಹುಲುಸು ಹೊರಗಡೆ ಹೋದರೆ ನಾಳೆ ಮಳೆ, ಬೆಳೆ, ಹೇಗೆ ಎಂದು ತಿಳಿದು ಅವರೆಲ್ಲರೂ ಸೇರಿಕೊಂಡು ಒಂದು ಸಂಚು ಮಾಡುತ್ತಾರೆ. ಅವರೆಲ್ಲರೂ ಮಾಡಿದ ಸಂಚೇನೆಂದರೆ ನೀರಗಂಟಿ, ಗಂಗವ್ವನ ಬಳಿ ವಚನ ಪಡೆದು ಬಂದಿದ್ದಾನೆ. ವಚನ ಪಡೆದಿದ್ದರಿಂದ ಆತನನ್ನು ನಾವುಗಳು ಇಲ್ಲಿ ಸಾಯಿಸಿದರೆ ಆತ ಹೋಗಿ ಗಂಗವ್ವನಿಗೆ ಹೇಳುವುದಿಲ್ಲ ಶ್ರವಣಪ್ಪ

ಬಂದು ಹೇಳುತ್ತಾನೆಂದು ಗಂಗವ್ವ ಕಾದು ಅಲ್ಲಿಯೇ ಇರುತ್ತಾಳೆ ಹೋರಗೆ ಹೋಗುವುದಿಲ್ಲ ಎಂದು ತೀರ್ಮಾನಿಸುತ್ತಾರೆ.

ಹೀಗಿರುವಾಗ ನೀರಗಂಟಿ ಶ್ರವಣಕುಮಾರನಿಗೆ ನೀನು ಕೆರೆಯ ಕೋಡಿಯ ಮೂಲಕ ಹೋಗು ನಾವು ಬರುತ್ತೇವೆ ಎಂದು ಹಿರಿಯರು ಕಳುಹಿಸಿದರು. ಆತ ಮಧ್ಯರಾತ್ರಿ ಕತ್ತಲಿನಲ್ಲಿ ಮಳೆಯಲ್ಲಿ ಮುಂದೆ ಮುಂದೆ ಹೋಗುತ್ತಿರುತ್ತಾನೆ ಹಿಂದಿನಿಂದ ಹಿರಿಯರು ಬಂದು ಆತನನ್ನು ಕೊಲೆ ಮಾಡಿಬಿಡುತ್ತಾರೆ. ನೆಲಕ್ಕೆ ಉರುಳುತ್ತಾನೆ, ರುಂಡ ಮುಂಡದಿಂದ ಬೇರೆಯಾಗುತ್ತದೆ.

ಇತ್ತ ಶ್ರವಣಪ್ಪನು ಬರುವಿಕೆಯನ್ನು ನೋಡುತ್ತಾ ನಿಂತಿದ್ದ ಗಂಗವ್ವ ಆತ ಎಷ್ಟೊತ್ತಾದರೂ ಬರದಿದ್ದುದಕ್ಕೆ ಶ್ರವಣ ಶ್ರವಣ ಎಂದು ಕೊಗುತ್ತಾ ಕೋಡಿಯ ಮೂಲಕ ಹರಿದು ಹೋಗುತ್ತಾಳೆ. ಶ್ರವಣ ಶ್ರವಣ ಎನ್ನುವ ಕೂಗು ಶ್ರವಣಗೆರೆಯ ಬಯಲಿನಲ್ಲಿ ಪ್ರತಿಧ್ವನಿ ಬರುತ್ತದಂತೆ. ಆ ಸಂದರ್ಭದಲ್ಲಿ ಗ್ರಾಮದ ಜನತೆ ಭಯಬೀತರಾಗಿ ಶ್ರವಣನ ವಿಗ್ರಹ ನಿರ್ಮಿಸಿ ಆ ವಿಗ್ರಹವನ್ನು ಧರ್ಮಪುರದ ಕೋಡಿಯ ಬಳಿ ನಿಲ್ಲಿಸುತ್ತಾರೆ. ಅಂದಿನಿಂದ ಈ ಪ್ರತಿಧ್ವನಿ ನಿಂತಿತು ಎನ್ನುವ ಪ್ರತೀತಿ ಇದೆ.[೬]

**ಪುರುಷತ್ವದ ಸಂಕೇತಕವಾಗಿ ಶ್ರವಣಕುಮಾರ**

ಧರ್ಮಪುರದ ಜನತೆ ಇಂದಿಗೂ ಶ್ರವಣಕುಮಾರನನ್ನು (ಫಲ ನೀಡುವ)ಮಕ್ಕಳನ್ನು ನೀಡುವ ದೇವರು ಎನ್ನುತ್ತಾರೆ. ಶ್ರವಣಕುಮಾರ ಪೌಷ್ಟಿಕ ಪುರುಷತ್ವದ ಸಂಕೇತ ಎಂದು ನಂಬಿದ್ದಾರೆ. ಈತ ಊರನ್ನು ಉಳಿಸಿದವನು ಎನ್ನುವ ಅಭಿಮಾನ ಇರುವುದರಿಂದ ಮತ್ತು ಊರಿನ ಹುಲುಸನ್ನು, ಸತ್ವವನ್ನು ಉಳಿಸಿದಂತವನು ಎನ್ನುವ ಕಾರಣಕ್ಕಾಗಿ ಮಕ್ಕಳಾಗದವರು, ಸುಮಂಗಲೆಯರು ನಗ್ನ ರೂಪದಲ್ಲಿ ಆತನನ್ನು ತಬ್ಬಿಕೊಂಡರೆ ಮಕ್ಕಳಾಗುತ್ತವೆ ಎಂಬ ನಂಬಿಕೆಯೂ ಇದೆ.[೭] ಈ ರೀತಿಯ ಅನುಕರಣಿಯನ್ನು ನಾವು ಇಂದಿಗೂ ಕಾಣುತ್ತೇವೆ.

ನಮ್ಮ ಜನಪದಿಯರ ಕಲ್ಪನೆಗಳು ಒಂದೇ ದೃಷ್ಟಿಕೋನದಲ್ಲಿರದೆ ಬೇರೆ ಬೇರೆ ಆಗಿರುತ್ತದೆ. ಅವರು ನಂಬಿಕೆಗಳನ್ನು ದೇವರು ಅಂತ ನಂಬಿಕೊಂಡು ಬಾಳಿದವರು. ಜನಪದಿಯರು ಊರಿನ ದುರಂತ ನಾಯಕ ಶ್ರವಣ ಕುಮಾರನನ್ನು ನಂಬಿದ್ದಾರೆ. ಹೀಗೆ ಒಂದು ಇತಿಹಾಸ, ಪುರಾಣ ಕಥೆ, ದುರಂತ ಕಥೆ, ವಿಚಿತ್ರ ಪಿತೂರಿ ಇವೆಲ್ಲವೂ ಸೇರಿ ಧರ್ಮಪುರವಾಗಿ. ಇಲ್ಲಿನ ಅದೇ ಕೆರೆ ಹಾಗೆಯೇ ಇದೆ. ಆದರೆ ಕೆರೆಯಲ್ಲಿ ನೀರಿಲ್ಲ. ಊರಿನ ಹಿತಕ್ಕಾಗಿ ಬಲಿಯಾದ ನೀರಗಂಟಿಶ್ರವಣಪ್ಪನನ್ನು ಶಿಲ್ಪದ ರೊಪದಲ್ಲಿ ಕೆರೆಯನ್ನು ಕಾಯುವಂತೆ ನಿರ್ಮಿಸಿದ್ದಾರೆ. ಈ ಶಿಲ್ಪವು ಸುಮಾರು ೫ ಅಡಿ ಎತ್ತರದ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕಂಡರಿಸಿದ್ದು ಇದು ಸೂರ್ಯ ಶಿಲ್ಪವಾಗಿದೆ ಕಿರೀಟದಾರಿಯಾದ ಕಿವಿಓಲೆ, ಕೊರಳಹಾರವಿದೆ, ಎರೆಡು ಕೈಗಳು ಭಗ್ನಗೊಂಡಿವೆ. ಈ ಶಿಲ್ಪವನ್ನು ಗ್ರಾಮಸ್ಥರು ಶ್ರವಣಕುಮಾರ ಶಿಲ್ಪವೆಂದು ಕರೆದಿದ್ದಾರೆ.

## ಅಂಬಲಗೆರೆಯ ಗರುಡಸ್ತಂಭ

ಅಂಬಲಗೆರೆ ಗ್ರಾಮವು ಧರ್ಮಪುರ ಗ್ರಾಮದಿಂದ ಸುಮಾರು ೧೨ಕಿ.ಮೀ ದೂರದಲ್ಲಿದೆ. ಈ ಗ್ರಾಮದಲ್ಲಿ ಐತಿಹಾಸಿಕ ಶ್ರೀ ರಂಗನಾಥಸ್ವಾಮಿ ದೇವಾಯವಿದ್ದು, ದೇವಾಲಯದ ಮುಂಭಾಗದಲ್ಲಿ ಸುಮಾರು ೪೫ ಅಡಿ ಎತ್ತರದ ಗ್ರಾನೈಟ್ ಕಲ್ಲಿನ ಗರುಡ ಸ್ತಂಭ, ಮತ್ತು ದ್ವೀಪ ಸ್ತಂಭ, ಉಯ್ಯಾಲೆ ಸ್ತಂಭಗಳಿವೆ. ಇಲ್ಲಿ ಇರುವಂತಹ ಗರುಡ ಸ್ತಂಭಕ್ಕೆ ಸ್ಥಳಪುರಾಣವಿದೆ ಎಂದು ಸ್ಥಳೀಯರು ಹೇಳುತ್ತಾರೆ. ಈ ಗರುಡ ಸ್ತಂಭದ ಮೇಲೆ ಇರುವಂತಹ ವಿಗ್ರಹವು ಹಿಂದಕ್ಕೆ ವಾಲಿದಂತೆ ಕಂಡರೆ ಮಳೆ ಬರುವುದಿಲ್ಲವೆಂದು ಸೂಚನೆ, ನೇರವಾಗಿ ಕಂಡರೆ ಮಳೆ ಬರುತ್ತದೆಯೆಂದು, ನೆಲ ನೋಡಿದಂತೆ ಕಂಡರೆ ಗ್ರಾಮಕ್ಕೆ ಬರಗಾಲವೆಂದು ಸೂಚಿಸುತ್ತದೆ ಎಂದು ನಂಬಿಕೆಯಿದೆ. ಗರುಡನ ನೆರಳು ಪ್ರತಿದಿನ ಗರ್ಭಗುಡಿಯಲ್ಲಿಯೂ, ವರ್ಷಕ್ಕೊಂದು ಸಲ ರಂಗನಾಥನ ವಿಗ್ರಹದ ಪಾದದ ಮೇಲೆ ಬೀಳುತ್ತದೆ ಎಂದು ಹೇಳಲಾಗುತ್ತಿದೆ.[೯]

ನಲವತ್ತು ಅಡಿ ಎತ್ತರದ ದ್ವೀಪಸ್ತಂಭವಿದ್ದು ಈ ದ್ವೀಪಸ್ತಂಭಕ್ಕೆ ದಸರಾ, ಯುಗಾದಿ, ಹಬ್ಬಗಳ ದಿನದಂದು ವಿಶೇಷವಾಗಿ ದೀಪೋತ್ಸವ ಆಚರಿಸುವುದರ ಮೂಲಕ ತೇರು, ಮಡಿ ತೇರು, ಹರಿಸೇವೆ ರಥೋತ್ಸವ, ಅನ್ನ ಸಂತರ್ಪಣೆ ಮುಂತಾದ ಕಾರ್ಯಗಳು ನಡೆಯುತ್ತವೆ.

## ಅಡಿಟಿಪ್ಪಣಿಗಳು

೧. ಹೂಗಾರ ಬಿ.ಪಿ., ಪ್ರಾಚೀನ ಭಾರತದ ಇತಿಹಾಸ, ಪುಟ-೬

೨. ಧರ್ಮಪುರ ಸ್ಥಳೀಯ ವಕ್ತಾರರುಗಳಾದ ವೀರಣ್ಣ (ಪ್ರಾಂಶುಪಾಲರು), ರಂಗಣ್ಣ, ಚಂದ್ರಣ್ಣ, ಇವರುಗಳ ಹೇಳಿಕೆ

೩. ಅದೇ

೪. ಅದೇ

೫. ಗಿರಿಜಾ.ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ-೩೬೧

೬. ಅದೇ, ಪುಟ-೩೬೧

೭. ಧರ್ಮಪುರ ಸ್ಥಳೀಯ ವಕ್ತಾರರುಗಳಾದ ವೀರಣ್ಣ (ಪ್ರಾಂಶುಪಾಲರು), ರಂಗಣ್ಣ, ಚಂದ್ರಣ್ಣ, ಇವರುಗಳ ಹೇಳಿಕೆ

೮. ಗಿರಿಜಾ ಟಿ., ಪೂರ್ವೋಕ್ತ, ಪುಟ-೩೬೨

೯. ಅಂಬಲಗೆರೆ ಸ್ಥಳಿಯ ವಕ್ತಾರರುಗಳಾದ ಹನುಮಂತರಾಯಪ್ಪ ಮತ್ತು ರಂಗನಾಥಪ್ಪರವರುಗಳ ಹೇಳಿಕೆಗಳ ಪ್ರಕಾರ

* * *

### ೩.೪.ಸ್ಥಳನಾಮ ಅಧ್ಯಯನ

ಸ್ಥಳನಾಮ ಅಧ್ಯಯನವು ಪ್ರಸ್ತುತ ಪರಿಸರದಲ್ಲಿನ ಚರಿತ್ರೆಯ ಅಧ್ಯಯನಕ್ಕೆ ಪ್ರತಿಯೊಂದು ಗ್ರಾಮಗಳು ಯಾವ ಯಾವ ಕಾಲದಲ್ಲಿ ಯಾವ ಹೆಸರುಗಳನ್ನು ಪಡೆದವು ಏಕೆ ಪಡೆದವು, ಇಂದಿನ ಹೆಸರೇನು ಮುಂತಾದ ವಿಷಯಗಳನ್ನು ಕುರಿತು ಚರ್ಚಿಸುತ್ತದೆ. ಸ್ಥಳನಾಮವು ಯಾವ ಅಂಶಗಳನ್ನು ಆಧರಿಸಿ ನಿರ್ಧಾರವಾಗುತ್ತಿತ್ತು ಎಂಬುದನ್ನು ತಿಳಿಯುವುದಲ್ಲದೆ ಅದು ಒಂದು ಜನಾಂಗ, ಸಂಸ್ಕೃತಿ, ಧರ್ಮ, ಅಲ್ಲಿನ ಜೀವನ ಕ್ರಮ ಮುಂತಾದ ಅನೇಕ ವಿಚಾರಗಳ ಮೇಲೆ ಬೆಳಕು ಬೀರುತ್ತದೆ. ಪ್ರಸ್ತುತ ಪರಿಸರದ ಸುತ್ತಮುತ್ತಲಿನ ಗ್ರಾಮಗಳನ್ನು ಕುರಿತು ಲಭ್ಯವಿರುವ ಸ್ಥಳನಾಮ ಚರಿತ್ರೆಯನ್ನು ತಿಳಿಯುವಂತಹ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಇತ್ತೀಚಿನ ದಿನಗಳಲ್ಲಿ ಸ್ಥಳನಾಮಗಳ ಅಧ್ಯಯನ ಪ್ರಾಮುಖ್ಯತೆ ಪಡೆದಿವೆ, ವೈಜ್ಞಾನಿಕ ಅಧ್ಯಯನಗಳಲ್ಲಿ ಸ್ಥಳನಾಮಗಳ ಅಧ್ಯಯನವೂ ಒಂದು. ಮಗು ಹುಟ್ಟಿದ ಮೇಲೆ ಇಡುವ ಹೆಸರನ್ನೂ ಹಾಗೆಯೇ ಅಡ್ಡ ಹೆಸರನ್ನು ಪಡೆಯುವಂತೆ ಒಂದು ಸ್ಥಳದಲ್ಲಿ ನಲೆಸಿದ ನೆಲೆಸಿದ ಮೇಲೆ ಮಾನವನು ಆ ಸ್ಥಳಕ್ಕೆ ಒಂದು ಹೆಸರನ್ನು ಕೊಡುವುದು ಸ್ವಾಬಾವಿಕವಾಗಿದೆ.[೧] ಅಂದರೆ ಹೆಸರಿಲ್ಲದೆ ಇರುವಂತಹ ಯಾವುದೇ ಗ್ರಾಮ, ಊರುಗಳಿಲ್ಲ. ಇರುವಂತಹ ಹೆಸರಿಗೆ ಅರ್ಥವಿಲ್ಲದೆ ಇಲ್ಲ. ಗ್ರಾಮ ನಾಮಗಳ ಅಧ್ಯಯನ ಮಾಡುವಂತಹ ಸಂದರ್ಭದಲ್ಲಿ ಅದರ ನಿಷ್ಪತ್ತಿ ನಿರ್ಣಯ ಪ್ರಮುಖ ಅಂಶವಾಗಿದೆ. ಇಂತಹ ವಿಷಯಗಳನ್ನು ಸರಿಯಾಗಿ ಗುರುತಿಸದೇ ಮಾಡುವಂತಹ ಅಧ್ಯಯನಗಳೆಲ್ಲಾ ವ್ಯರ್ಥವೆಂದು ಹೇಳಬಹುದು. ಆದರೆ "ನಿಷ್ಪತ್ತಿ ನಿರ್ಣಯ" ಅಷ್ಟು ಸುಲಭವಾದುದಲ್ಲ.[೨] ಡಾ. ಎಂ. ಎಂ ಕಲುಬುರ್ಗಿಯವರು ಗುರುತಿಸಿರುವಂತೆ ಗ್ರಾಮಗಳ ಹೆಸರಿನ ಬಗೆಗೆ ಮೂರು ನಿಷ್ಪತ್ತಿಗಳು ಕೇಳಿಬರುತ್ತವೆ.[೩]

೧. ಪಾಮರ ನಿಷ್ಪತ್ತಿ (ಜಾನಪದ ನಿಷ್ಪತ್ತಿ)

೨. ಪಂಡಿತ ನಿಷ್ಪತ್ತಿ

೩. ನಿಜ ನಿಷ್ಪತ್ತಿ

ಇವುಗಳಲ್ಲಿ ಮೊದಲಿನ ಎರೆಡೂ ಕಲ್ಪಕಥೆ, ಮೂರನೆಯದು ಸತ್ಯವಾಗಿರುತ್ತದೆ. ಯಾವುದೇ ಒಂದು ಗ್ರಾಮದ ಹೆಸರಿನ ಹಿಂದೆ ಒಂದು ಇಲ್ಲವೆ ಒಂದಕ್ಕಿಂತ ಹಲವಾರು ಕಥೆಗಳು ಕೇಳಿ ಬರುತ್ತವೆ. ನಿಜ ನಿಷ್ಪತ್ತಿ ಮಾತ್ರ ಒಂದೇ ಒಂದು ನಾಮ ಇರುತ್ತದೆ. ಕೆಲವೊಂದು ಸ್ಥಳೀಯ ಹೆಸರುಗಳು ಶಾಸನಗಳಲ್ಲಿ ಉಲ್ಲೇಖವಾಗಿದ್ದು, ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಇಂದಿಗೂ ಸಹ ಮುಂದುವರೆದಿರುವುದನ್ನು ಕಾಣಬಹುದು.[೪]

ಸ್ಥಳನಾಮ  ಅಧ್ಯಯನವು ಈ ಪರಿಸರದಲ್ಲಿನ ಅಧ್ಯಯನಕ್ಕೆ ಪ್ರತಿಯೊಂದು ಗ್ರಾಮಗಳು ಯಾವ ಕಾಲದಲ್ಲಿ ಯಾವ ಹೆಸರುಗಳನ್ನು ಪಡೆದವು, ಏಕೆ ಪಡೆದವು, ಇಂದಿನ ಹೆಸರೇನು

ಮುಂತಾದ ವಿಷಯಗಳನ್ನು ಕುರಿತು ಚರ್ಚಿಸುತ್ತದೆ. ಸ್ಥಳನಾಮ ಅಧ್ಯಯನವು ಯಾವ ಅಂಶಗಳನ್ನು ಆಧರಿಸಿ ನಿರ್ಧಾರವಾಗಿತ್ತು ಎಂಬುದನ್ನು ತಿಳಿಯುವುದಲ್ಲದೆ ಒಂದು ಜನಾಂಗ, ಸಂಸ್ಕೃತಿ, ಧರ್ಮ ಅಲ್ಲಿನ ಜೀವನ ಕ್ರಮ ಮುಂತಾದ ಅನೇಕ ವಿಚಾರಗಳ ಮೇಲೆ ಬೆಳಕು ನೀಡುತ್ತದೆ. ಧರ್ಮಪುರ ಪರಿಸರದ ಗ್ರಾಮಗಳನ್ನು ಕುರಿತು ಲಭ್ಯವಿರುವ ಸ್ಥಳನಾಮ ಚರಿತ್ರೆಯನ್ನು ತಿಳಿಯುವಂತಹ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

**ವಾರ್ಗಿಕಗಳು**

ವ್ಯಕ್ತಿಯ ವಾಸಸ್ಥಳಗಳನ್ನು ಉಲ್ಲೇಖಿಸುವ ಸ್ಥಳನಾಮಗಳ ಅಂತ್ಯ ಪದಗಳನ್ನು ಹಲವಾರು ವರ್ಗಗಳಾಗಿ ವಿಂಗಡಿಸಬಹುದಾಗಿದೆ. ಪ್ರಮುಖವಾಗಿ ಕಂಡು ಬರುವ ವಾರ್ಗಿಕಗಳು ಎಂದರೆ ಹಳ್ಳಿ, ಪುರ, ಊರು, ಕೆರೆ, ಗೂಡು, ಕೋಟೆ, ಗುಡ್ಡ, ಈ ರೀತಿಯಾಗಿ ಹೆಸರಿಸಬಹುದಾಗಿದೆ.

೧. **ಹಳ್ಳಿ:** ಹಳ್ಳಿಯನ್ನು ಗ್ರಾಮಗಳೆಂದು ತೆಲುಗಿನಲ್ಲಿ "ಪಲ್ಲಿ" ಎಂದು ಕರೆಯುತ್ತಾರೆ. ಕೆಲವೊಂದು ಹೆಸರುಗಳು ಹಳ್ಳಿ ಎಂಬುದರಿಂದಲೇ ಕೊನೆಯಾಗುತ್ತವೆ. ಅಳಿ ಅಥವಾ ಳಿ ಎಂದು ಮುಕ್ತಾಯವಾಗುವ ಗ್ರಾಮಗಳು ಹಳ್ಳಿಯನ್ನು ಸಂಬೋದಿಸುತ್ತವೆ.

ಉದಾ: ಖಂಡೇನಹಳ್ಳಿ, ಕಣಜನಹಳ್ಳಿ, ಚಿಲ್ಲಹಳ್ಳಿ, ರಂಗೇನಹಳ್ಳಿ, ಬೆನಕನಹಳ್ಳಿ, ಬ್ಯಾಡರಹಳ್ಳಿ, ಕೋಡಿಹಳ್ಳಿ, ಸಂಗೇನಹಳ್ಳಿ, ಗೊಲ್ಲಹಳ್ಳಿ ಇತ್ಯಾದಿ.

೨. **ಪುರ:** ಹಳ್ಳಿಗಳಂತೆ ಪುರವು ಸಹ ವಾಸಸ್ಥಾನವನ್ನು ತಿಳಿಸುತ್ತದೆ. ಊರು ವಾರ್ಗಿಕದಿಂದ ಮುಕ್ತಾಯವಾಗುವ ಕೆಲವು ಸ್ಥಳನಾಮಗಳನ್ನು ಸಹ ಕಾಣಬಹುದು.

ಉದಾ: ಧರ್ಮಪುರ, ತಿಮ್ಮಲಾಪುರ, ಓಬಳಾಪುರ, ಪರಶುರಾಮಪುರ ಇತ್ಯಾದಿ.

೩. **ಕೆರೆ:** ಮನುಷ್ಯನಿಗೆ ಅತ್ಯವಶ್ಯಕವಾಗಿರುವುದು ನೀರು. ನೀರಿನಾಸರೆ ಇಲ್ಲದ ಗ್ರಾಮಗಳ ಹುಟ್ಟನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ನೈಸರ್ಗಿಕವಾಗಿ ನೀರಿನ ಸೌಲಭ್ಯವಿಲ್ಲದಿರುವಾಗ ಮಾನವ ಪ್ರಯತ್ನದಿಂದ ನಿರ್ಮಾಣ ಮಾಡಿದಂತಹ ಕೆರೆಗಳು ವಾಸಯೋಗ್ಯವಾದ ತಾಣವನ್ನಾಗಿ ಮಾಡುತ್ತವೆ. ಆದುದರಿಂದಾಗಿ ಕೆರೆಗಳ ಸನಿಹದಲ್ಲೇ ಉಗಮವಾದ ಕೆಲವು ಗ್ರಾಮಗಳು ಜಲಸಂಭಂದಿ ಹೆಸರಿನಿಂದಲೇ ಕೊನೆಯಾಗಿರುವುದನ್ನು ಕಾಣಬಹುದು.

ಉದಾ; ಬಿದರಕೆರೆ, ಭಗವತಿಕೆರೆ, ಕೊನೆಕೆರೆ, ಹೊಸಕೆರೆ, ಇತ್ಯಾದಿ

೪. **ಕೋಟೆ:** ಕೋಟೆ ಎಂಬ ಸ್ಥಳನಾಮ ಸಂಭಂದದಲ್ಲಿ ಕೆಲವೊಂದು ಗ್ರಾಮಗಳು ಕೋಟೆ ಎಂಬ ಸ್ಥಳನಾಮದಿಂದ ಮುಕ್ತಾಯವಾಗುವಂತಹ ಹೆಸರುಗಳು ಸಹ ಕಂಡುಬಂದಿವೆ. ಉದಾ:ಶಿಡ್ಲಯ್ಯನಕೋಟೆ, ಹರ್ತಿಕೋಟೆ, ಪರಶುರಾಮದೇವರಕೋಟೆ, ತಿಮ್ಮಣ್ಣನಾಯಕನ ಕೋಟೆ.

ಸ್ಥಳನಾಮದ ಅಂತಿಮ ಪದಗಳನ್ನು ವಾರ್ಗಿಕ ದೃಷ್ಟಿಯಿಂದ ಬಿಡಿಯಾಗಿ ಗಮನಿಸಿದಂತೆಯೇ ಕೆಲವೊಂದು ಪೂರ್ಣಸ್ಥಳನಾಮವನ್ನೆ ಇಡಿಯಾಗಿ ಪರಿಗಣಿಸಿ ಹಲವಾರು ವಿದವಾಗಿ ವಿಂಗಡಿಸಿ ಅಧ್ಯಯನ ಮಾಡಬಹುದು. ದೈವವಾಚಕ, ಜಲವಾಚಕ, ಶಿಲಾವಾಚಕ, ವ್ಯಕ್ತಿವಾಚಕ, ಜಾತಿ ಮತ್ತು ವೃತ್ತಿವಾಚಕ, ಹಳೆಯ ಮತ್ತು ಹೊಸ ಸ್ಥಳನಾಮಗಳು ಪ್ರಸ್ತುತ ಪರಿಸರದಲ್ಲಿ ಕಂಡುಬರುತ್ತವೆ.

ಉದಾ: ಹರಿಯಬ್ಬೆ, ನಂದಿಹಳ್ಳಿ, ವೇಣುಕಲ್ಲುಗುಡ್ಡ, ಶ್ರಾವಣಗೆರೆ, ಗೌಡನಹಳ್ಳಿ, ಸಾಲುಹುಣಸೆ, ಕೋಡಿಹಳ್ಳಿ, ರಂಗಸಮುದ್ರ, ಮದಕರಿನಾಯಕನಕೋಟೆ, ಉಪ್ಪಾರಹಟ್ಟಿ, ಗೋಲ್ಲಹಳ್ಳಿ, ಅಬ್ಬಿನಹೊಳೆ, ಕರಿ ಓಬೇನಹಳ್ಳಿ, ಅಂಬಲಗೆರೆ ಇತ್ಯಾದಿ.

**ಧರ್ಮಪುರ**

ಪ್ರಸ್ತುತ ಅಧ್ಯಯನ ಪ್ರದೇಶವಾದ ಧರ್ಮಪುರ ಐತಿಹಾಸಿಕತೆಯನ್ನು ಸಾರುವಂತಹ ಊರು ಇದಾಗಿದೆ. ಧರ್ಮಪುರಕ್ಕೆ ಈ ಹೆಸರು ಬರಲು ಕಾರಣವನ್ನು ಈ ಮುಂದಿನಂತೆ ನೋಡಬಹುದು. ಈ ಹಿಂದೆ ಈ ಗ್ರಾಮವನ್ನು ಉಪವಾಸಪುರ ಎಂದು ಕರೆಯುತ್ತಿದ್ದುದುಂಟು. ಹಿಂದೆ ಪಾಡವರು ವನವಾಸ ಮಾಡುತ್ತಿದ್ದಂತಹ ಸಂಧರ್ಭದಲ್ಲಿ ಕೆಲವು ದಿನಗಳ ಕಾಲ ಈ ಗ್ರಾಮದಲ್ಲಿ ವಾಸವಾಗಿದ್ದು ಅವರಿಗೆ ಅಡುಗೆ ಮಾಡಿಕೊಳ್ಳಲು ಒಂದು ರಾತ್ರಿ ಸೌದೆಯೇ ಸಿಗದೆ, ಸಿಕ್ಕರು ಸಹ ಪಾಂಡವರು ಸಂಪ್ರದಾಯವಾದಿಗಳಾಗಿದ್ದರಿಂದ ಬುಡ ಯಾವುದು ಕೊನೆ ಯಾವುದು ಎಂಬುದನ್ನು ತಿಳಿಯದೆ ಸೌದೆಯನ್ನು ಬಳಸದೆ ಅಂದಿನ ದಿನ ರಾತ್ರಿಯಿಡೀ ಉಪವಾಸ ಮಾಡಿದ್ದರು. ಆದುದರಿಂದಾಗಿ ಈ ಗ್ರಾಮಕ್ಕೆ ಉಪವಾಸಪುರವೆಂದು ಹೆಸರು ಬಂದಿತೆನ್ನುವುದು ಸ್ಥಳೀಯರ ಅಭಿಪ್ರಾಯ, ಈ ಗ್ರಾಮವನ್ನು ಧರ್ಮರಾಯನು ನಿರ್ವಾಣವಾಡಿದ್ದರಿಂದಾಗಿ ಧರ್ಮರಾಯನ ಹೆಸರಿನಲ್ಲಿ ಧರ್ಮಪುರವೆಂದು ಮರುನಾಮಕರಣವಾಗಿರುವುದು ಕಾಣಬಹುದು.[೫] ಇಂದಿಗೂ ಸಹ ಈ ಧರ್ಮಪುರದಲ್ಲಿ ಯಾವುದಾದರೂ ಒಂದು ಕಾರಣದಿಂದ ಐದು ಜನರು ಉಪವಾಸ ಇದ್ದೆ ಇರುತ್ತಾರೆ ಎಂದುದು ಸ್ಥಳೀಯರ ವಾಡಿಕೆಯಾಗಿದೆ.

**ಹರಿಯಬ್ಬೆ**

ಈ ಗ್ರಾಮಕ್ಕೆ ಹರಿಯಬ್ಬೆ ಎಂದು ಹೆಸರು ಬರಲು ಕಾರಣವೆಂದರೆ ವೇಣುಕಲ್ಲುಗುಡ್ಡದಲ್ಲಿ ಇದ್ದಂತಹ ನಾಯಕರ ಕುಲ ಗುರುಗಳಾದ ಅಬ್ಬೆಗೂ ಕ್ರಿ.ಶ. ೧೫೭೬-೧೬೩೩ರವರೆಗೆ ಚಿತ್ರದುರ್ಗ ಪಾಳೆಯಗಾರನಾಗಿದ್ದಂತಹ ಕಸ್ತೂರಿರಂಗಪ್ಪನಾಯಕರ ಧರ್ಮಪತ್ನಿ ಹರಿಯಾಲ ದೇವಿಗೂ ಪಾಳೆಯಗಾರರ ಆಡಳಿತಾವದಿಯ ಸಂದರ್ಭದಲ್ಲಿ ಅತ್ಯಂತ ಅನ್ಯೂನ್ಯವಾದ

ಅತ್ಮೀಯತೆ, ಸ್ನೇಹ ಸಂ ಬಂಧ ಇದ್ದುದರಿಂದ ಹರಿಯಾಲದೇವಿ ತಮ್ಮ ನಾಯಕರ ಬಳಿ ನಮ್ಮಿಬ್ಬರ ಸ್ನೇಹದ ನೆನಪಿಗಾಗಿ ಒಂದು ಗ್ರಾಮವನ್ನು ಸ್ಥಾಪಿಸಬೇಕು ಎಂದು ನಾಯಕರ ಬಳಿ ಪ್ರಾರ್ಥಿಸಿಕೊಂಡಳು. ನಾಯಕರು ಪತ್ನಿಯ ಕೋರಿಕೆಯನ್ನು ಅರಿತು "ಹರಿಯಬ್ಬೆ" ಎನ್ನುವ ಒಂದು ಗ್ರಾಮವನ್ನು ಕಟ್ಟಿಸಿದರಂತೆ.[೬]

**ಬ್ಯಾಡರಹಳ್ಳಿ**

ಈ ಗ್ರಾಮವು ಧರ್ಮಪುರದಿಂದ ಹಿರಿಯೂರಿಗೆ ಹೋಗುವ ಮಾರ್ಗದಲ್ಲಿ ಸುಮಾರು ೧೦ಕಿ.ಮೀ ದೂರದಲ್ಲಿದೆ. ಈ ಗ್ರಾಮಕ್ಕೆ ಬ್ಯಾಡರಹಳ್ಳಿ ಎಂದು ಕರೆಯಲು ಮತ್ತು ಈ ಹೆಸರು ಬರಲು ಈ ಗ್ರಾಮದಲ್ಲಿ ವಿಶೇಷವಾಗಿ ಮತ್ತು ಸುತ್ತಮುತ್ತಲಿನ ಪರಿಸರದ ರಕ್ಷಣೆಯ ಜವಾಬ್ದಾರಿಯನ್ನು ನಾಯಕ ಜನಾಂಗದವರು ಹೊತ್ತಿದ್ದರಿಂದ ಹಾಗೆಯೆ ನಾಯಕ ಜನಾಂಗದವರಿಗೆ ಮತ್ತೊಂದು ಹೆಸರಾದ ಶಬ್ದರೋಪವೇ 'ಬೇಡ' ಎಂದಿರುವುದರಿಂದ ಬೇಡರಹಳ್ಳಿ ಎಂಬ ಹೆಸರಿದೆ, ಇತ್ತೀಚಿನ ದಿನಗಳಲ್ಲಿ ರೂಢಿಯಲ್ಲಿ ಬ್ಯಾಡರಹಳ್ಳಿಯಾಗಿದೆ ಎಂದು ಹೇಳಬಹುದು.

**ಕಣಜನಹಳ್ಳಿ**

ಈ ಗ್ರಾಮಕ್ಕೆ ಕಣಜನಹಳ್ಳಿ ಎಂಬ ಹೆಸರು ಬರಲು ಆದಾರವಿದೆಯೆಂದು ಗ್ರಾಮಸ್ಥರು ಹೇಳುತ್ತಾರೆ. ಕಾರಣವೇನೆಂದರೆ ಈ ಗ್ರಾಮವು ಹಿಂದೆ ಪಾಳೆಯಗಾರರಕಾಲದಲ್ಲಿ ಆಯಕಟ್ಟಿನ ಪ್ರದೇಶವಾಗಿತ್ತು ಎಂದು ಈ ಗ್ರಾಮ ನಿಡಗಲ್ಲು ಸಂಸ್ಥಾನಕ್ಕೆ ಸೇರಿದ್ದು ನಿಡುಗಲ್ಲಿಗೂ ಕಡೆಹುಡೆ ಎನ್ನುವ ಸೇನಾ ಠಾಣ್ಯಕ್ಕೂ ಮಧ್ಯ ಈ ಗ್ರಾಮವಿದ್ದುದರಿಂದ "ನಡುವಲ ಹುಡೆ ಎನ್ನುತ್ತಿದ್ದರು.[೭] ಪಾಳೆಯಗಾರರು ನಿಡುಗಲ್ಲಿನಿಂದ ಸಂಡೂರು ಸಂಸ್ಥಾನಕ್ಕೆ ಸೇನೆ ಮುಂತಾದವು ಈ ಮಾರ್ಗದಲ್ಲಿ ಸಂಚರಿಸುತ್ತಿದ್ದಾಗ ಆಪತ್ಕಾಲದಲ್ಲಿ ದವಸ ದಾನ್ಯಗಳನ್ನು ರಕ್ಷಿಸಲು ಈ ಹಳ್ಳಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡಿದ್ದರು ಹಾಗೊ ವಸೂಲಾದ ಕಂದಾಯ ಪೊಗದಿ ಮುಂತಾದವುಗಳನ್ನು ಊರಿನ ಸುತ್ತ ಮುತ್ತಲಿನಲ್ಲಿ ಹಲವಾರು ಕಣಜಗಳನ್ನು ತೆಗೆದು ಅವುಗಳಲ್ಲಿ ದವಸ ದಾನ್ಯ, ಪೊಗದಿ ರಕ್ಷಿಸಿ ಇಡುತ್ತಿದ್ದುದರಿಂದ ಈ ಊರಿಗೆ "ಕಣಜನಹಳ್ಳಿ" ಎಂದು ನಾಮಕರಣಗೊಂಡಿದೆ. ಅಂದಿನ ಕಾಲದ ಕಣಜಗಳು ಇಂದಿಗೂ ಸಹ ಕಾಣಬಹುದಾಗಿದೆ.

**ಅಂಬಲಗೆರೆ**

ಅಂಬಲಗೆರೆ ಗ್ರಾಮಕ್ಕೆ ಈ ಹೆಸರು ಬರಲು ಕಾರಣವೇನೆಂದರೆ ಗ್ರಾಮದಲ್ಲಿ ಒಬ್ಬ ಮಹಿಳೆ ಇದ್ದಳು, ಆಕೆಯು ಶ್ರೀಮಂತೆಯಾಗಿದ್ದಳಂತೆ ಈ ಪ್ರದೇಶದಲ್ಲಿ ಪಾಳೆಯಗಾರರು ಈ ಗ್ರಾಮದಲ್ಲಿ ಬಂದು ತಂಗಿದ್ದರು, ತಂಗಿದಂತಹ ಸಂಧರ್ಭದಲ್ಲಿ ಮಹಿಳೆಯು ಎಲ್ಲಾ ಪಾಳೆಯಗಾರರ ಸೈನಿಕರಿಗೆ ತನ್ನ ಸ್ವಹಿಚ್ಚೆಯಿಂದ ಅಂಬಲಿಯನ್ನು ಮಾಡಿ ಬೊಜನದ ಕೋಟವನ್ನು ಉಪಚರಿಸಿದ್ದರಿಂದಾಗಿ "ಅಂಬಲಗೆರೆ" ಎಂದು ಕರೆಯುತ್ತಾರೆ.[೮]

**ಕರಿಓಬನಹಳ್ಳಿ**

ಕರಿಓಬನಹಳ್ಳಿ ಎಂದು ಕರೆಯುವ ಈ ಗ್ರಾಮ ಧರ್ಮಪುರದಿಂದ ೧೨ ಕಿ.ಮೀ. ದೂರದಲ್ಲಿದ್ದು ಹರ್ತಿಕೋಟೆಗೆ ಹತ್ತಿರವಿದೆ. ಈ ಗ್ರಾಮಕ್ಕೆ ಹೆಸರು ಬರಲು ಹರ್ತಿಕೋಟೆಯ ರಾಜನ ಮಗಳು ಕರಯೋಬೆಯನ್ನು ಬಸವಿ ಬಿಟ್ಟಿರುತ್ತಾರೆ, ಈಕೆ ಬೇರೆ ಅರಮನೆಯಲ್ಲಿ ವಾಸಮಾಡುತ್ತಾ ಒಗಟುಗಳನ್ನು ಒಡ್ಡಿ ಸೋತವರಿಂದ ಹಣ ಸಂಪಾದಿಸುತ್ತಾ ಇರುತ್ತಾಳೆ. ಹೀಗಿರುವಾಗ ಹಟ್ಟಿ ಚಿಕ್ಕಮಲ್ಲಯ್ಯನಾಯಕನಿಗೆ ಒಗಟುಗಳನ್ನು ಬಿಡಿಸಲು ಹೇಳುತ್ತಾಳೆ ಆತನಿಗೆ ಒಗಟುಗಳನ್ನು ಬಿಡಿಸಲಾಗದೆ ಒದ್ದಾಡುತ್ತಿರುವಾಗ ಕಾಡಿನಲ್ಲಿ ಗೊಲ್ಲರ ಕರಡಿ ಬುಳ್ಳನು ಸಿಗುತ್ತಾನೆ ಅವನು ಚಿಕ್ಕಮಲ್ಲಪ್ಪನಾಯಕನಿಗೆ ಒಗಟನ್ನು ಬಿಡಿಸಿಕೊಡುತ್ತಾನೆ. ಆ ಒಗಟನ್ನು ಮಲ್ಲಪ್ಪನಾಯಕ ಒಪ್ಪಿಸುತ್ತಾನೆ, ಆದರೆ ಆಕೆಗೆ ಅನುಮಾನವಾಗಿ ಒಗಟು ಬಿಡಿಸಿದವರಾರು ಎಂದು ಪತ್ತೆ ಹಚ್ಚಿ ಕರಡಿ ಬುಳ್ಳನ ಬಳಿ ಬಂದು ತನ್ನನ್ನು ಮದುವೆ ಆಗು ಎಂದು ಕೇಳುತ್ತಾಳೆ, ಆದರೆ ಆ ನನ್ನ ಇಬ್ಬರು ಹೆಂಡಿರು ಒಪ್ಪಿದರೆ ಮಾತ್ರ ಮದುವೆ ಆಗುತ್ತೇನೆ ಎಂದು ಹೇಳುತ್ತಾನೆ. ಕರಿಯೋಬೆಯು ಬುಳ್ಳನ ಇಬ್ಬರ ಹೆಂಡಿರಾದ ಬಾಲಮ್ಮ, ಮತ್ತು ನಾಗಮ್ಮನವರ ಬಳಿ ಹೋಗಿ ಅವರ ಸೇವೆ ಮಾಡಿ ಅವರನ್ನು ಒಲಿಸಿಕೊಂಡು ಕರಡಿ ಬುಳ್ಳನನ್ನು ಮದುವೆಯಾಗುತ್ತಾಳೆ. ಆದರೆ ಅಕೆಗೆ ಮಕ್ಕಳಾಗುವುದಿಲ್ಲ ಬಾಲಮ್ಮನ ಮಗನನ್ನು ದತ್ತು ತೆಗೆದುಕೊಂಡು ಸಲಹುತ್ತಾಳೆ, ಆತನ ವಂಶ ಬೆಳೆಯುತ್ತದೆ. ಕರಿಯೋಬೆಯ ಹೆಸರನ್ನೆ ಈ ಗ್ರಾಮಕ್ಕೆ ಇಡುತ್ತಾರೆ ಅಂದಿನಿಂದ ಇಂದಿನವರೆಗೂ ಈ ಗ್ರಾಮದ ಹೆಸರು ಕರಿಓಬೆನಹಳ್ಳಿ ಎಂದು ಕರೆಯುತ್ತಾರೆ.[೯]

**ಭಗವತಿಕೆರೆ**

ಪ್ರಸ್ತುತ ಧರ್ಮಪುರದಿಂದ ಸುಮಾರು ೧೦ ಕಿ.ಮೀ ದೂರದಲ್ಲಿ ಭಗವತಿಕೆರೆ ಗ್ರಾಮವಿದ್ದು ಈ ಗ್ರಾಮದ ಪೂರ್ವದ ಹೆಸರು ರಂಗೇನಹಳ್ಳಿ ಎಂದು ಇದ್ದು ಈ ಗ್ರಾಮ ಆಳುಬಿದ್ದು ನಶಿಸಿ ಹೋಗಿದೆ, ಈ ಗ್ರಾಮದಲ್ಲಿ ಜನವಸತಿ ಇಲ್ಲ. ಆದರೆ ಇಲ್ಲಿ ಆಂಜನೇಯನ ಹಳೆಯ ಅಂದರೆ ಬಿದ್ದುಹೋಗಿರುವ ದೇವಾಲಯವಿದೆ. ಲಕ್ಷ್ಮಿದೇವಿಯು ಈ ಗ್ರಾಮದ ದೇವತೆಯಾಗಿದ್ದರಿಂದ ಇಲ್ಲಿಯ ಕೆರೆಗೆ ಭಗವತಿಕೆರೆ ಎಂದು ಈ ಊರಿಗೆ "ಭಗವತಿಕೆರೆ" ಎಂದು ಹೆಸರಾಗಿದೆ.[೧೦]

**ಯಳನಾಡು**

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಧರ್ಮಪುರದಿಂದ ಹಿರಿಯೂರಿಗೆ ಹೋಗುವ ಮಧ್ಯಭಾಗದ ಸುಮಾರು ೧೮ ಕಿ.ಮೀ ದೂರದಲ್ಲಿ ಯಳನಾಡು ಗ್ರಾಮವಿದ್ದು,

ಈ ಗ್ರಾಮಕ್ಕೆ ಯಳನಾಡು ಎಂಬ ಹೆಸರು ಬಂದಿರುವ ಹಿನ್ನೆಲೆ ಹಾಗೂ ಸಾಧ್ಯತೆಗಳ ಬಗೆಗೆ ಕೆಲವು ಅಭಿಪ್ರಾಯಗಳನ್ನು ಇಲ್ಲಿ ವಿವರವಾಗಿ ಹೇಳಲಾಗಿದೆ. ಇಲ್ಲಿ ಸುಂದರ ತರುಣ ತರುಣಿಯರು ಯತೇಚ್ಚವಾಗಿದ್ದ ಒಂದು ಕಾಲದಲ್ಲಿ ಈ ನಾಡಿಗೆ ಯಳನಾಡು ಎಂದು ಕರೆದು (ಎಂದರೆ ಎಳೆಯ ಅಥವಾ ಬಳಕುವ ನಾಡು ಇರುವವರ ಪ್ರದೇಶ ಎಂಬರ್ಥದಲ್ಲಿ) ಆ ಹೆಸರೇ ಕ್ರಮೇಣ ಆಡುತ್ತಾ ಎಳೆನಾಡು, ಯಳನಾಡು, ಯಳೆನಾಡು ಹಲವು ರೂಪಗಳನ್ನು ತಳೆದಿದೆಯೆಂದು ಹೇಳಬಹುದು.

ಮತ್ತೋಂದು ರೀತಿಯಲ್ಲಿ ಹೇಳುವುದಾದರೆ ಈ ಪ್ರದೇಶದಲ್ಲಿ ಹಿಂದೆ ಎಳ್ಳು ಹೆಚ್ಚಾಗಿ ಬೆಳೆಯುತ್ತಿದ್ದರಿಂದ ಇದಕ್ಕೆ ಎಳ್ಳುನಾಡು ಎಂಬ ಹೆಸರು ಉಚ್ಚಾರಣೆಯಲ್ಲಿ ಕ್ರಮೇಣ ಎಳ್‌ನಾಡು, ಯಳನಾಡು, ಯೆಳನಾಡು, ಹೀಗೆ ಪರಿವರ್ತನೆಯಾಗಿ ಯಳನಾಡು ಆಗಿರಬಹುದೆಂಬ ಅಬಿಪ್ರಾಯವೂ ಇದೆ. ತದನಂತರವಾಗಿ ಈ ಪ್ರದೇಶದಲ್ಲಿ ಹಿಂದಿನ ಕಾಲದಲ್ಲಿ ತೆಂಗು ಬೆಳೆಯುವ ನಾಡಾಗಿದ್ದಿರಬಹುದು. ಇಲ್ಲಿ ಈಗಲೂ ವಿಶೇಷವಾಗಿ ತೆಂಗು ಬೆಳೆಯನ್ನು ಬೆಳೆಯುತ್ತಿದ್ದು, ಇಲ್ಲಿಯ ಜನರು ತಲೆತಲಾಂತರಗಳಿಂದ ತೆಂಗು ವ್ಯವಸಾಯವನ್ನು ಉಳಿಸಿಕೊಂಡು ಬಂದಿರುವರೆಂದು ಹೇಳಲಾಗುವುದರಿಂದ ಇದು ಎಳನೀರನಾಡು ಎಂದು ಕರೆಯಲ್ಪಟ್ಟು ಕ್ರಮೇಣ ಈ ಪದ ಆಡುವ ಭಾಷೆಯಲ್ಲಿ ಎಳನಾಡು ಎಂದಾಗಿದೆ.[೧೧]

**ಅಡಿಟಿಪ್ಪಣಿಗಳು**

೧. ರಾಜೇಗೌಡ ಹೊಸಳ್ಳಿ, ಹಾಸನ ಜಿಲ್ಲೆಯ ಸ್ಥಳನಾಮಗಳು, ಪುಟ-೧೨೯

೨. ಕಲುಬುರ್ಗಿ ಎಂ. ಎಂ., ದಾರವಾಡ ಗ್ರಾಮನಾಮ ವಿವೇಚನೆ(ಮಾರ್ಗ-೨ರಲ್ಲಿ),ಪುಟ-೪೭೧

೩. ಅದೇ, ಪುಟ-೪೭೧

೪. ಅದೇ, ಪುಟ-೪೭೧

೫. ಗಿರಿಜಾ.ಟಿ., ಚಿತ್ರದುರ್ಗ ಜಿಲ್ಲಾ ದರ್ಶನಿ, ಪುಟ-೩೬೦

೬. ಸ್ಥಳೀಯ ವಕ್ತಾರರುಗಳಾದ ಶಿವಣ್ಣ, ಚಂದ್ರಯ್ಯನವರುಗಳ ಹೇಳೀಕೆಗಳ ಪ್ರಕಾರ

೭. ಗಿರಿಜಾ.ಟಿ., ಚಿತ್ರದುರ್ಗ ಜಿಲ್ಲಾ ದರ್ಶನಿ, ಪುಟ-೩೫೨

೮. ಸ್ಥಳೀಯ ವಕ್ತಾರರುಗಳಾದ ನಾಗರಾಜಪ್ಪ, ಶಿವಣ್ಣರವರ ಹೇಳೀಕೆಗಳ ಪ್ರಕಾರ

೯. ಪೂರ್ವೂಕ್ತ, ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ-೩೫೪

೧೦. ಗಿರಿಜಾ ಟಿ., ಪೂರ್ವೂಕ್ತ, ಪುಟ-೩೬೭

೧೧. ಲಕ್ಷ್ಮಣ್ ತೆಲಗಾವಿ., ಹರತಿಸಿರಿ, ಪುಟ-೩೫೦

* * *

## ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸ್ಥಿತಿಗತಿ

### ೪.೧ ಸಾಮಾಜಿಕ ಸ್ಥಿತಿಗತಿ

ಒಂದು ಪ್ರಸ್ತುತ ಪ್ರದೇಶದ ಸಾಂಸ್ಕೃತಿಕ ಇತಿಹಾಸದ ಅಧ್ಯಯನವೆಂದರೆ ಆ ಪರಿಸರದಲ್ಲಿ ಬಾಳಿ ಬದುಕಿದ ಜನರ ಅಧ್ಯಯನವೆಂದೇ ಹೇಳಬಹುದು. ಜನಸಾಮಾನ್ಯರ ನೋವು, ನಲಿವು, ಆಚಾರ,ವಿಚಾರ, ವ್ಯವಹಾರ ಮೊದಲಾದವುಗಳು ಇಲ್ಲಿ ಅಡಕವಾಗಿರುತ್ತವೆ. ಈ ಎಲ್ಲಾ ಅಂಶಗಳನ್ನು ನಾವು ತಿಳಿಯಲು ಲಿಖಿತ ಮತ್ತು ಅಲಿಖಿತ ಆಕಾರಗಳು ಐತಿಹ್ಯಗಳು ಮಹತ್ವದ್ದಾಗುತ್ತವೆ. ಪರಿಸರದ ಸುತ್ತಮುತ್ತಲಿನಲ್ಲಿ ಪ್ರಾಚೀನ ಮಾನವನು ನೆಲೆಸಿದ್ದಕ್ಕೆ ಹಲವಾರು ಕುರುಹುಗಳು ಸಾಕ್ಷಿಗಳು ದೊರಕುತ್ತವೆ. ಇಲ್ಲಿನ ಭೌಗೋಳಿಕ ಪರಿಸರವೂ ಸಹ ಮಾನವನು ನೆಲೆ ನಿಲ್ಲಲು ಸೂಕ್ತವಾಗಿದ್ದಂತೆ ತೋರುತ್ತದೆ. ಅವರು ಬಳಕೆ ಮಾಡಿ ಬಿಟ್ಟು ಹೋಗಿರುವಂತಹ ಅವಶೇಷಗಳಿಂದ ಅವರು ಬದುಕಿ ಬಾಳಿದ ಚಟುವಟಿಕೆಗಳನ್ನು ತಿಳಿದು ಕೊಳ್ಳಬಹುದು.

ಪ್ರಾಚೀನ ಇತಿಹಾಸ ಮತ್ತು ಇತಿಹಾಸ ಕಾಲದಲ್ಲಿ ಮೌರ್ಯರು, ಶಾತಾವಾಹನರು, ಚಾಲುಕ್ಯರು,ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು ಹಾಗೂ ಸ್ಥಳೀಯ ಪಾಳೇಯಗಾರರು ಆಳ್ವಿಕೆಯನ್ನು ನಡೆಸಿದ್ದರು. ಇವರುಗಳು ತಮ್ಮ ಆಡಳಿತಾವಧಿಯಲ್ಲಿ ಕೇವಲ ರಾಜಕೀಯ ಚಟುವಟಿಕೆಗಳಲ್ಲಿ ಮಾತ್ರ ತೊಡಗದೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಕೂಡ ಗಮನಾರ್ಹ ಸಾದನೆಯನ್ನು ಮಾಡಿ ತೋರಿಸಿದ್ದಾರೆ. ಇವರುಗಳ ಸಾಂಸ್ಕೃತಿಕ ಚಟುವಟಿಕೆಗಳನ್ನು, ಸಾಧನೆಗಳನ್ನು ತಿಳಿದುಕೊಳ್ಳಲು ಸ್ಥಳೀಯವಾಗಿ ದೊರೆಯುವಂತಹ ಶಾಸನಗಳು, ಸ್ಮಾರಕ ಅವಶೇಷಗಳು, ಸ್ಥಳೀಯವಾಗಿ ಜನಪದೀಯರ, ಗ್ರಾಮಸ್ಥರ ಮೌಖಿಕ ಆಕರಗಳು ನಮಗೆ ಸಾಂಸ್ಕೃತಿಕ ಇತಿಹಾಸ ರಚಿಸಲು ಪ್ರಮುಖ ಆಕರಗಳಾಗಿ ದೊರೆಯುತ್ತವೆ.

ಒಂದು ಪ್ರದೇಶದ ವಿಷಯವನ್ನು ತಿಳಿಯಲು ಅಲ್ಲಿನ ಸಾಂಸ್ಕೃತಿಕ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡಾಗ ಮಾತ್ರವೇ ಆ ಪ್ರದೇಶದ ಇತಿಹಾಸವನ್ನು ರಚಿಸಲು ಅನುಕೂಲವಾಗುತ್ತದೆಂದು ಹೇಳಬಹುದು. ಆದುದರಿಂದಾಗಿ ಆ ಕಾಲದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸ್ಥಿತಿಗತಿಗಳನ್ನು ತಿಳಿದು ಕೊಳ್ಳುವುದರ ಮೂಲಕ ಪ್ರಸ್ತುತ ಪ್ರದೇಶದ ಇತಿಹಾಸ ನಿರೂಪಿಸಲಾಗಿದೆ.

ಧರ್ಮಪುರ ಪರಿಸರದ ಸುತ್ತಮುತ್ತಲಿನಲ್ಲಿ ದೊರಕುವಂತಹ ಶಾಸನಗಳು, ಮೌಖಿಕ ಆಕರಗಳು ಆಕಾಲದ ಸಮಾಜದ ನೋವು ನಲಿವು ಜೀವನದ ಚಿತ್ರಣವನ್ನು ತಿಳಿಸುತ್ತವೆ. ಸಮಾಜದ ಸ್ವರೂಪವನ್ನು ಗಮನಿಸುವಲ್ಲಿ ಸಾಂಸ್ಕೃತಿಕ ಪ್ರತಿಬಿಂಬವನ್ನು ಕಾಣಲಾಗಿದ್ದು ಈ ಪ್ರದೇಶದ ಸುತ್ತಮುತ್ತಲಿನಲ್ಲಿ ದೊರಕುವ ಶಾಸನಗಳು ವಿರಳವಾಗಿರುವುದರಿಂದ ಅಂದಿನ ಪರಿಸರವನ್ನು ಅರಿಯಲು ಶಾಸನಗಳನ್ನು ಆಕರಗಳಾಗಿ ಬಳಸಿಕೊಳ್ಳಲಾಗಿದೆ.

ಪ್ರಾಚೀನ ಕಾಲದಲ್ಲಿ ವ್ಯಕ್ತಿಗಳನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಅವರು ಕೈಗೊಳ್ಳುವ ಉದ್ಯೋಗ ಮತ್ತು ವೃತ್ತಿಗಳ ಹಿನ್ನೆಲೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ನಾಲ್ಕು ವರ್ಣಗಳನ್ನಾಗಿ ವಿಂಗಡಿಸಲಾಗಿದ್ದು, ಈ ವಿಚಾರ ಋಗ್ವೇದದ ಪುರುಷ ಸೂಕ್ತ ಮಂಡಲ ಮತ್ತು ಸಮಕಾಲೀನ ಸಾಹಿತ್ಯಿಕ ಕುರುಹುಗಳು ಮನದಟ್ಟು ಮಾಡುತ್ತವೆ.[೧]

ಪ್ರಾದೇಶಿಕೆಯಂತೆ ಜಾತಿ ಅಥವಾ ವರ್ಣವ್ಯವಸ್ಥೆ ಒಂದು ವಿಧ, ಶ್ರೀಮಂತ, ಬಡವ, ಮೇಲು ಕೀಳು, ಇವುಗಳೆಲ್ಲವೂ ಆರ್ಥಿಕ ಅಸಮಾನತೆಯ ಅನೇಕ ತರಹದ ಸಾಮಾಜಿಕ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿದೆ.[೨]

**ಬ್ರಾಹ್ಮಣರು**

ಪ್ರಾಚೀನ ಮತ್ತು ಮಧ್ಯಯುಗದ ಕಾಲದ ಸಮಾಜದಲ್ಲಿ ಉನ್ನತವಾದಂತಹ ಸ್ಥಾನಮಾನಗಳನ್ನು ಹೊಂದಿದ್ದರು. ಅತ್ಯಂತ ಪ್ರಭಾವಶಾಲಿಗಳು ಸಹ ಆಗಿದ್ದರು, ಹೂಯೆನ್‌ತ್ಸಾಂಗನು ಅಂದಿನ ಸಮಾಜದಲ್ಲಿದ್ದಂತಹ ನಾಲ್ಕು ವರ್ಣಗಳ ಬಗ್ಗೆ ಬರೆಯುತ್ತಾ ಬ್ರಾಹ್ಮಣರು ಪರಿಶುದ್ಧ ಜೀವನ ನಡೆಸುತ್ತಿದ್ದರೆಂದು, ತತ್ವಗಳನ್ನು, ಆಚರಣೆಗಳಲ್ಲಿ, ಧರ್ಮಾಚರಣೆಯಲ್ಲಿ ತೊಡಗುತ್ತಿದ್ದರೆಂದು ಉಲ್ಲೇಖಿಸಿದ್ದಾನೆ.[೩] ಬ್ರಾಹ್ಮಣರು ಅರ್ಚಕರಾಗಿಯೂ, ಮಂತ್ರಿಗಳಾಗಿಯೂ, ಮಾಂಡಲಿಕರಾಗಿಯೂ, ದಂಡನಾಯಕರಾಗಿಯೂ, ಇದ್ದು ಬ್ರಾಹ್ಮಣರ ಕರ್ತವ್ಯ ಪುರೋಹಿತ ಮತ್ತು ಅರ್ಚನಾ ವೃತ್ತಿಗಳಿಗೆ ಮಾತ್ರ ಮೀಸಲಾಗಿತ್ತು ಎನ್ನಲಾಗಿದೆ.

**ಕ್ಷತ್ರಿಯರು**

ಬ್ರಾಹ್ಮಣರ ತರುವಾಯ ಸಮಾಜದಲ್ಲಿ ಕ್ಷತ್ರಿಯರ ಸ್ಥಾನ ಪ್ರಮುಖವಾಗಿತ್ತು. ಅಂದಿನ ಸಮಾಜದಲ್ಲಿ ಬ್ರಾಹ್ಮಣರ ಸ್ಥಾನ ಉನ್ನತವಾಗಿದ್ದರೆ, ಆಡಳಿತ ವ್ಯವಸ್ಥೆಯಲ್ಲಿ ಕ್ಷತ್ರಿಯರು ಸರ್ವಾಧಿಕಾರಿಗಳಾಗಿದ್ದರು ಬ್ರಾಹ್ಮಣರು ಆರ್ಥಿಕವಾಗಿ ಕ್ಷತ್ರಿಯರನ್ನು ಅವಲಂಬಿಸಿದ್ದರು. ಅದಕ್ಕೆ ಪ್ರತಿಯಾಗಿ ಕ್ಷತ್ರಿಯರು ಸಹ ಪುಣ್ಯಾರ್ಜನೆಯ ವೈದಿಕ ಆಚರಣೆಗಳಿಗಾಗಿ ಬ್ರಾಹ್ಮಣರನ್ನು ಅವಲಂಬಿಸಿದ್ದರು. ಕ್ಷತ್ರಿಯರ ಕರ್ತವ್ಯ ಹೆಚ್ಚಾಗಿ ವ್ಯಾಪಾರ, ವ್ಯವಸಾಯ, ರಕ್ಷಣೆ, ವಿಜಯನಗರ ಕಾಲದಲ್ಲಿ ಕ್ಷತ್ರಿಯರದೇ ಮೇಲುಗೈ ಆಗಿತ್ತು.[೪] ಪ್ರಮುಖವಾಗಿ ಕ್ಷತ್ರಿಯರ ಕರ್ತವ್ಯ ನಾಡಿನ ರಕ್ಷಣೆಯಾಗಿತ್ತು.

### ವೈಶ್ಯರು

ಮೂರನೆಯ ವರ್ಗದವರಾದ ವೈಶ್ಯರು ವರ್ತಕರು, ಬ್ರಾಹ್ಮಣರು ನಾಡಿನ ಧಾರ್ಮಿಕ ಜೀವನ ರೂಡಿಸಿದರೆ ಕ್ಷತ್ರಿಯರು ರಾಜ್ಯದ ಆಡಳಿತ ಸೂತ್ರವನ್ನು ಅನುಸರಿಸುತ್ತಿದ್ದು. ವೈಶ್ಯರು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸುವವರಾಗಿದ್ದರು. ಇವರು ವರ್ತಕ ವರ್ಗದವರಾಗಿದ್ದು ಮನುಸ್ಮೃತಿಯಲ್ಲಿ ವೈಶ್ಯರ ಕರ್ತವ್ಯಗಳು ಎಂದರೆ ಪಶುಪಾಲನೆ, ದಾನಕೊಡುವುದು, ಯಜ್ಞಮಾಡುವುದು, ವ್ಯಾಪಾರ ಮಾಡುವುದು, ಬಡ್ಡಿಸಾಲ ಕೊಡುವುದು, ಮತ್ತು ಕೃಷಿಯಲ್ಲಿಯೂ ಸಹ ತೊಡಗುವುದು ಪ್ರಸ್ತುತ ಪರಿಸರದಲ್ಲಿ ವ್ಯಾಪಾರಿಗಳು ತಮ್ಮನ್ನು ವೈಶ್ಯರೆಂದು ಹೇಳಿಕೊಂಡಿದ್ದಾರೆ.[೫]



### ಶೂದ್ರರು

ಶೂದ್ರರು ಆರ್ಥಿಕವಾಗಿ ದುರ್ಬಲರು, ಬ್ರಾಹ್ಮಣ, ಕ್ಷತ್ರಿಯು, ವೈಶ್ಯರ ಮೇಲ್ವರ್ಗದವರಾಗಿದ್ದರು. ಒಟ್ಟಿನಲ್ಲಿ ಮೇಲ್ವರ್ಗದವರ ಸೇವಾ ಕಾರ್ಯಗಳನ್ನು ಮಾಡಿಕೊಂಡಿರುವದೇ ಶೂದ್ರರ ಕರ್ತವ್ಯಗಳಾಗಿವೆ ಎಂದು ಮನುಸ್ಮೃತಿಯಲ್ಲಿ ಉಲ್ಲೇಖಿಸಿದೆ.[೬] ಆದಾಗ್ಯೂ ಇವರುಗಳಲ್ಲಿ ಡೊಂಬ, ನಾವಿದ, ಹಾವಾಡಿಗರು ಮೊದಲಾದವರು ತಮ್ಮ ಹಕ್ಕು ಬಾದ್ಯತೆಗಳನ್ನು ನೋಡಿಕೊಳ್ಳುತ್ತಿದ್ದರು. ಇವರಿಗೆಲ್ಲ ವಿಜಯನಗರ ಅರಸರುಗಳಿಂದ ಪ್ರೂತ್ಸಾಹ ದೊರೆಯುತ್ತಿತ್ತು.[೭] ವರ್ಣ ಎಂಬ ಶಬ್ದ ಬ್ರಾಹ್ಮಣ. ಕ್ಷತ್ರಿಯ, ವೈಶ್ಯ, ಶೂದ್ರ ಕುರಿತು ಅನೇಕ ಸಾಹಿತ್ಯಿಕ ಕೃತಿಗಳೂ ಇವರ ಲಕ್ಷಣಗಳನ್ನು ನಿರೂಪಿಸುತ್ತಿವೆ. ಪೂಜಾಕಾರ್ಯಗಳಲ್ಲಿ ಬ್ರಾಹ್ಮಣರಿಗೆ, ವ್ಯಾಪಾರ ವಹಿವಾಟು ವೈಶ್ಯರಿಗೆ, ಮೇಲ್ವರ್ಗದವರ ಸೇವಾ ವೃತ್ತಿಗಳು ಶೂದ್ರರು ನಿರ್ವಹಿಸುತ್ತಿದ್ದರು. ಈ ಮೇಲಿನ ನಾಲ್ಕು ವರ್ಣಗಳು ಅಂದಿನ ಸಮಾಜದಲ್ಲಿ ಮೇಲಿನ ಅಸಮಾನತೆಯನ್ನು ತೋರಿಸುತ್ತವೆ. ಶಿವಶರಣರುಗಳು ತಮ್ಮ ವಚನ ಮತ್ತು ಕೀರ್ತನೆಗಳ ಮೂಲಕ ಈ ವ್ಯವಸ್ಥೆಗೆ ಹೊಸ ರೂಪವನ್ನು ನೀಡಿದರು.[೮] ಈ ನಾಲ್ಕು ವರ್ಣಗಳು ವರ್ಣವ್ಯವಸ್ಥೆಯನ್ನು ಸೂಚಿಸಿದರೂ ಇಲ್ಲಿನ ಪರಿಸರದ ಸುತ್ತಮುತ್ತಲಿನಲ್ಲಿ ಈಗಲೂ ಸಹ ಅನೇಕ ಉಪಜಾತಿಗಳಿವೆ. ಉದಾ; ಕುರುಬ, ನಾಯಕ, ಒಕ್ಕಲಿಗ, ಶೆಟ್ಟಿ, ಬ್ರಾಹ್ಮಣ, ಜೈನ, ಕುಂಬಾರ, ಗೊಲ್ಲ. ಇತ್ಯಾದಿ.

ಸಮಾಜದಲ್ಲಿ ನಾಲ್ಕು ತರಹದ ವರ್ಣವ್ಯವಸ್ಥೆ ಇದ್ದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ವಿಂಗಡಿಸಿದರೂ ಪ್ರಸ್ತುತ ಧರ್ಮಪುರ ಪರಿಸರದಲ್ಲಿ ಇವುಗಳ ಜೊತೆಗೆ ಇತರೆ ಕೋಮುವಾರು ಜಾತಿಗಳು ಇದ್ದು, ವೃತ್ತಿಗಳಿಗನುಸಾರವಾಗಿ ಜೀವನ ನಡೆಸುತ್ತಾ ಅಂದಿನಿಂದ ಇಂದಿನವರೆವಿಗೂ ಬಂದಿದ್ದು ತಮ್ಮ ಜೀವನ ಕ್ರಮದಲ್ಲಿ ಕೆಲವು ಬದಲಾವಣೆಗಳನ್ನು ಸಹ ಕಂಡುಕೊಂಡಿದ್ದಾರೆ.

ಈ ಪರಿಸರದಲ್ಲಿ ವಾಸಿಸುವ ಜನಸಮುದಾಯವು ಪರಂಪರೆಯ ರಕ್ಷಣೆ ಮತ್ತು ಮುಂದುವರಿಕೆಗಾಗಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಮುಖ್ಯವಾಗಿ ಈ ಪರಿಸರದಲ್ಲಿ ಹಿಂದೂ, ಮುಸಲ್ಮಾನ, ಜೈನ, ಕ್ರೈಸ್ತ ಧರ್ಮದವರು ವಾಸಿಸುತ್ತಿದ್ದಾರೆ. ಹಿಂದೂ ಧರ್ಮದಲ್ಲಿ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ, ನಾಯಕ, ಕುರುಬ, ಉಪ್ಪಾರ, ಗೊಲ್ಲ, ಲಂಬಾಣಿ, ಮಾದಿಗ, ಕಮ್ಮಾರ, ಕುಂಬಾರ, ಪದ್ಮಶಾಲಿ, ವಿಶ್ವಕರ್ಮ, ಶೆಟ್ಟಿ, ಹೀಗೆ ಹಲವಾರು ಜಾತಿಗಳು ವಾಸಿಸುತ್ತಿವೆ. ಇವರುಗಳಲ್ಲಿ ಆಯಾ ಸಮುದಾಯಗಳಿಗೆ ಸಂಭಂದಿಸಿದಂತೆ ಒಂದೊಂದು ಸಂಸ್ಕೃತಿಯ ಜೀವನ ವಿಧಾನ ಭಿನ್ನವಾಗಿ ಕಂಡುಬರುತ್ತದೆ. ಈ ಪರಿಸರದಲ್ಲಿ ವಾಸಿಸುವಂತಹ ಎಲ್ಲಾ ಸಮುದಾಯಗಳು ಹಿಂದೂ ಧರ್ಮೀಯ ಎಲ್ಲಾ ಹಬ್ಬ ಹರಿದಿನಗಳನ್ನು ಮತ್ತು ಜಾತ್ರೆಗಳನ್ನು ಉತ್ಸವಗಳನ್ನು ಆಚರಿಸುತ್ತಾರೆ. ಕೆಲವು ಜಾತಿಗಳು ಭಿನ್ನ ನೆಲೆಯಲ್ಲಿ ಸಂಪ್ರದಾಯ ಮತ್ತು ನಂಬಿಕೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಕೆಲವು ಸಮುದಾಯಗಳು ಅವರದೇ ಆದಂತಹ ದೇವರುಗಳನ್ನು ಪೂಜಿಸುತ್ತಿರುವುದು ತಿಳಿಯುತ್ತದೆ. ಆಧುನಿಕವಾಗಿ ಸೃಷ್ಟಿಸಿಕೊಂಡಿರುವ ಅನೇಕ ದೈವಗಳು ಈ ಸಮುದಾಗಳ ಮೇಲೆ ಪ್ರಭಾವ ಬೀರಿವೆ. ಈ ಪರಿಸರದಲ್ಲಿ ಹನುಮಂತ, ಬಸವಣ್ಣ, ಈಶ್ವರ, ವಿಷ್ಣು, ಮಾರಮ್ಮ, ಗೊಲ್ಲಾಳ್ಯಮ್ಮ, ದುರ್ಗಮ್ಮ, ಕೊಲ್ಲಾರಮ್ಮ, ಎತ್ತಪ್ಪ, ಭೂತಪ್ಪ, ಹೀಗೆ ಅನೇಕ ದೈವಗಳು ಈ ಜನರ ಜೀವನದಲ್ಲಿ ಹಾಸುಹೊಕ್ಕಿವೆ. ಹದಿನೆಂಟನೆಯ ಶತಮಾನದಲ್ಲಿ ಸ್ಥಾಪನೆಗೊಂಡಂತಹ ಅನೇಕ ವೀರಶೈವ ಮಠಗಳು, ಸಾದು ಸಂತರು ಪ್ರಭಾವ ಬೀರಿದ್ದಾರೆ.

ಈ ಪರಿಸರದಲ್ಲಿ ಅನೇಕ ದೇವಾಲಯಗಳು ಮಠಗಳೂ ಇವೆ, ಸಾಂಸ್ಕೃತಿಕ ವೀರರು ಐತಿಹಾಸಿಕ ಪುರುಷರನ್ನು ಸಹ ಕಾಣಬಹುದು. ಇಲ್ಲಿ ವಾಸಿಸುವಂತಹ ಜನತೆ ಕೆಲವು ದೈವಗಳಿಗೆ ಒಕ್ಕಲಾಗಿದ್ದಾರೆ, ಅಂದರೆ ಒಕ್ಕಲಿಗರಿಗೆ ಸಂಭಂದಿಸಿದ ಪಟ್ಟನಾಯಕನಹಳ್ಳಿಯ ಶ್ರೀ ನಂಜಾವದೂತ ಸ್ವಾಮಿ ಮಠ, ಗೊಲ್ಲ ಸಮುದಾಯದ ಗೊಲ್ಲಾಳ್ಯಮ್ಮ, ಇನ್ನುಳಿದ ಸಮುದಾಯಗಳು ತಮ್ಮ ತಮ್ಮ ಕುಲದೈವ, ಮನೆದೈವ, ಪ್ರಸಿದ್ದದೈವ ಹೀಗೆ ಹಲವಾರು ದೈವ ಸಂಭಂದಿ ಸಂಗತಿಗಳನ್ನು ಕಾಣಬಹುದು.

**ಒಕ್ಕಲಿಗ**

ಕುಂಚಿಟಿಗರೆಂದು ಕರೆಯಲಾಗುವ ಒಕ್ಕಲಿಗರು ಈ ಪರಿಸರದಲ್ಲಿ ಬಹುಸಂಖ್ಯಾತರಾಗಿದ್ದು ಈ ಪ್ರದೇಶದ ಸುತ್ತಮುತ್ತಲಿನಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರು ತಮ್ಮ ಪೂರ್ವಜರ ಹೆಸರಿನಲ್ಲಿ ಒಟ್ಟು ನಲವತ್ತೆಂಟು ಬೆಡಗುಗಳಾಗಿ ವಿಂಗಡಿಸಿಕೊಂಡಿದ್ದಾರೆ, ಅವುಗಳೆಂದರೆ ಅಟ್ಟೀನವರ, ಅರಸನವರು, ಅರಳೀನವರು, ಕಾಗೇನವರು, ಜಾನಕಲ್ಲುನವರು, ಕಂಡೇರು, ಉಂಡೆನವರು, ಕರಿಕೇನವರು, ಕಂಬಳಿಯವರು, ಕಾಗೇವರು, ಜಾನಕಲ್ಲುನವರು, ಬಡವನವರು,

ಚಳ್ಳೇನವರು, ವುಳ್ಳೇನವರು, ಶೆಟೇನವರು, ಸಾರಂಗದವರು, ಹಾಲೇನವರು, ಹಾವನವರು, ಹುಳಿಯಾರರು ಇತ್ಯಾದಿ ಇವುಗಳಲ್ಲಿ ಕೆಲವು ಗುಂಪುಗಳನ್ನು ಅಣ್ಣತಮ್ಮಂದಿರೆಂದು ಕೆಲವು ಪಂಗಡಗಳನ್ನ ನೆಂಟರಂತೆ ಪರಿಗಣಿಸಿದ್ದಾರೆ. ಇವರ ವೃತ್ತಿ ಹೆಚ್ಚಾಗಿ ವ್ಯವಸಾಯವಾಗಿದೆ. ಆದಾಗ್ಯೂ ನೌಕರಿ, ಪ್ರಾಣಿ ಸಾಕಾಣಿಕೆ, ಶೈಕ್ಷಣಿಕ, ರಾಜಕೀಯ ಔದ್ಯೂಗಿಕ ವಾಣಿಜ್ಯರಂಗದಲ್ಲಿಯೂ ಸಹ ಸಕ್ರೀಯವಾಗಿ ಪಾತ್ರವಹಿಸುತ್ತಾರೆ.

**ಕುರುಬರು**

ಕುರುಬರು ಸಹ ಈ ಪರಿಸರದಲ್ಲಿ ಮುಖ್ಯವಾದ ಜನಾಂಗಗಳಲ್ಲೊಂದಾಗಿದೆ. ಈ ಜಾತಿಯಲ್ಲಿ ಪ್ರಧಾನವಾಗಿ ಹಾಲು, ಅಂಡೆ, ಜಾತಿ ಕುರುಬರೆಂಬ ಪಂಗಡಗಳಿವೆ. ಇವರಲ್ಲಿಯೂ ಸಹ ಅನೇಕ ಬೆಡಗುಗಳಾಗಿ ಒಡೆದಿವೆ. ಇವರ ಮಾತೃಭಾಷೆ ಕನ್ನಡ ಇವರು ವೃತ್ತಿಪರ ಕುಲದವರು ಇವರ ಮೂಲಕಸುಬು ಕುರಿಸಾಕಣಿಕೆ, ಕಂಬಳಿ ನೇಯುವುದು, ಇತ್ತೀಚಿನ ದಿನಗಳಲ್ಲಿ ಈ ವೃತ್ತಿಯ ಜೊತೆಗೆ ವ್ಯವಸಾಯ ಮತ್ತಿತರ ಕಸುಬುಗಳನ್ನು ನಿರ್ವಹಿಸುತ್ತಿದ್ದಾರೆ.

**ಕುಂಬಾರ**

ಕುಂಬಾರ ಎಂದರೆ ಮಡಿಕೆ ಮಾಡುವವರು ಈ ಒಂದು ಪಂಗಡದವರು ಸಹ ಈ ಪರಿಸರದಲ್ಲಿ ಕಂಡಿಬರುತ್ತಾರೆ. ಪಾರಂಪರಿಕವಾಗಿ ಬಂದ ಇವರು ಮಣ್ಣಿನ ಪಾತ್ರೆ ತಯಾರಿಸುವ ವೃತ್ತಿಯನ್ನು ಇಂದಿಗೂ ಸಹ ಧರ್ಮಪುರದ ಹತ್ತಿರದ ಖಂಡೇಂನಹಳ್ಳಿ ಗ್ರಾಮದಲ್ಲಿ ಮಡಿಕೆ ತಯಾರಿಕೆ ಮುಂದು ವರೆಸಿಕೊಂಡು ಬರುತ್ತಿದ್ದಾರೆ. ಇದರ ಜೊತೆಗೆ ಇತ್ತೀಚಿನ ದಿನಗಳಲ್ಲಿ ಕೆಲವರು ಕುಲವೃತ್ತಿಯನ್ನು ಬಿಟ್ಟು ಇತರೆ ವೃತ್ತಿಯನ್ನು ನಿರ್ವಹಿಸುತ್ತಾ ಪ್ರಗತಿ ಹೊಂದಿದ್ದಾರೆ.

**ಗೊಲ್ಲರು**

ಗೊಲ್ಲರು ಯಾದವ, ಅಡವಿಗೊಲ್ಲ, ಮತ್ತು ಗೋಪಾಲರೆಂದು ಕರೆಯುತ್ತಾರೆ ಇವರು ಹೆಚ್ಚಾಗಿ ಈ ಹಿಂದೆ ಕುರಿ, ಆಡು ಹಸುಗಳನ್ನು ಸಾಕುತ್ತಿದ್ದರು ಹಾಲನ್ನು ಮಾರಿ ಜೀವನ ನಿರ್ವಹಿಸುತ್ತಿದ್ದರು, ಇವರಲ್ಲಿಯೂ ಸಹ ಹಲವು ಉಪಪಂಗಡಗಳಿದ್ದು ಸುಮಾರು ಹದಿಮೂರು ಉಪಜಾತಿಗಳಿವೆ, ಹೆಸರೇ ಸೂಚಿಸುವಂತೆ ಕಾಡಿನಲ್ಲಿ ಹುಟ್ಟಿ ಕಾಡಿನಲ್ಲಿ ವಾಸಿಸುವವರನ್ನು ಕಾಡುಗೊಲ್ಲರೆಂದು, ಊರಿನಲ್ಲಿ ವಾಸಿಸುವವರನ್ನು ಊರುಗೊಲ್ಲರೆಂದು ಕರೆಯುತ್ತಾರೆ. ಇವರ ವೃತ್ತಿ ಪ್ರಾಣಿ ಸಾಕಾಣಿಕೆ ಜೊತೆಗೆ ವ್ಯವಸಾಯವನ್ನು ರೂಡಿಸಿಕೊಂಡುಬಂದಿದ್ದಾರೆ. ಗೊಲ್ಲರಲ್ಲಿ ಸಾಮಾನ್ಯವಾಗಿ ವೈಷ್ಣವ ಪಂಥದವರೇ ಅಂದರೆ ಕೃಷ್ಣನ ಪರಮ ಭಕ್ತರು ಎಂದು ಹೇಳಬಹುದು. ಈ ಪರಿಸರದಲ್ಲಿ ಅವರು ಹೆಚ್ಚಾಗಿ ಕಂಡುಬಂದಿದ್ದು ಅವರದೇ ಆದಂತಹ ಹಟ್ಟಿಗಳನ್ನು ನಿರ್ಮಿಸಿಕೊಂಡು ಸುತ್ತಲೂ ಕಳ್ಳಿ ಬೇಲಿಯನ್ನು ಹಾಕಿಕೊಂಡು ವಾಸಿಸುತ್ತಾರೆ. ಇವರು

ಶೈಕ್ಷಣಿಕವಾಗಿ ಹಿಂದುಳಿದಿದ್ದು ಆರ್ಥಿಕವಾಗಿ ಇತ್ತೀಚಿನ ದಿನಗಳಲ್ಲಿ ಸುದಾರಿಸಿದ್ದಾರೆ. ಆದಾಗ್ಯೂ ಇವರ ಸಂಪ್ರದಾಯುಗಳು ಬಹಳ ಕಟ್ಟುನಿಟ್ಟಾಗಿ ನಿರ್ವಹಿಸಿಕೊಂಡು ಬಂದಿದ್ದು ಬದಲಾವಣೆಯನ್ನು ಕಂಡುಕೊಳ್ಳುತ್ತಿಲ್ಲ.

**ನಾಯಕ**

ನಾಯಕರನ್ನು ಬೇಡರು, ತಳವಾರ, ವಾಲ್ಮೀಕಿ ಜನಾಂಗದವರು, ಎಂದು ಕರೆಯುವರು ಇವರಲ್ಲಿ ಕೆಲವು ಪಾಳೆಯಗಾರರೆಂದು ಕರೆದುಕೊಳ್ಳುತ್ತಿದ್ದಾರೆ. ಇವರ ಪರಂಪರಾಗತ ವೃತ್ತಿ ಎಂದರೆ ಬೇಟೆಯಡುವುದು, ಮತ್ತು ಸೈನಿಕರಾಗಿದ್ದು ಗ್ರಾಮಗಳ ರಕ್ಷಣೆ ಇವರ ಉದ್ದೇಶ ಆಗಿತ್ತು ಇತ್ತೀಚಿನ ದಿನಗಳಲ್ಲಿ ವ್ಯವಸಾಯವನ್ನು ಮತ್ತೆ ಕೆಲವರು ಶೈಕ್ಷಣಿಕ ಪ್ರಗತಿ ಹೊಂದಿ ನೌಕರಿಯಲ್ಲಿದ್ದಾರೆ. ಈ ಹಿಂದೆ ಇವರು ಪ್ರಾಮುಖ್ಯತೆ ಪಡೆದಿದ್ದು ಪಾಳೇಯಗಾರಿಕೆಯನ್ನು ನಡೆಸುತ್ತಾ ಬಂದಿದ್ದರು. ಇವರ ಪ್ರಭಾವ ಈ ಸುತ್ತಮುತ್ತಲಿನ ಪರಿಸರದಲ್ಲಿ ಬಹಳ ಇದ್ದಿತು ಎಂದು ಹೇಳಬಹುದು.

**ಲಿಂಗಾಯಿತರು**

ವೀರಶೈವರು ಎಂದು ಕರೆಯಲಾಗುವ ಇವರು ಈ ಪರಿಸರದಲ್ಲಿ ಇವರನ್ನು ಪಂಚಾಚಾರ್ಯ, ನೊಳಂಬ, ಜಂಗಮ, ಗೌಡ ಎಂಬ ಒಳಪಂಗಡಗಳಾಗಿ ಕಂಡುಬರುತ್ತಾರೆ. ಇವರು ಎಲ್ಲಾ ಬಗೆಯ ವೃತ್ತಿಗಳನ್ನು ಕೈಗೊಳ್ಳುತ್ತಾರೆ ವ್ಯವಸಾಯ ವ್ಯಾಪಾರ, ವಾಣಿಜ್ಯ, ಸರಕಾರಿ ಉದ್ಯೋಗದಲ್ಲಿ ನಿರತರಾಗಿರುವುದನ್ನು ಕಾಣಬಹುದು ಈ ವರ್ಗದವರು ಸಹ ಈ ಪರಿಸರದಲ್ಲಿ ಕಂಡುಬರುತ್ತಾರೆ.

**ಉಪ್ಪಾರ**

ಉಪ್ಪಾರರನ್ನು ಲವಣ ಕ್ಷತ್ರಿಯರು ಎಂದು ಕರೆಯುತ್ತಾರೆ ಇವರು ಮಣ್ಣಿನಿಂದ ಉಪ್ಪನ್ನ ತಯರಿಸಿ ಮಾರಾಟ ಮಾಡುತ್ತಿದ್ದರು ಬ್ರಿಟೀಷರ ಕಾಲದಲ್ಲಿ ಉಪ್ಪಿನ ಮೇಲೆ ತೆರಿಗೆ ನಿರ್ಬಂಧ ಹೇರಿದ್ದರಿಂದಾಗಿ ಇವರು ಆ ವೃತ್ತಿಯನ್ನು ತೊರೆದು ಇತರ ವೃತ್ತಿಯನ್ನು ಅವಲಂಬಿಸಿದ್ದಾರೆ. ಇಟ್ಟಿಗೆಸುಡುವುದು, ಸುಣ್ಣ ತಯಾರಿಕೆ, ಅಡಿಕೆ ವ್ಯಾಪಾರ ಇತ್ಯಾದಿ ಕಾರ್ಯಗಳಲ್ಲಿ ತೊಡಗಿದ್ದಾರೆ. ಶೈಕ್ಷಣಿಕ ಪ್ರಗತಿಯನ್ನು ಹೊಂದಿ ಹುದ್ದೆಗಳನ್ನು ಸಹ ಹೊಂದಿದ್ದಾರೆ.

**ಹರಿಜನರು**

ಈ ಪರಿಸರದಲ್ಲಿ ಹರಿಜನ ಜನಾಂಗವು ಸಹ ಹೆಚ್ಚಾಗಿ ಕಂಡುಬಂದಿದ್ದು ಇವರನ್ನು ಸಹ ಹಲವು ನಾಮಗಳಿಂದ ಅಂದರೆ ಮಾದಿಗ, ಒಲೆಯ, ಹರಿಜನ, ಅಸ್ಪೃಶ್ಯರು, ಎಂದೆಲ್ಲಾ ಕರೆಯುತ್ತಾರೆ ಇವರು ಮೂಲತಃ ಉದ್ಯೋಗ ಮೇಲ್ವರ್ಗದವರ ಕೆಲಸ ಕಾರ್ಯಗಳನ್ನು

ನಿರ್ವಹಿಸುತ್ತಿದ್ದರು ಚರ್ಮದ ಕೆಲಸ ಜೀತದಾಳು ಹಲವು ಕಾರ್ಯಗಳನ್ನು ನಿರ್ವಹಿಸುತ್ತಿದ್ದರು ಇವರುಗಳಲ್ಲಿ ಅತೀ ಹೆಚ್ಚಾಗಿ ಕಡುಬಡತನ ಕಂಡುಬಂದಿದ್ದು ಇತ್ತೀಚಿನ ದಿನಗಳಲ್ಲಿ ಸರ್ಕಾರಿ ಸವಲತ್ತುಗಳಿಂದ ಸ್ವಯಂ ವೃತ್ತಿಗಳನ್ನ ಕೈಗೊಂಡು ಜೊತೆಗೆ ಇತರೆ ವೃತ್ತಿ, ನೌಕರಿಯಿಂದ ಉತ್ತಮ ಬೆಳವಣಿಗೆ ಸ್ಥಿತಿಯ ಕಡೆಗೆ ಬಂದಿದ್ದಾರೆ.

ಈ ಪರಿಸರದಲ್ಲಿ ಅತೀ ಹೆಚ್ಚಾಗಿ ಈ ಮೇಲ್ಕಂಡ ಜನಾಂಗಗಳು ಕಂಡುಬಂದಿದ್ದು ಇತರೆ ಜನಾಂಗದವರು ವಿರಳ ಎಂದು ಹೇಳಲಾಗಿದೆ. ಈ ಎಲ್ಲಾ ಜನಾಂಗಗಳು ಅವರ ಮೂಲ ವೃತ್ತಿಗಳ ಜೊತೆಗೆ ಇತರೆ ವೃತ್ತಿಗಳನ್ನು ಸಹ ಇತ್ತೀಚಿನ ದಿನಗಳಲ್ಲಿ ನಿರ್ವಹಿಸಿಕೊಂಡು ಬಂದಿದ್ದಾರೆ.

## ಸ್ತ್ರೀಯರ ಸ್ಥಾನಮಾನ

ಸ್ತ್ರೀಯರ ಸ್ಥಾನಮಾನವು ಸಮಾಜದಲ್ಲಿ ಎಲ್ಲಾಕಾಲದಲ್ಲಿಯೂ ಒಂದೇ ತೆರನಾಗಿ ಇದ್ದುದಿಲ್ಲ. ವೇದಕಾಲದಲ್ಲಿ ಸ್ತ್ರೀಯರಿಗೆ ಇದ್ದಂತಹ ಸ್ವಾತಂತ್ರ ಮಾನ ಮನ್ನಣೆಗಳು ಅನಂತರದ ಕಾಲದಲ್ಲಿ ಕಡಿಮೆಯಾದವು. ಹೆಚ್ಚಾಗಿ ಕರ್ನಾಟಕದ ಸ್ತ್ರೀಗೆ ಗೌರವಸ್ಥಾನವಿದ್ದರೂ ಹೆಣ್ಣು ಮನೆ ಬಿಟ್ಟು ಹೊರಕ್ಕೆ ಹೊಗಬಾರದು ಎಂಬ ವಾಡಿಕೆಯಿತ್ತು.[೧೦] ಧಾರ್ಮಿಕ, ರಾಜಕೀಯ, ಆರ್ಥಿಕ, ಕಲೆ ಸಾಹಿತ್ಯ, ಮುಂತಾದ ವಿವಿಧ ರಂಗಗಳಲ್ಲಿ ಮಹಿಳೆಯರು ವಹಿಸಿದ ಪಾತ್ರ, ಗಳಿಸಿದ ಸಾಧನೆ ಅತಿ ಮಹತ್ವದ್ದು.[೧೧] ಸಾಮಾಜಿಕ ಪಾತ್ರದಲ್ಲಿ ಹೆಣ್ಣು ತಾಯಿ, ಪತ್ನಿ, ಸಹೋದರಿ, ಮತ್ತು ಮಗಳಾಗಿ ಬಹಳ ಪ್ರಮುಖ ಪಾತ್ರಳಾಗಿದ್ದಳು. ಇದಕ್ಕೆ ಹಲವಾರು ಶಾಸನಗಳು ಮಾಹಿತಿಯನ್ನು ಒದಗಿಸುತ್ತವೆ. ಮಹಿಳೆಯರ ಮತ್ತೊಂದು ಮುಖ ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡುತ್ತಿದ್ದರು. ಬ್ರಾಹ್ಮಣರಿಗೆ ದಾನ ಮಾಡುವುದು, ಕೆರೆಕಟ್ಟೆ, ಅಗ್ರಹಾರ, ಛತ್ರಗಳ ನಿರ್ಮಾಣ ಮುಂತಾದ ಸಾಮಾಜಿಕ ಕಾರ್ಯಗಳಲ್ಲಿ ಮಹಿಳೆ ಭಾಗವಹಿಸುತ್ತಿದ್ದಳು. ಪತಿಯ ಕೆಲಸ ಕಾರ್ಯಗಳಲ್ಲಿ ಮಕ್ಕಳ ಪಾಲನೆ ಪೋಷಣೆ, ವಿವಿದ ಕಾರ್ಯಗಳನ್ನು ನಿರ್ವಹಿಸುತ್ತಿದ್ದಳು.

ಪ್ರಸ್ತುತ ಪರಿಸರದಲ್ಲಿಯೂ ಸಹ ಮಹಿಳೆಯರ ಪಾತ್ರ ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯ, ಆರ್ಥಿಕ, ಕಲೆಗಳಲ್ಲಿ ಪ್ರಮುಖ ಪಾತ್ರವಹಿಸಿರುವುದು ಕಾಣಬಹುದು, ಗನ್ನಾಯ್ಕನಹಳ್ಳಿಯಲ್ಲಿ ಶ್ರೀಮತಿ ಬಳ್ಳಾರಿ ಸಿದ್ದಮ್ಮ, ಯಶೋದರ ದಾಸಪ್ಪ ಮುಂತಾದ ಮಹಿಳಾ ರಾಜಕಾರಣಿಗಳು ಮಹಿಳೆಯರಿಗಾಗಿ ಮಾತೃಮಂದಿರವನ್ನು ಕಟ್ಟಿಸಿದ್ದಾರೆ.[೧೨] ಪಾಳೆಯಗಾರರ ಕಾಲದಲ್ಲಿ ಚಿತ್ರದುರ್ಗದ ಗಂಡೋಬಳಮ್ಮ ನಾಗತಿ ಮಗ ಕಸ್ತೂರಿರಂಗಪ್ಪನಾಯ್ಕರು ಪುತ್ರ ಸಂತಾನವಿಲ್ಲದೆ ಮರಣಿಸಿದಾಗ ಹೊಸದುರ್ಗ ತಾಲ್ಲೂಕಿನ ಜಾನಕಲ್ಲಿನಲ್ಲಿ ಅಧಿಕಾರಿಯಾಗಿದ್ದ ಭರಮಪ್ಪ ನಾಯಕರ ಮಗ ಹನ್ನೆರೆಡು ವರ್ಷದ ಬಾಲಕನಾದ ರಾಜಮದಕರಿಯನ್ನು ೧೭೫೪

ರಲ್ಲಿ ಪಟ್ಟಕ್ಕೆ ಕೂರಿಸಿ ಕ್ರಿ.ಶ. ೧೭೫೬ರವರೆಗೆ ತಾನೇ ರಾಜಮಾತೆಯಾಗಿ ದುರ್ಗವನ್ನು ಆಳಿದ ಧೀರಮಹಿಳೆ. ೧೭೫೬ ರಲ್ಲಿ ವೃದ್ಧಾಪ್ಯದಿಂದ ಮರಣಹೊಂದುತ್ತಾಳೆ ಈಕೆಗೆ ಪುಣ್ಯವಾಗಲೆಂದು ರಾಜವೀರ ಮದಕರಿ ನಾಯಕರು ಹಿರಿಯೂರಿನಲ್ಲಿದ್ದ ಅನ್ನಛತ್ರದ ಮಠಕ್ಕೆ ಗೌಡನಹಳ್ಳಿ ಗ್ರಾಮವನ್ನ ಉಂಬಳಿ ಹಾಕಿ ಶಾಸನದಲ್ಲಿ ಸಾಕುತಾಯಿ ಗುಂಡೋಬಳಮ್ಮ ಮಹಾಮಾತೃಶ್ರೀ ಎಂದು ಗೌರವಿಸಿದ್ದಾನೆ.[೧೩] ಈ ರೀತಿಯಲ್ಲಿ ಮಹಿಳೆಯರು ಇನ್ನು ಹಲವಾರು ಮಹಾನ್ ಕಾರ್ಯಗಳಲ್ಲಿ ಪ್ರಸ್ತುತ ಪ್ರದೇಶದಲ್ಲಿನ ಮಹಿಳೆಯರು ಸಾಧನೆಯನ್ನು ಮಾಡಿದ್ದಾರೆ, ಕೆಲವು ಕಂಟಕ ಪ್ರಾಯವಾಗಿದ್ದ ದೇವದಾಸಿ ವ್ಯವಸ್ಥೆ ಮತ್ತು ಸತಿಸಹಗಮನ ಮೊದಲಾದ ಅನಿಷ್ಟ ಪದ್ಧತಿಗಳು ಸಹ ಪ್ರಸ್ತುತ ಸಮಾಜದಲ್ಲಿಯೂ ಮುಂದುವರೆದಿವೆ ಎಂಬುದನ್ನು ಗಮನಿಸಬಹುದಾದ ಅಂಶವಾಗಿದೆ. ಇದಕ್ಕೆ ಪೂರಕವಾಗಿ ಪ್ರಸ್ತುತ ಪ್ರದೇಶದಲ್ಲಿ ಕರಿಓಬೇನಹಳ್ಳಿ ಗ್ರಾಮದಲ್ಲಿ ಹರತಿಕೋಟೆಯ ರಾಜನ ಮಗಳು ಕರಿಯೋಬಿಯನ್ನು ದೇವದಾಸಿಗೆ ಬಿಟ್ಟಿರುತ್ತಾರೆ.[೧೪] ಈ ಪ್ರದೇಶದಲ್ಲಿ ಇನ್ನು ಹಲವಾರು ಅನಿಷ್ಟಪದ್ಧತಿಗಳೆಂದರೆ ಗೊಲ್ಲ ಜನಾಂಗದ ಮಹಿಳೆಯರು ಕೆಲವು ಮೂಡನಂಬಿಕೆ ಆಚರಣೆಗಳನ್ನು ಅನುಸರಿಸುತ್ತಿದ್ದಾರೆ, ಎಂದರೆ ಹೆರಿಗೆಯಾದ ಸಂದರ್ಭದಲ್ಲಿ ಮತ್ತು ಋತುಮತಿಯಾದಾಗ ಮನೆ ಬಿಟ್ಟು ಹೊರಗೆ ಇರುವುದು ಸಂಪ್ರದಾಯವಾಗಿ ತಲೆತಲಾಂತರವಾಗಿ ಬೆಳೆದುಬಂದಿದೆ.

**ಸತಿ ಸಹಗಮನ ಪದ್ಧತಿ**

ಹಿಂದೂ ಸಂಸ್ಕೃತಿಯ ಒಂದು ಆಚರಣೆಯಾಗಿದ್ದು ಮರಣಹೊಂದಿದ ಪತಿಯ ಜೊತೆಗೆ ಚಿತೆಗೆ ಹಾರಿ ತಾವು ಪ್ರಾಣ ಬಿಡುವ ಪದ್ಧತಿ ಇತ್ತು ಈ ಪದ್ಧತಿ ಹೆಚ್ಚು ಪ್ರಚಲಿತದಲ್ಲಿದ್ದು ಈ ತರಹದ ಪದ್ಧತಿ ನಮಗೆ ನಿಕೃಷ್ಟವೆನಿಸಿದರೂ ಅಂದಿನ ಸಮಾಜದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ ಮಹಿಳೆಯ ಪಾತಿವ್ರತವನ್ನು ರಕ್ಷಿಸಿಕೊಳ್ಳುವುದಕ್ಕೆ ಈ ತರಹದ ಪದ್ಧತಿ ಇದ್ದಿತೆಂದು ಹೇಳಬಹುದಾಗಿದೆ. ಧರ್ಮಪುರ ಪರಿಸರದಲ್ಲಿಯೂ ಅನೇಕ ವೀರ ಸತಿಗಲ್ಲುಗಳಿದ್ದು ನಾಯಕರ ಹೆಣ್ಣು ಮಗಳೊಬ್ಬಳು ತನ್ನ ಗಂಡ ಕಾಳಗದಲ್ಲಿ ಹೊರಾಡಿ ಮರಣಹೊಂದಿದ ಸಂದರ್ಭದಲ್ಲಿ ಆತನ ಜೊತೆಗೂಡಿ ಆತ್ಮಾರ್ಪಣೆ ಮಾಡಿಕೊಂಡ ನೆನಪಿಗಾಗಿ ಗೌಡನಹಳ್ಳಿ ಗ್ರಾಮದಲ್ಲಿ ವೀರ ಮಾಸ್ತಿಗಲ್ಲುಗಳನ್ನು ನಿರ್ಮಿಸಿದ್ದಾರೆ.[೧೫] ಇದೇ ತರಹದ ಈ ಪರಿಸರದ ಸುತ್ತಮುತ್ತಲಿನಲ್ಲಿ ಹಲವಾರು ವೀರ ಸತಿಗಲ್ಲುಗಳು ದೊರೆತಿದ್ದು ಸತಿ ಸಹಗಮನ ಆಚರಿಸಿರುವುದು ಕಂಡುಬಂದಿದ್ದು ಸ್ತ್ರೀಯರು ತಮ್ಮ ಪ್ರತಿಷ್ಟೆಯನ್ನು ತೋರಿಸಲಾಗಿತ್ತು.

**ಹಬ್ಬ ಹರಿದಿನಗಳು**

ಪ್ರಾಚೀನ ಕಾಲದಲ್ಲಿಯೂ ಸಹ ಹಲವಾರು ಹಬ್ಬ ಹರಿದಿನಗಳನ್ನು ಹಾಗೂ ಜಾತ್ರೆ, ಉತ್ಸವಗಳನ್ನು ಆಚರಿಸುತ್ತಿದ್ದರು ಎಂದು ಶಾಸನಗಳಿಂದ ಮೌಖಿಕ ಆಕರಗಳಿಂದ

ತಿಳಿಯಬಹುದು. ಅಂದು ವಸಂತೋತ್ಸವ, ಪಾಲ್ಗುಣ ಮಾಸದ ಉತ್ಸವ, ವೈಶಾಖಮಾಸದ ಉತ್ಸವ, ನಿತ್ಯೋತ್ಸವ, ಸಂವತ್ಸತೋತ್ಸವ ಮುಂತಾದ ಉತ್ಸವಗಳನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಜೊತೆಗೆ ಹಬ್ಬಗಳಾದ ಶಿವರಾತ್ರಿ,ಯುಗಾದಿ, ಗೌರಿ ಗಣೇಶ, ನವರಾತ್ರಿ, ದೀಪಾವಳಿ, ನಾಗರಪಂಚಮಿ, ಮೊರಂ, ನೂಲಹುಣ್ಣಿಮೆ, ಮಹಾಲಯ ಅಮಾವಾಸ್ಯೆ ಸಂಕ್ರಾಂತಿ ಮುಂತಾದ ಹಬ್ಬಗಳನ್ನು ಅಚರಿಸುತ್ತಿದ್ದರು ಅಂದಿನ ಹಬ್ಬಗಳನ್ನು ಇಂದಿಗೂ ಸಹ ಆಚರಿಸುವುದನ್ನು ರೂಡಿಸಿಕೊಂಡುಬಂದಿದ್ದಾರೆ. ಹಬ್ಬಗಳು ಮಾನವನ ಮನಸ್ಸಿಗೆ ಆನಂದವನ್ನುಂಟುಮಾಡುವ ಸಾಧನಗಳಾಗಿವೆ.[೧೬] ಇವುಗಳ ಜೊತೆಗೆ ಪಾಳೆಯಗಾರರು ವೀರರಾಗಿದ್ದರಿಂದಾಗಿ ಶಕ್ತಿದೇವತೆಗಳ ಆರಾಧನೆಯನ್ನು ಸಹ ಆಚರಿಸುತ್ತಿದ್ದರು. ಈ ಪ್ರಸ್ತುತ ಪ್ರದೇಶದಲ್ಲಿ ದೇವರುಗಳ ವಿಶೇಷ ಪೂಜೆಯನ್ನು ಸಹ ನಿರ್ವಹಿಸುತ್ತಿದ್ದರು.

**ಜಾತ್ರೆಗಳು**

ಜನರು ಪ್ರಾಚೀನ ಕಾಲದಿಂದಲೂ ನಂಬಿಕೊಂಡುಬಂದಿರುವ ದೇವ ದೇವತೆಗಳನ್ನು ಸಾಮಾಜಿಕವಾಗಿ ಪೂಜಿಸುವುದು ರೂಡಿಯಲ್ಲಿದೆ, ಆದಾಗ್ಯೂ ಭಯ ಭಕ್ತಿಯಿಂದ ಪೂಜಿಸಿ ಪ್ರಾರ್ಥಿಸುವ ಸಂಭ್ರಮದಿಂದ ನೀತಿ ನಿಯಮಗಳ ಮೂಲಕ ಎಲ್ಲಾಜಾತಿ ವರ್ಗಗಳು ಸುತ್ತಮುತ್ತಲಿನ ಗ್ರಾಮಗಳ ಜನರು, ಪುರುಷ, ಸ್ತ್ರೀಯರು ಮಕ್ಕಳು ಒಂದೆಡೆ ಸೇರಿ ಆಚರಿಸುವ ಹಬ್ಬಗಳ ಜೊತೆಗೆ ನಡೆಯುವ ಸಂಭ್ರಮವೇ ಜಾತ್ರೆ ಎನ್ನಲಾಗಿದೆ. ಈ ಜಾತ್ರೆಗಳು ಜನರ ಸಂಸ್ಕೃತಿಯ ವಿಶಿಷ್ಟ ನೆಲೆಗಳಾಗಿ ರೂಪುಗೊಳ್ಳುತ್ತಾ ಬಂದಿವೆ. ಜಾತ್ರೆಯು ಜನಪದರ ಸಂಸ್ಕೃತಿಯ ಒಂದು ಸಂಕೀರ್ಣ ವೇದಿಕೆ ಎಂದು ಹೇಳಬಹುದು. ಜಾತ್ರೆಗಳು ನಡೆಯದೇ ಇರುವಂತಹ ಯಾವುದೇ ಗ್ರಾಮಗಳು ಇರುವುದಿಲ್ಲ. ಪ್ರತಿಯೊಂದು ಜಾತ್ರೆ ನಡೆಯಬೇಕಾದರೆ ಆ ಜಾತ್ರೆಗೆ ಒಂದೂಂದು ಆದಿದೇವತೆ, ಗ್ರಾಮದೇವತೆ, ಪ್ರದೇಶ ದೇವತೆ ಇತ್ಯಾದಿಗಳು ಇದ್ದು ಅವುಗಳದೇ ಆದ ಸ್ಥಳಪುರಾಣ, ಐತಿಹ್ಯ, ಇದ್ದು ಇವುಗಳ ಹಿನ್ನೆಲೆಯಲ್ಲಿ ವರ್ಷದ ನಿರ್ಧಿಷ್ಟ ಕಾಲದಲ್ಲಿ ಜಾತ್ರೆಗಳು ಉತ್ಸವಗಳು ಜರುಗುತ್ತವೆ. ಜಾತ್ರೆ ಆಚರಿಸುವಾಗ ಜಾತ್ರೆಗೆ ಒಂದು ತೇರು ಆತೇರಿನಲ್ಲಿ ಆಯಾ ದೇವತೆಗಳ ಶಿಲ್ಪಗಳನ್ನು ಪ್ರತಿಷ್ಠಾಪಿಸಿ ತೇರಿನಲ್ಲಿ ಇಡುವುದರ ಮೂಲಕ, ಮೊದಲು ಮಡಿ ತೇರನ್ನು ಎಳೆದು ಅಂದಿನ ಪೂಜಾಕಾರ್ಯಗಳನ್ನು ನೆರವೇರಿಸಿ ತದನಂತರವಾಗಿ ತೇರನ್ನು ಪಾದಗಟ್ಟೆಯವರೆಗೆ ಎಳೆದು ಮತ್ತೆ ಮರಳಿ ದೇವತೆಯ ಗುಡಿಯ ಬಳಿಗೆ ತಂದು ನಿಲ್ಲಿಸುವುದು ಇದು ಜಾತ್ರೆಯ ಒಂದು ಪ್ರಾಥಮಿಕ ಮತ್ತು ಪ್ರಧಾನ ಕ್ರಿಯೆ ಎಂದು ಹೇಳಬಹುದಾಗಿದೆ.[೧೭]

ಜಾತ್ರೆಗಳು ಉತ್ಸವಗಳು ಹಲವು ಜಾತಿಗಳ ಮಧ್ಯ ಬೇದಬಾವಗಳಿಲ್ಲದೆ ಪ್ರತಿಯೊಬ್ಬ ವ್ಯಕ್ತಿಯೂ ಸಹ ಭಕ್ತಿ ಭಾವದಿಂದ ಭಾಗವಹಿಸುತ್ತ ಆಚರಿಸುತ್ತಿದ್ದರು. ಪಾಳೆಯಗಾರರ

ಕಾಲಾವದಿಯಲ್ಲಿ ಕುಸ್ತಿ, ಖಡ್ಗವರಸೆ, ಮುಂತಾದ ಶೌರ್ಯ ಪ್ರದರ್ಶನ ನಡೆಯುತ್ತಿತ್ತು ಹಾಗೆಯೇ ಇಂದಿಗೂ ಸಹ ಅವುಗಳನ್ನು ಮುಂದುವರೆಸಿಕೊಂಡುಬಂದಿದ್ದು ಗೆದ್ದವರಿಗೆ ರಾಜರು ಬಹುಮಾನ ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಈ ಸಂದರ್ಭದಲ್ಲಿ ಅನೇಕ ಮನೋರಂಜನಾ ಕಾರ್ಯಕ್ರಮಗಳು ಜರುಗುತ್ತವೆ. ಈ ಪರಿಸರದಲ್ಲಿ ಅಂಬಲಗೆರೆ ರಂಗನಾಥ ಸ್ವಾಮಿ ಜಾತ್ರೆ, ಬೇತೂರು ಬೇನಾಳಮ್ಮ, ಹರಿಯಬ್ಬೆ ಕರಿಯಮ್ಮ, ಕೋಡಿಹಳ್ಳಿ ಕೊಡಿಹಳ್ಳಿಯಮ್ಮ, ಗೊಲ್ಲಹಳ್ಳಿಯ ಗೊಲ್ಲಾಳ್ಯಮ್ಮ ಜಾತ್ರೆಗಳು ಜರುಗುತ್ತವೆ ಸುತ್ತಮುತ್ತಲಿನ ಗ್ರಾಮಗಳ ಜನರು ಸೇರುವುದರ ಮೂಲಕ ವಿಜೃಂಭಣೆಯಿಂದ ಪ್ರತೀವರ್ಷ ಪ್ರೆಬ್ರವರಿ ತಿಂಗಳಿನಲ್ಲಿ ಆಚರಿಸುತ್ತಾ ಬಂದಿದ್ದಾರೆ.

### ಅಡಿಟಿಪ್ಪಣಿಗಳು

೧. ಚಿದಾನಂದ ಮೂರ್ತಿ ಎಂ., ಕನ್ನಡ ಶಾಸನಗಳ ಸಂಸ್ಕೃತಿ ಅಧ್ಯಯನ, ಪುಟ-೪೩೦, ೪೩೧

೨. ಶ್ರೀಕಂಠಶಾಸ್ತ್ರೀ., ಭಾರತೀಯ ಸಂಸ್ಕೃತಿ, ಪುಟ-೨೫೪

೩. ವಿನೋದ್ ಪಾಟೀಲ್., ಕರ್ನಾಟಕದ ಪರಂಪರೆ, ಸಂ-೧, ಪುಟ-೨೬೨

೪. Mahalingam T.P., Economic life in the Vijaynagar Empire, P.33

೫. ಶೇಷನವರತ್ನ., ಮನುಸ್ಮೃತಿ, ಪುಟ-೯೦

೬. ಅದೇ, ಪುಟ-೯೧

೭. ಶಿವರುದ್ರಸ್ವಾಮಿ ಎಸ್ ಎನ್., ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪುಟ-೨೬೧

೮. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ-೧೨, ೧೫

೯. ನಂದೀಶ್ವರ ಎನ್., ಶಿರಾ ತಾಲ್ಲೂಕು ದರ್ಶನ, ಪುಟ-೧೧೨

೧೦. ಚಿದಾನಂದಮೂರ್ತಿ., ಪೂರ್ವೋಕ್ತ, ಪುಟ-೪೮

೧೧. ಪದ್ಮ ಎಂ ಬಿ., ವಿಜಯನಗರ ಅರಸರು ಸಂಪುಟ ೧, ಪುಟ-೭೬

೧೨. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ-೩೫೭

೧೩. ಅದೇ, ಪುಟ ೩೫೮

೧೪. ಅದೇ, ಪುಟ ೩೫೪

೧೫. ಅದೇ, ಪುಟ ೩೫೮

೧೬. ದೇವೇಂದ್ರಕುಮಾರ ಹಕರಾರಿ, ಜಾತ್ರೆಗಳು ಮತ್ತು ಕಲೆ, ಪುಟ-೫೮

೧೭. ಕವಲಿ ಜೆ.ಎ., ಭಾರತೀಯ ಹಬ್ಬಗಳು, ಪುಟ-೨೫

## ೪.೨ ಧಾರ್ಮಿಕ ಸ್ಥಿತಿಗತಿ

ಧರ್ಮವನ್ನು ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ರೂಡಿಯಲ್ಲಿರುವುದನ್ನು ಕಾಣಬಹುದಾಗಿದ್ದು. ಧರ್ಮ ಮಾನವನ ಒಂದು ಆತ್ಮಮುಖಿ ಹಾಗೂ ಸಮಾಜಮುಖಿದಂತಿದೆ. ಧರ್ಮವು ಜನಜೀವನದ ಸಂಸ್ಕೃತಿಯನ್ನು ಭಿಂಬಿಸುತ್ತದೆ. ಮಾನವನು ಸಮಾಜದಲ್ಲಿ ನೈತಿಕ ಜೀವನ ನಡೆಸುವಲ್ಲಿ ಧರ್ಮದ ಪಾತ್ರ ಬಹಳ ಹಿರಿದಾಗಿದೆ. ಏಕೆಂದರೆ ಧರ್ಮವು ಜನಸಾಮಾನ್ಯರ ಭೌಗೋಳಿಕ ಮತ್ತು ನೈತಿಕ ನೆಲೆಗಟ್ಟುಗಳ ಮೇಲೆ ಪ್ರಭಾವ ಬೀರುತ್ತದೆ. ಪ್ರತಿಯೊಬ್ಬ ಮಾನವನು ಸಹ ತನ್ನ ಜೀವನದಲ್ಲಿ ಆಧ್ಯಾತ್ಮಿಕ ಬದುಕನ್ನ ನಿರ್ವಹಿಸಿಕೊಂಡು ಬಂದಿರುತ್ತಾನೆ. ಧರ್ಮದ ಅರ್ಥವನ್ನು ಹುಡುಕಿದರೆ ಜಾತಿ ಪಂಗಡಗಳಿಗೆ ಸೇರಿದ್ದು, ಆಚಾರ, ವಿಚಾರ, ಮೂಡನಂಬಿಕೆ, ಧರ್ಮದ ನಂಬಿಕೆ ಧಾರ್ಮಿಕ ಆಚರಣೆಗಳಲ್ಲಿ ಭಕ್ತಿ ಔಚಿತ್ಯವೆಂದರ್ಥವಾಗುತ್ತದೆ.[೧]

ಮಾನವ ಧರ್ಮ ಬಿಟ್ಟು ಬದುಕಲಾರ, ಜನ್ಮದಿಂದಲೇ ಅದರ ಜೊತೆಯಲ್ಲಿಯೇ ಬೆಳೆದು ಬಂದಿದ್ದಾನೆ, ಧರ್ಮದ ಉಟ್ಟುವಿಕೆಗೆ ಜೀವನದ ಅಗತ್ಯ ಮತ್ತು ಬಿದ್ದ ಶಕ್ತಿಯಫಲ ಇವುಗಳೆರಡರ ಸಮ್ಮಿಲನವೇ ಕಾರಣ. ಇಂದು ಸಂಸ್ಕೃತಿಯ ವಾಹಕ, ಇದರ ಮೂಲಕ ಜನಜೀವನಕ್ಕೆ ಉತ್ತಮವಾದ ಸಾಮಾಜಿಕ ಪರಿಸರವನ್ನು ಒದಗಿಸುತ್ತದೆ. ಧರ್ಮ ಆಯಾ ಪ್ರದೇಶದ ಜನರ ಸಾಮಾಜಿಕ, ಆರ್ಥಿಕ ಜೀವನದ ಕಥನವಾಗಿರುತ್ತದೆ.[೨] ನಾವುಗಳು ಧರ್ಮವನ್ನು ರಕ್ಷಿಸಿದರೆ ನಮ್ಮನ್ನು ಧರ್ಮಗಳು ರಕ್ಷಿಸುತ್ತವೆ ಎಂದು ಎಲ್ಲಾ ಧರ್ಮಗಳು ಹೇಳುತ್ತವೆ.[೩]

ಹಿಂದೂ ಧರ್ಮದ ಮೂಲವನ್ನು ನಾವು ವೇದಗಳಲ್ಲಿ ಕಾಣುತ್ತೇವೆ. ಋಗ್ವೇದದಲ್ಲಿ ಆರ್ಯರು ಅಗ್ನಿ, ಇಂದ್ರ, ವರುಣ, ಇತ್ಯಾದಿ ದೇವತೆಗಳನ್ನು ಆರಾಧಿಸುತ್ತಿದ್ದರು. ಆದರೆ ಋಗ್ವೇದ ಕಾಲದಲ್ಲಿ ಗಂಡು ದೇವತೆಗಳಿಗೆ ದೊರೆತಂತಹ ಸ್ಥಾನಮಾನ ಹೆಣ್ಣು ದೇವತೆಗಳಿಗೆ ದೊರೆತಿರಲಿಲ್ಲ.[೪] ಉತ್ತರ ವೇದಗಳ ಕಾಲದಲ್ಲಿ ವಿಷ್ಣುವು ಪ್ರಾಮುಖ್ಯತೆ ಪಡೆದು ಕೊಂಡು ಜರನ್ನ ರಕ್ಷಿಸುವ ದೇವರಾಗಿ ಉಟ್ಟಿಕೊಂಡನು. ಕ್ರಿ.ಶ. ೬ನೇ ಶತಮಾನದಲ್ಲಿ ಜೈನ ಮತ್ತು ಭೌದ್ಧ ಧರ್ಮಗಳು ಉಳಿದು ಕೊಂಡು ಸೌಹಾರ್ಧತೆಯಿಂದ ಬಾಳಿ ಬೆಳೆದು ನಾಡಿನ ಸಂಸ್ಕೃತಿಯ ಹಿರಿಮೆಗೆ ಒಂದು ಕೊಡುಗೆಯಾಗಿ ಪರಿಣಮಿಸಿವೆ. ಕಾಲಾನಂತರದಲಿ, ಧರ್ಮಗಳ ವಿಸ್ತಾರ, ಮತಾಂತರ, ಧರ್ಮಪ್ರಸಾರ, ದೇವಾಲಯಗಳು ರೂಪಾಂತರ ನಾಶ ಈ ಎಲ್ಲಾ ಕಾರಣಗಳಿಂದ ಮತೀಯ ಘರ್ಷಣೆಗಳು ಸಂಭವಿಸಿದವು.[೫] ಏನೇ ಇದ್ದರೂ ಧರ್ಮಗಳು ಸ್ಥಳೀಯ ಸಂಸ್ಕೃತಿ ಸಾಹಿತ್ಯ, ವಾಸ್ತುಶಿಲ್ಪ, ಮೊದಲಾದ ಕ್ಷೇತ್ರದಲ್ಲಿ ಸಲ್ಲಿಸಿದ ಕೊಡುಗೆಗಳು ಅಜರಾರಮರವಾಗಿವೆ. ಧರ್ಮಗಳು ಬೆಳೆದುಬಂದಂತಹ ರೀತಿಯನ್ನು ಈ ಪ್ರದೇಶದಲ್ಲಿ ಧರ್ಮಗಳ ಪ್ರಾಚೀನತೆ, ಪ್ರಸಾರ, ಬೆಳವಣಿಗೆ ಸ್ಥಳೀಯ ಸಾಹಿತ್ಯ, ಹಾಗೂ ಶಾಸನಗಳ ಆಧಾರದಿಂದ ಸಂದರ್ಭಕ್ಕೆ ಅನುಸಾರವಾಗಿ ಶಾಸನ ಮತ್ತು ಸಾಹಿತ್ಯಿಕ ಕುರುಹುಗಳನ್ನು ಪೂರಕವಾಗಿರಿಸಿಕೊಳ್ಳಲಾಗಿದೆ.

ಪ್ರತಿಯೊಂದು ಪ್ರದೇಶವು ಸಹ ಹಲವು ಧರ್ಮಗಳನ್ನು, ಪಂಗಡಗಳನ್ನು ಒಳಗೊಂಡಿರುತ್ತದೆ. ಪ್ರಸ್ತುತ ಧರ್ಮಪುರ ಪರಿಸರದಲ್ಲಿಯೂ ಸಹ ಶೈವ, ವೈಷ್ಣವ, ಜೈನ, ವೀರಶೈವ, ಮುಸ್ಲಿಂ, ಪಂಥಗಳನ್ನು ನೆಲೆಗೊಂಡಿದ್ದು, ಈ ಪ್ರದೇಶದಲ್ಲಿ ಶೈವ, ವೈಷ್ಣವ ಪ್ರಾಬಲ್ಯವಿದ್ದರೂ ವೈಷ್ಣವ, ಶೈವ, ಜೈನ, ಮುಸ್ಲಿಂ ಧರ್ಮಗಳು ಸಾಮರಸ್ಯದಿಂದ ಇದ್ದುದು ಕಂಡುಬರುತ್ತದೆ.

## ಶೈವ ಧರ್ಮ

ಶೈವ ಧರ್ಮವು ಅತೀ ಪ್ರಾಚೀನವಾದ ಧರ್ಮ, ಶಿವನನ್ನು ಪೋಜಿಸುವ ಶೈವ ಧರ್ಮದ ಇತಿಹಾಸ ಪ್ರಾಚೀನ ವೇದ ಕಾಲಕ್ಕಿಂತಲೂ ಹಿಂದೆ ಹೋಗುತ್ತೇವೆ. ಕ್ರಿ ಪೂ. ೩೦೦೦ ವರ್ಷಗಳ ಹಿಂದೆ ಹರಪ್ಪ ಮೆಹಂಜೂದಾರೂ ಉತ್ಖನನಗಳಲ್ಲಿ ಪತ್ತೆಯಾಗಿರುವಂತಹ ಪಳೆಯುಳಿಕೆಗಳು ಶೈವ ಧರ್ಮದ ಇತಿಹಾಸ ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನ ಧರ್ಮ ಎಂಬುದನ್ನು ತಿಳಿಸುತ್ತದೆ.[೬] ಇಲ್ಲಿ ಕೊಂಬುಗಳಿರುವ ದೇವತೆ ಚಿತ್ರವಿರುವ ಲಿಂಗಗಳು ದೊರಿತಿದ್ದು ಇವುಗಳ ಶೈವ ಧರ್ಮದ ಆದಾರಗಳೆಂದು ಸರ್.ಜಾನ್.ಮಾರ್ಷಲ್‌ರವರು ಅಭಿಪ್ರಾಯಪಟ್ಟಿದ್ದಾರೆ.[೭]

ಋಗ್ವೇದಗಳಲ್ಲಿ ಪಶುಪತಿಯು ರುದ್ರನೆಂದು ಪೂಜೆಗೋಳ್ಳುತ್ತಾನೆ. ಯಜುರ್ವೇದ ಕಾಲಕ್ಕೆ ರುದ್ರನೇ ಶಿವನರೂಪವನ್ನು ಪಡೆದು ಶೈವಧರ್ಮದವರ ಆದಿದೇವತೆಯಾಗಿದ್ದನೆಂದು ತಿಳಿದುಬಳುತ್ತದೆ. ಅಂದಿನ ಕಾಲದಲ್ಲಿ ಶಿವನಿಗೆ ಶಂಕರ, ಮಹದೇವ, ಇತ್ಯಾದಿ ಹೆಸರುಗಳು ಬಂದಿವೆ. ಕರ್ನಾಟಕದಲ್ಲಿ ಈ ಧರ್ಮ ಕದಂಬರ ಕಾಲದಿಂದಲೇ ಪ್ರಚಾರಗೊಂಡಿದ್ದು ಈ ರೀತಿಯಲ್ಲಿ ಶಿವನನ್ನು ಪೋಜಿಸುವ ಆರಾಧಿಸುವ ಪ್ರಕ್ರಿಯೆ ಆಧಾರದ ಮೇಲೆ ಶೈವ ಮತಗಳಲ್ಲಿ ಅನೇಕ ಗುಂಪುಗಳನ್ನಾಗಿ ಮಾಡಲಾಗಿದೆ.

ಪ್ರಸ್ತುತ ಅಧ್ಯಯನ ಶೈವ ಧರ್ಮಕ್ಕೆ ಸಂಭಂದಿಸಿದಂತೆ ಧರ್ಮಪುರ ಪರಿಸರಕ್ಕೆ ಮಾತ್ರ ಸೀಮಿತವಾಗಿದೆ. ಸುತ್ತಮುತ್ತಲಿನ ಪರಿಸರದಲ್ಲಿ ಹಲವಾರು ಶೈವ ದೇವಾಲಯಗಳು ಕಂಡುಬಂದಿದ್ದು ಶೈವ ಧರ್ಮದ ಒಂದು ಪ್ರಚಾರ ಈ ಪ್ರದೇಶದಲ್ಲಿ ಎಂದರೆ ಹಿಂದೆ ನೊಳಂಬ ಪಲ್ಲವರ ಆಡಳಿತದ ಕಾಲಾವದಿಯಲ್ಲಿ ಈ ಪ್ರದೇಶದಲ್ಲಿ ಶೈವ ಧರ್ಮ ಪ್ರಚಾರದಲ್ಲಿದ್ದು, ನೊಳಂಬ ಪಲ್ಲವರು ಶೈವ ಧರ್ಮಿಯರಾಗಿದ್ದರಿಂದ ಧರ್ಮಪುರ ಪರಿಸರದ ಸುತ್ತಮುತ್ತಲಿನಲ್ಲಿ ಶೈವ ದೇವಾಲಯಗಳು ಪ್ರಮುಖವಾಗಿ ಪಂಚಲಿಂಗಗಳ ದೇವಾಲಯಗಳನ್ನು, ವೇಣುಕಲ್ಲುಗುಡ್ಡದ ಈಶ್ವರ ದೇವಾಲಯ, ಇತ್ಯಾದಿ ಮಾಡಿರುವುದನ್ನು ಕಂಡರಿಸಲಾಗಿದೆ. ಇಲ್ಲಿನ ಶಿವಲಿಂಗ, ನಂದಿ, ಬೈರವ, ವೀರಭದ್ರ, ಕಾರ್ತೀಕೇಯ, ಉಮಾಮಹೇಶ್ವರ, ಇವುಗಳು ಶೈವ ಪಂಥಕ್ಕೆ ಸೇರಿದ್ದು ಪ್ರಸ್ತುತ ಪ್ರದೇಶದಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಪೂರಕವಗಿರುತ್ತವೆ.

ವೇಣುಕಲ್ಲುಗುಡ್ಡದಲ್ಲಿನ ಬಸವಣ್ಣನದೇವಾಲಯದ ಮುಂಬಾಗದಲ್ಲಿನ ಕ್ರಿ.ಶ. ೧೬೦೫ರಲ್ಲಿನ ಶಾಸನವೊಂದು ಗೋಸಿಕೆರೆಯ ಲಿಂಗದ ವೀರಯ್ಯನ ಮಕ್ಕಳು ಮದಕೆರೆ ಲಿಂಗವೀರಯ್ಯನಿಗೆ ಹೊಲ ಮಾನ್ಯ ದಾನ ಕೊಟ್ಟ ವಿಚಾರ ತಿಳಿಯುತ್ತದೆ.[೮]

### ವೈಷ್ಣವ ಧರ್ಮ

ವೈಷ್ಣವ ಧರ್ಮವು ಸಹ ಶಿವನಿಗೆ ಇತಿಹಾಸವಿರುವಂತೆ ಹಿಂದೂ ಧರ್ಮದಲ್ಲಿ ವಿಷ್ಣುವಿಗೂ ಸಹ ಒಂದು ಇತಿಹಾಸವಿದೆ. ವಿಷ್ಣುವಿನ ಆರಾಧನೆ ಪ್ರಪಂಚದಾಧ್ಯಂತ ಜನಪ್ರಿಯವಾಗಿ ಬೆಳೆದು ಬಂದಿದೆ.[೯] ವಿಷ್ಣುವಿನ ಹಲವಾರು ಅವತಾರಗಳನ್ನು ಕಾಣಲಾಗಿದ್ದು ಋಗ್ವೇದದಲ್ಲಿ ವಿಷ್ಣು ತನ್ನ ಮೂರು ಹೆಜ್ಜೆಗಳಿಂದ ಇಡೀ ಸಮಸ್ತ ಲೋಕವನ್ನೆ ಅಳತೆ ಮಾಡುವಂತಹ ವಿಷಯವನ್ನು ಪ್ರಸ್ತಾಪಿಸಲಾಗಿದೆ. ವೈಷ್ಣವ ಧರ್ಮ ದಕ್ಷಿಣ ಭಾರತದಲ್ಲಿ ಕ್ರಿಪೂದಲ್ಲೆ ಇದ್ದಿತು ಎಂಬುದರ ಬಗ್ಗೆ ನಾನಾ ಘಾಟ್ ಶಾಸನ ಉತ್ತಮ ನಿದರ್ಶನವಾಗಿದೆ.[೧೦] ಉಪನಿಷತ್ತು, ಮಹಾಭಾರತ, ಭಗವದ್ಗೀತೆ, ಪಾಣಿನಿಯ ಅಷ್ಟಾದ್ಯಾಯಿ, ಕಾಳಿದಾಸನ ಶಾಕುಂತಲ, ಮೊದಲಾದ ಗ್ರಂಥಗಳಲ್ಲಿ ಹಾಗೂ ಸಮಕಾಲೀನ ಶಾಸನಗಳಲ್ಲಿ ವಿಷ್ಣುವಿನ ವಿವಿದ ಹೆಸರುಗಳು, ರೂಪಗಳು, ಅವತಾರಗಳು ಈ ಧರ್ಮಕ್ಕೆ ಭಗವತ ವೈಷ್ಣವ ಎಂಬ ಶಬ್ದಗಳು ದೊರೆತಿವೆ.[೧೧] ಇವುಗಲ್ಲದೆ ದೇವತೆಗಳೊಂದಿಗೆ ಮಾಡಿದ ಸಮೀಕರಣ, ಸಿದ್ಧಾಂತ ,ಆಚಾರ, ವಿಚಾರ ಮೊದಲಾದ ವಸ್ತುವಿಚಾರಗಳು ಪ್ರಸ್ತಾಪವಾಗಿವೆ.[೧೨] ವೈಷ್ಣವ ಧರ್ಮದ ಪ್ರಪ್ರಥಮ ಆಕರ ಹಲ್ಮಿಡಿ ಶಾಸನ, ಈ ನಾಡನ್ನಾಳಿದಂತಹ ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ ಮೊದಲಾದ ರಾಜ ಮನೆತನಗಳು ವೈಷ್ಣವ ಧರ್ಮದ ಬೆಳವಣಿಗೆಗೆ ಶ್ರಮಿಸಿದಂತಹ ವಿಚಾರ ಪುರಾತತ್ವೀಯ ಆಕರಗಳಿಂದ ತಿಳಿದುಬರುತ್ತದೆ. ಈ ನಾಡಿನಲ್ಲಿ ಭಾಗವತ ಪಂಥದ ಶ್ರೀ ವೈಷ್ಣವ ಧರ್ಮ ೧೧ನೇ ಶತಮಾನದಿಂದೀಚೆಗೆ ರಾಮಾನುಜಾಚಾರ್ಯರು ಪ್ರಸಾರ ಕೈಗೊಂಡರು ತದನಂತರವಾಗಿ ಹರಿದಾಸರು ಪರಂಪರೆಯ ಮೂಲಕ ಮುಂದುವರೆಸಿದರು. ಕ್ರಿ.ಶ. ಪ್ರಾರಂಭದಿಂದ ೧೨ನೇ ಶತಮಾನದವರೆವಿಗೂ ಶೈವ ಮತ್ತು ವೈಷ್ಣವಧರ್ಮಗಳು ಪರಸ್ಪರ ಸಾಮರಸ್ಯದಿಂದ ಬೆಳೆದು ಬಂದಿವೆ.[೧೩] ಧರ್ಮದ ಪ್ರಚಾರ ಮತ್ತು ಬೆಳವಣಿಗೆಯ ಪ್ರಸ್ತುತ ಅಧ್ಯಯನವಾದ ಧರ್ಮಪುರ ಸುತ್ತಮುತ್ತಲಿನ ಪರಿಸರಕ್ಕೆ ಸೀಮಿತ ಪಡಿಸಿಕೊಂಡು ಪ್ರಸ್ತಾಪಿಸಲಾಗಿದೆ.

ಪ್ರಸ್ತುತ ಧರ್ಮಪುರ ಪರಿಸರದಲ್ಲಿಯೂ ವೈಷ್ಣವ ಧರ್ಮ ಪ್ರಚಾರವಿದ್ದು ಹಲವಾರು ದೇವಾಲಯಗಳು, ಶಾಸನಗಳು, ವೈಷ್ಣವ ಧರ್ಮಕ್ಕೆ ಸಂಭಂದಿಸಿದಂತೆ ಪೂರಕವಾದ ಮಾಹಿತಿಗಳನ್ನು ನೀಡುತ್ತವೆ. ಈ ಪ್ರದೇಶದಲ್ಲಿ ಹಲವಾರು ರಾಜಮನೆತನಗಳು ಆಳ್ವಿಕೆ ಮಾಡಿದ್ದು ಇವರು ವೈಷ್ಣವ ಧರ್ಮದ ಏಳಿಗೆಗೆ ಶ್ರಮಿಸಿದ್ದರು. ದಾನ ದತ್ತಿಗಳು ನೀಡಿದ ಬಗ್ಗೆ ಮಾಹಿತಿಯನ್ನು ತಿಳಿಯಬಹುದಾಗಿದೆ. ವೈಷ್ಣವ ಧರ್ಮಕ್ಕೆ ಸಂಭಂದಿಸಿದ ಹಲವು ದೇವಾಲಯಗಳನ್ನು

ಕಂಡರಿಸಿದ್ದು ಎಂದರೆ ಅಂಬಲಗೆರೆ ರಂಗನಾಥಸ್ವಾಮಿ ದೇವಾಲಯ, ಧರ್ಮಪುರ ರಂಗನಾಥಸ್ವಾಮಿ ದೇವಾಲಯ, ಅಬ್ಬಿನಹೊಳೆ ರಂಗನಾಥಸ್ವಾಮಿ ದೇವಾಲಯ, ಹರ್ತಿಕೋಟೆಯ ಅಹೋಬಲ ನರಸಿಂಹಸ್ವಾಮಿ ದೇವಾಲಯ ಇದಕ್ಕೆ ಪೂರಕವಾಗಿ ಸುತ್ತಮುತ್ತಲಿನ ಮೂರ್ತಿಶಿಲ್ಪಗಳು ವಿಷ್ಣು, ಗರುಡ, ವೇಣುಗೋಪಾಲ, ಆಂಜನೇಯ, ಲಕ್ಷ್ಮಿನಾರಾಯಣ, ಉಗ್ರನರಸಿಂಹ, ಕೃಷ್ಣ, ರಾಮ, ಚನ್ನಕೇಶವ, ವಿವಿಧ ವೈಷ್ಣವ ಮೂರ್ತಿಶಿಲ್ಪಗಳ ಆರಾದನೆಯೂ ಇದ್ದು ಈ ಪ್ರದೇಶ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಮುಖ್ಯ ಆಧಾರಗಳನ್ನು ಒದಗಿಸಿದೆ.

ವೈಷ್ಣವ ಧರ್ಮಕ್ಕೆ ಸಂಭಂದಿಸಿದಂತೆ ಈ ಪ್ರದೇಶದ ಉಪ್ಪಾರಹಳ್ಳಿಯ ಪಟೇಲ ರಂಗಣ್ಣನ ಜಮೀನಿನಲ್ಲಿ ಇದ್ದ ಕ್ರಿಶ ೧೪೭೬ರಲ್ಲಿನ ಶಾಸನ ಅಂಬಲಗೆರೆಯ ರಂಗನಾಥಸ್ವಾಮಿಗೆ "ಪರಿಕರಹಳ್ಳಿ" ಯನ್ನು ವೆಂಗಳಾಪುರವೆಂದು ಕರೆದು ಉಂಬಳಿ ಹಾಕಿದ ಬಗ್ಗೆ ತಿಳಿಸುತ್ತದೆ.[೧೪] ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನ ಶಿಡ್ಲಯ್ಯನಕೋಟೆ ಗ್ರಾಮದ ಬ್ರಹ್ಮದೇವರ ದೇವಾಲಯದಲ್ಲಿನ ಶಾಸನ ಶಿಡ್ಲಯ್ಯನಕೋಟೆಯ ಕಾಣಾಚಿಯಗೌಡ ಬ್ರಹ್ಮದೇವರ ದೇವಾಲಯ ಕಟ್ಟಿಸಿ ಗೌಡನ ಮೂಮ್ಮಗ ಸಿರಿಯಗೊಂಡ ಚಿಕ್ಕಯ್ಯನು ಅವರ ಚಿಕ್ಕಪ್ಪನಾದ ದೊಡ್ಡಲಕ್ಕಯ್ಯನು ನಿರ್ವಹಿಸಿಗೊಂಡು ಹೋಗುವುದರ ಬಗ್ಗೆ ಪ್ರಸ್ತಾಪಿಸುತ್ತದೆ.[೧೫] ಬಿದರಕೆರೆ ಗ್ರಾಮದ ಹನುಮಂತ ದೇವಾಲಯದ ಆವರಣದಲ್ಲಿ ಶಾಸನವೊಂದಿದ್ದು ಸರ್ವಜಿತು ಸಂವತ್ಸರ ವೈಶಾಖ ಶುದ್ದ ಕ್ರಿ.ಶ.೧೫೮೭ರ ಶಾಸನವೊಂದು ಶ್ರೀ ಮತ್ತು ಹರತಿ ಗುರು ಚಿಕ್ಕಪ್ಪನ ಮಗ ಚಿಕ್ಕಸಿದ್ದಪ್ಪನು ಗಿರಿಯಣ್ಣನ ಮಗ ಕೋನಪ್ಪನಿಗೆ ಬಿದಿರಕೆರೆ ಹನುಮಂತದೇವರನ್ನು ಪೋಜೆ ಮಾಡಿ ಕೊಂಡಿರಲು ಬೇಡರಹಳ್ಳಿಯನ್ನು ಉಂಬಳಿ ಹಾಕಿ ಅದರ ಆದಾಯವನ್ನು ಊಟಮಾಡಿಕೊಂಡಿರಲು ದಾನಕೊಟ್ಟ ಎಂಬುದನ್ನು ಉಲ್ಲೇಖಿಸುತ್ತದೆ.[೧೬] ಅದೇ ಸ್ಥಳದಲ್ಲಿ ಮತ್ತೊಂದು ಶಾಸನ ಕಾರ್ಯಕರ್ತರಾದ ಚಿಕ್ಕ ತಿಮ್ಮಣ್ಣನು ಬಿದರಕೆರೆ ಗ್ರಾಮದ ಹನುಮಂತ ದೇವಾಲಯದ ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗಲು ಹೊಲವನ್ನು ದಾನ ಕೊಟ್ಟು ವಸ್ತು ವಿಚಾರ ತಿಳಿಸುತ್ತದೆ.[೧೭] ಇದೇ ಪರಿಸರದಲ್ಲಿನ ಅಬ್ಬಿನಹೊಳೆ ಗ್ರಾಮದಲ್ಲಿನ ಏಳುಮಂಧ್ಯಕ್ಕನ ದೇವಾಲಯದ ಬಳಿಯ ಶಾಸನದಿಂದ ಕ್ರಿ.ಶ.೧೧೬೯ರಲ್ಲಿ ಸುಂಕದ ಬಾಗಯ್ಯ ಬೇಮಯ್ಯನು ಅಬ್ಬಿನಹೊಳೆಯ ಶ್ರೀ ರಾಮದೇವರ ಅಖಂಡ ದ್ವೀಪ, ದೂಪ, ನೈವೇದ್ಯ ಕಾರ್ಯಗಳಿಗೆ ಮಾನ್ಯ ನೀಡಿದ ವಿಚಾರ ತಿಳಿಯುತ್ತದೆ.[೧೮]

## ಜೈನ ಧರ್ಮ

ಜೈನ ಧರ್ಮ ಸಹ ಇತಿಹಾಸದಲ್ಲಿ ತನ್ನದೇ ಅದಂತಹ ಸ್ಥಾನ ಮಾನವನ್ನು ಹೊಂದಿದೆ. ವಿಜಯನಗರ ಕಾಲದಲ್ಲಿ ಜೈನಧರ್ಮ ಒಂದು ಪ್ರಮುಖವಾದ ಧರ್ಮವಾಗಿದ್ದು ಜಿನನಿಂದ ಬೋದಿಸಲ್ಪಟ್ಟ ಧರ್ಮವೇ ಜೈನಧರ್ಮದ ಪ್ರಮುಖ ಗುರಿ ಆತ್ಮವು ತನ್ನ ಸಹಜವಾದ

ಶುದ್ಧತೆಯನ್ನು ಪಡೆದುಕೊಂಡು ಜ್ಞಾನವನ್ನು ಪಡೆಯುವುದಾಗಿದೆ. ಮೋಕ್ಷವನ್ನು ಪಡೆಯಬೇಕಾದರೆ ಪಾಪ ಪುಣ್ಯಗಳೆರಡನ್ನು ಮೀರಿ ನಿಲ್ಲಬೇಕು. ಆದುದರಿಂದಾಗಿ ಕಠಿಣಶ್ರಮ ಅವಶ್ಯಕವಾಗಿರುತ್ತದೆ. ಈ ಧರ್ಮದಲ್ಲಿ ಪ್ರಮುಖವಾಗಿ ಯೋಗಕ್ಕೆ ಸ್ಥಾನವಿದೆ. ಕರ್ನಾಟಕದಲ್ಲಿ ಜೈನ ಧರ್ಮ ಕ್ರಿಪೂ. ೩೦೦ರಲ್ಲೆ ನೆಲೆಗೊಂಡಿತು. ಜೈನಧರ್ಮ ದಕ್ಷಿಣ ಕರ್ನಾಟಕದಲ್ಲಿ ಶ್ರವಣಬೆಳಗೊಳದಲ್ಲಿ ನೆಲೆನಿಂತಿತು.[೧೯] ಈ ಪ್ರದೇಶ ಪ್ರಸಿದ್ಧ ಜೈನ ಕೇಂದ್ರವಾಗಿದೆ. ಜೈನಧರ್ಮದಲ್ಲಿ ೨೪ ತೀರ್ಥಂಕರರನ್ನು ಪೋಜಿಸುತ್ತಿದ್ದರು. ಇವರಲ್ಲಿ ಕೊನೆಯ ತೀರ್ಥಂಕರ ಮಹಾವೀರ ಈತನ ಹಿಂದೆ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನು ಕ್ರಿಪೂ.೮ನೇ ಶತಮಾನದಲ್ಲಿ ಬಾಳಿಬದುಕಿದನು.[೨೦] ಈ ಧರ್ಮ ವಿಜಯನಗರ ಕಾಲಕ್ಕೆ ಕ್ಷೀಣಿಸುತ್ತಾ ಬಂದಿದ್ದು ಜೈನಧರ್ಮೀಯರು ಜೈನಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಲು ಪ್ರಯತ್ನಿಸಿದರು. ಈ ಕಾಲದಲ್ಲಿ ಸಾಹಿತಿಗಳು, ಪಂಡಿತರು, ದಂಡನಾಯಕರುಗಳು ಜೈನ ಧರ್ಮೀಯರಾಗಿದ್ದರು. ಇರುಗಪ್ಪ ದಂಡನಾಯಕ ಮಧುರ, ನೇಮಿಚಂದ್ರ, ಮತ್ತು ವಿದ್ಯಾದರ ಮುಂತಾದ ಜೈನ ಕವಿಗಳು, ಜೈನ ಸಾಹಿತ್ಯವನ್ನು ಮುಂದಿನ ಪೀಳಿಗೆಗೆ ಕೊಂಡೊಯ್ದೊರು ಇವರುಗಳಿಂದ ಜೈನ ಸಾಹಿತ್ಯ, ಧರ್ಮ ಹೆಚ್ಚು ಬೆಳೆಯಿತು. ಪ್ರಸ್ತುತ ಅಧ್ಯಯನ ಪ್ರದೇಶದ ಸುತ್ತಮುತ್ತಲಿನಲ್ಲಿ ಜೈನಧರ್ಮ ಪ್ರಭಾವ ಪ್ರಚಾರ ಇದ್ದು ಜೈನಧರ್ಮದ ಹಲವು ಶಾಸನಗಳು, ಶಿಲ್ಪಗಳು, ದೇವಾಲಯಗಳು ಕುರುಹುಗಳು ದೊರೆತಿವೆ. ಹರ್ತಿಕೋಟೆಯ ಗ್ರಾಮದಲ್ಲಿ ಗಂಗರ ಕಾಲದಲ್ಲಿ ನಿರ್ಮಾಣ ಮಾಡಿದಂತಹ ಪ್ರಾಚೀನ ಆಂಜನೇಯ ದೇವಾಲಯವಿದ್ದು ಇದಕ್ಕೆ ಹತ್ತಿರದ ಕಲ್ಲು ಮಂಟಪದಲ್ಲಿ ಜಿನ ಮೂರ್ತಿಇದೆ.[೨೧] ಧರ್ಮಪುರ ಶ್ರೀ ಪಂಚಲಿಗೇಶ್ವರ ಪ್ರೌಡಶಾಲೆ ಮುಂಬಾಗದಲ್ಲಿ ಜೈನ ಶಾಸನವಿದ್ದು ಈ ಶಾಸನವು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೊರೆಯಲಾಗಿದ್ದು ಮೇಲ್ಭಾಗದಲ್ಲಿ ಪಾರ್ಶ್ವನಾಥ, ನಂದಿ, ಮಹಿಳೆ, ಹಂಸಗಳ ಉಬ್ಬು ಶಿಲ್ಪಗಳು ನಂತರದ ಕೆಳಬಾಗದಲ್ಲಿ ಶಾಸನದ ಲಿಪಿಯನ್ನು ಕಂಡರಿಸಲಾಗಿದೆ.

### ಅಡಿಟಿಪ್ಪಣಿಗಳು

೧. ಕನ್ನಡ ಕಸ್ತೂರಿ ಕೋಶ, ಪುಟ-೫೧೦

೨. ರಹಮತ್ ತರೀಕೆರೆ, ಕರ್ನಾಟಕ ಕನ್ನಡ, ಪುಟ-೧೦೪

೩. ವೆಂಕಟೇಶ ಜೋಯಿಸ್ ಕೆ. ಜಿ., ವಿಜಯನಗರ ಚರಿತ್ರೆಯಲ್ಲಿ ಕೆಳದಿಯ ಅರಸರು, ಪುಟ-೧೦೯

೪. ಅದೇ, ಪುಟ-೭೮

೫. ಕಲ್ಬುರ್ಗಿ ಎಂ ಎಂ., ೧೯೯೮, ಮಾರ್ಗ, ಸಂ-೩, ಪುಟ-೧೪

೬. ಸತೀಶ ಕೆ., ೨೦೦೪, ವಿಜಯನಗರ ಕಾಲದ ಶೈವ ದೇವಾಲಯಗಳು, ಪುಟ ೫೧

೭. Sir John Marshal, Mahenjodaro and Indus Civilization, P.52

೮. ಎ.ಕ. ಸಂ. XI, ಸಂಖ್ಯೆ ೩೪, ಹಿರಿಯೂರು, ಪುಟ-೨೯೯

೯. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಂಸ್ಕೃತಿ ಅಧ್ಯಯನ,
ರಾಮಚಂದ್ರ ರಾವ್‌ರವರ ಎಸ್ ಕೆ., ಮೂರ್ತಿಶಿಲ್ಪ ನೆಲೆ, ಹಿನ್ನೆಲೆ,

೧೦. Radharakrishna, Indian Philosophy, P.482

೧೧. ಚಿದಾನಂದ ಮೂರ್ತಿ., ಪೂರ್ವೋಕ್ತ, ಪುಟ-೧೪೬

೧೨. ಅಪ್ಪಣ್ಣ ಎನ್ ಅಂಜೆ., ಶಿಗ್ಗಾಂವ್ ಪ್ರದೇಶದ ಪುರಾತತ್ವ, ಪುಟ-೨೭೪

೧೩. ಅಪ್ಪಣ್ಣ ಎನ್ ಅಂಜೆ, ಪೂರ್ವೋಕ್ತ, ಪುಟ-೨೮೩

೧೪. ಎ. ಕ. ಸಂ. XI, ಸಂಖ್ಯೆ ೨೧, ಹಿರಿಯೂರು, ಪುಟ-೨೯೫

೧೫. ಅದೇ, ಸಂಖ್ಯೆ ೨೩, ಹಿರಿಯೂರು, ಪುಟ-೨೯೬

೧೬. ಅದೇ, ಸಂಖ್ಯೆ ೨೬, ಹಿರಿಯೂರು, ಪುಟ-೨೯೭

೧೭. ಅದೇ, ಸಂಖ್ಯೆ ೨೭, ಹಿರಿಯೂರು, ಪುಟ-೨೯೭

೧೮. ಅದೇ, ಸಂಖ್ಯೆ ೩೭, ಹಿರಿಯೂರು, ಪುಟ-೩೦೧

೧೯. ಚಿದಾನಂದ ಮೂರ್ತಿ ಎಂ., ಪೂರ್ವೋಕ್ತ, ಪುಟ-೭೩

೨೦. Yocobi, Encuclopadia of Religion and Ethics,.P.No.೪೩೨

೨೧. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ-೩೮೬

## ೪.೩.ಆರ್ಥಿಕ ಸ್ಥಿತಿಗತಿ

ಮಾನವ ಜೀವನದಲ್ಲಿ ಆರ್ಥಿಕ ವ್ಯವಸ್ಥೆ ಪ್ರಮುಖವಾದ ಪಾತ್ರವಹಿಸುವ ಸಾಧನವಾಗಿದೆ. ತನ್ನ ಸುತ್ತಮುತ್ತಲಿನ ಆರ್ಥಿಕತೆಯನ್ನು ಅವಲಂಬಿಸಿ ಈತನ ಜೀವನ ವ್ಯವಸ್ಥಿತಗೊಂಡಿರುತ್ತದೆ. ಪ್ರಕೃತಿದತ್ತವಾದ ಮಣ್ಣು, ನೀರು ಖನಿಜ, ಅರಣ್ಯ ಮುಂತಾದವುಗಳನ್ನು ನೈಸರ್ಗಿಕ ಸಂಪನ್ಮೂಲ ಎನ್ನುವರು. ಒಂದು ಪರಿಸರದಲ್ಲಿನ ನೈಸರ್ಗಿಕ ಸಂಪನ್ಮೂಲಗಳು ಹಾಗೂ ಅವುಗಳನ್ನು ಬಳಸಿ ಕೊಳ್ಳುವಂತಹ ಜನರ ಪರಿಶ್ರಮದಿಂದ ನಾಡಿನ ಆರ್ಥಿಕ ವ್ಯವಸ್ಥೆಯನ್ನ ಪ್ರತಿಬಿಂಬಿಸುತ್ತದೆ. ಈ ಸುತ್ತಮುತ್ತಲಿನ ಪ್ರದೇಶದಲ್ಲಿ ಆಡಳಿತ ನಡೆಸಿದಂತಹ ಹಲವಾರು ರಾಜ ಮನೆತನಗಳಿಗೆ ಸಂಭಂದಿಸಿದಂತಹ ಶಾಸನಗಳು ಅಂದಿನ ಆರ್ಥಿಕ ವ್ಯವಸ್ಥೆಯನ್ನ ತಿಳಿಯಲು ನಮಗೆ ಸಹಕಾರಿಯಾಗಿರುತ್ತದೆ.

### ಭೂಸಂಪತ್ತು

ಭೂಮಿಯನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ವಿಭಾಗಿಸಿಕೊಳ್ಳಲಾಗಿತ್ತು ಎಂದರೆ ಕೃಷಿಗೆ ಯೋಗ್ಯವಾದ ಭೂಮಿ  ಬೀಳು ಭೂಮಿ,  ಮತ್ತು ಖನಿಜ ಸಂಪತ್ತಿನಿಂದ ಕೂಡಿದಂತಹ ಭೂಮಿ, ಈ ರೀತಿಯಾಗಿ ವಿಭಾಗ ಮಾಡಲಾಗಿದ್ದು ಬೀಳು ಭೂಮಿ ಎಂದರೆ ಕೃಷಿಗೆ ಯೋಗ್ಯವಲ್ಲದ ಸವಳು ಮಿಶ್ರಿತ ಭೂಮಿ, ಬೀಳು ಭೂಮಿಯನ್ನು ಪಶುಪಾಲನೆಗೆ ಹುಲ್ಲುಗಾವಲು, ಗೋಮಾಳ ಎಂದಾಗಿ ಉಪಯೋಗಿಸುತ್ತಿರುವಂತೆ ಕಾಣಲಾಗಿದೆ. ಈ ಪರಿಸರದಲ್ಲಿ ದೊರಕಿರುವ ಶಾಸನಗಳಲ್ಲಿ ಭೂದಾನವೇ ಹೆಚ್ಚಾಗಿರುವುದನ್ನು ಕಾಣಬಹುದು. ಆದರೆ ಈ ಪ್ರಾಂತ್ಯಗಳ ನಾಯಕರು ವಿಜಯನಗರದ ಅರಸರ ಒಪ್ಪಿಗೆಯನ್ನು ಪಡೆದು ಕಾಡುಗಳನ್ನು ಕಡಿದು ಊರುಗಳನ್ನು ನಿರ್ಮಿಸಿರುವದನ್ನು ಕಾಣಬಹುದು. ಉದಾಹರಣೆಗೆ ಹರ್ತಿಕೋಟೆ, ಶಿಡ್ಲಯ್ಯನಕೋಟೆ, ಅಂಬಲಗೆರೆ, ವದ್ದಿಕೆರೆ, ಬೇತೂರು, ಗ್ರಾಮಗಳನ್ನು ತಿಪ್ಪಣ್ಣನಾಯಕ ಎನ್ನುವ ಆಡಳಿತಾಧಿಕಾರಿ ಪೂರ್ವಿಕರ ನೆನಪಿಗಾಗಿ ನಿರ್ಮಿಸಿರುವನು.

ಭೂಮಿಯ ಹಿಡುವಳಿಗಳಲ್ಲಿ ಎರಡು ವಿಭಾಗ ಮಾಡಬಹುದು.ಅವು"ಉಪಕಾರಿ" ಮತ್ತು "ಸೇವೆಗಾಗಿ", ಉಪಕಾರಿ ಹಿಡುವಳಿಯಲ್ಲಿ ಬ್ರಹ್ಮದಯಾ, ದೇವದೆಯಾ, ಮತ್ತು ಮಹಾಪುರುಷರೆಂಬ ಮೂರು ರೀತಿಗಳಿದ್ದವು. ಬ್ರಾಹ್ಮಣರಿಗೆ ಅಥವಾ ಬ್ರಾಹ್ಮಣ ಸಮುದಾಯಕ್ಕೆ ದಾನ ಕೊಟ್ಟಂತಹ ಬೋದಾನಕ್ಕೆ ಬ್ರಹ್ಮದಯಾ ಎಂದು ಕರೆಯುತ್ತಾರೆ. ಸರ್ವಸೇವೆಗಾಗಿ ಕೊಡುವ ಭೂದಾನಕ್ಕೆ ದೇವದಯಾ ಎಂತಲೂ, ಮಠಪುರವೆಂದರೆ ಮಠಗಳು ಧಾರ್ಮಿಕ ಪರಂಪರೆಯನ್ನ ಕಾಪಾಡಿಕೊಂಡು ಬರುವುದಕ್ಕಾಗಿ ನೀಡುತ್ತಿದ್ದ ಭೂಧಾನವಾಗಿದೆ.[೧]

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿಯೂ ಸಹ ಧಾರ್ಮಿಕ ಚಟುವಟಿಕೆಗಳಿಂದಾಗಿ ಭೂಮಿಯನ್ನು ಧಾನವಾಗಿ ಕೊಟ್ಟಂತಹ ವಿಚಾರವನ್ನು ಲಭ್ಯವಿರುವಂತಹ ಶಾಸನಗಳಿಂದ

ತಿಳಿಯಬಹುದು. ಧರ್ಮಪುರ ಶ್ಯಾನಬೋಗ ಸುಬ್ಬರಾಯಪ್ಪನವರ ಗದ್ದೆಯಲ್ಲಿನ ಶಾಸನದಿಂದ ಕ್ರಿ.ಶ. ೧೪೬೬ ರಲ್ಲಿ ವಿಜಯನಗರದ ರಾಮರಾಜಯ್ಯ ವಿಠಲೇಶ್ವರದೇವ ಮಹಾ ಅರಸುಗಳು ಇಲ್ಲಿಯ ನಾಯಿಂದರಿಗೆ ದಾನ ಕೊಟ್ಟ ವಿಚಾರ ತಿಳಿಯಬಹುದಾಗಿದೆ.[೨] ಹಾಗೆಯೇ ವೇಣುಕಲ್ಲುಗುಡ್ಡದ ಶಾಸನದಿಂದ ಕ್ರಿ.ಶ. ೧೪೭೦ರಲ್ಲಿ ಕೀಲಕ ಸಂವತ್ಸರದಲ್ಲಿ ಮಹಾಮಂಡಲೇಶ್ವರನಾದ ಕೊಂಡ ರಾಯದೇವ ಮಹಾಅರಸನು ಗುಡ್ಡದ ಗಿರಯಗೋಡೆಗೆ ಕೊಟ್ಟ ಕಟ್ಟು ಕೊಡಗಿನಮಾನ್ಯ ಗುಡ್ಡದ ಸೀಮೆಯ ಕೆರೆ ಶಿಥಿಲವಾಗಿದ್ದು ಅದನ್ನು ಕಟ್ಟಲು ಗದ್ದೆ ಕೊಟ್ಟ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[೩]

### ಭೂಮಿಯ ಪ್ರಕಾರಗಳು

ಭೂಮಿಯನ್ನು ಎರಡು ಪ್ರಕಾರವಾಗಿ ವಿಭಾಗಿಸಿರುವುದನ್ನು ಕಾಣಬಹುದು. ದೇವಮಾತೃಕೆ, ಮತ್ತು ನದಿ ಮಾತೃಕೆ, ದೇವಮಾತೃಕೆ ಎಂದರೆ ಮಳೆಯನ್ನು ಅವಲಂಬಿಸಿ ಸಾಗುವಳಿ ಮಾಡುವಂತಹ ಭೂಮಿ, ನದಿ ಮಾತೃಕೆ ಎಂದರೆ ಕೆರೆ ಬಾವಿಗಳನ್ನು ಅವಲಂಬಿಸಿ ಸಾಗುವಳಿ ಮಾಡುವ ಭೂಮಿ ಅಂದರೆ ನೀರಾವರಿ. ಬುಕಾನ್ನನು ಪ್ರಸ್ತುತ ಪ್ರದೇಶಗಳ ಮಣ್ಣಿನ ಲಕ್ಷಣಗಳನ್ನು ವರ್ಣಿಸುತ್ತಾ ಚಿತ್ರದುರ್ಗ ಸುತ್ತಮುತ್ತಲಿನ ಪ್ರದೇಶದಲ್ಲಿ ಹೆಚ್ಚಾಗಿ ಸಾಗುವಳಿಯಾಗದಂತಹ ಕಪ್ಪು ಮಣ್ಣಿನ ಭೂಮಿಯಿದೆ ಎಂದು ಹೇಳಿದ್ದಾನೆ.

ಧರ್ಮಪುರದ ಸುತ್ತಮುತ್ತಲಿನ ಪ್ರದೇಶದಲ್ಲಿ ಕಪ್ಪು, ಕೆಂಪು, ಮರಳು ಮಿಶ್ರಿತ ಮಣ್ಣನ್ನು ಕಾಣಲಾಗಿದ್ದು ಈ ಪ್ರದೇಶದಲ್ಲಿ ಅಡಿಕೆ, ತೆಂಗು, ಶೇಂಗಾ, ಭತ್ತ, ದಾಳಿಂಬೆ, ಹಲವಾರು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಅನುಕೂಲಕದೆ ಎಂದು ಹೇಳಲಾಗಿದೆ.

### ಭೂಮಾಪನ

ಭೂಮಿಯನ್ನು ಅಳತೆ ಮಾಡಲು ಶಾಸನಗಳಲ್ಲಿ ಮಾಹಿತಿಗಳು ಲಭ್ಯವಿರುತ್ತವೆ. ಶಾಸನಗಳಲ್ಲಿ ಉಲ್ಲೇಖವಿರುವಂತೆ ಖಂಡುಗಭೂಮಿ, ಬಳ್ಳಿಭೂಮಿ, ಎಂದು ಉಲ್ಲೇಖಿಸಲಾಗಿದೆ. ಹೊಲಗಳನ್ನು ಅಳೆಯುವಾಗ ಬೀಜಾವರಿ ಪದ್ಧತಿಯನ್ನು ಅನುಸರಿಸುತ್ತಿದ್ದರು. "ಬೀಜಾವರಿ ಹತ್ತು ಕೊಳಗ" ಎಂಬ ಪದವನ್ನು ಶಾಸನಗಳಲ್ಲಿ ಕಾಣಬಹುದು. ಅಳತೆಗೋಲಿನ ಸಹಾಯದಿಂದ ಹೊಲಗಳನ್ನು "ಮತ್ತರು" ಮತ್ತು "ಕಮ್ಮ"ಗಳೆಂಬುದಾಗಿಯೂ ಅಳೆಯುತ್ತಿದ್ದರು. ಪ್ರಸ್ತುತ ಪರಿಸರದ ಚಿಕ್ಕಮದುರೆಯ ಶಾಸನದಲ್ಲಿ ರಾಣಿಯಾದ ಗಾವಣಬ್ಬೆಯು ಶಿವಾಲಯವನ್ನು ಕಟ್ಟಿಸಿ ಅದಕ್ಕೆ ೧೪ ಮತ್ತರು ಭೂಮಿಯನ್ನು ದಾನವಾಗಿ ನೀಡಿದ್ದರ ಉಲ್ಲೇಖವಿದೆ.[೪]

ಪ್ರಸ್ತುತ ಪ್ರದೇಶದಲ್ಲಿ ಸೂಗೂರು ಗ್ರಾಮದಲ್ಲಿ ಪಟೇಲ ರುದ್ರೇಗೌಡನ ಬಳಿ ಇದ್ದ ತಾಮ್ರ ಶಾಸನದಿಂದ ಕ್ರಿ.ಶ. ೧೨೩೫ರಲ್ಲಿ ತಿಪ್ಪಳನಾಯಕಾಚಾರ್ಯ ಸೂಗೂರು ದೊಡ್ಡದ್ಯಾಮನ

ಗೌಡಗೆ ಸದರಿ ಸ್ಥಳದ ಗೌಡಿಕೆಯನ್ನು ಇನ್ನೂರು ವರಹಕ್ಕೆ ಮಾರಿ ಪತ್ತು ಮಾಡಿಧ ಈರನ ಭೂವಿಗೆ ಕಡಗ, ಸರಪಣಿ, ಒಂದು ಹಚ್ಚಡ, ಒಂದು ಜೊತೆ ಪಾಗು, ಒಂದು ಜಟದೊಗಲೆ ಇನಾಮು ಕೊಟ್ಟರೆಂದು ಈ ಸಮಯದಲ್ಲಿ ಊರ ತಳವಾರ, ಶಾನಭೋಗ ದೊಡ್ಡ ಸಂಗಪ್ಪ, ಬೇಗಾರ ದೊಡ್ಡ ಓಬಯ್ಯ ಮೊದಲಾದವರು ಇದ್ದರೆಂದು ತಿಳಿಯುತ್ತದೆ.[೫]

**ಕೃಷಿ**

ಈ ಪರಿಸರವು ಬಯಲು ಸೀಮೆಯಾಗಿದ್ದು ಇಲ್ಲಿ ಮಳೆಯ ಆಶ್ರಿತ ವ್ಯವಸಾಯ ಹೆಚ್ಚು ಪ್ರಚಲಿತದಲಿದ್ದು ಸುತ್ತಮುತ್ತಲಿನ ಪರಿಸರದಲ್ಲಿ ಹೆಚ್ಚಾಗಿ ರಾಗಿ, ಶೇಂಗಾ, ಜೋಳ, ಬೆಳೆಯುತ್ತಾರೆ. ನೀರಾವರಿ ಸೌಲಭ್ಯವಿದ್ದ ಕಡೆ ಭತ್ತ, ಹತ್ತಿ, ಗೋಧಿ, ಕಬ್ಬು ಬೆಳೆಯುತ್ತಾರೆ. ದ್ವಿದಳ ಧಾನ್ಯಗಳಾದ ತೊಗರಿ, ಹೆಸರು, ಕಡಲೆ, ಕುಸುಬಿ, ಹಲಸಂದಿ ಮುಂತಾದವುಗಳನ್ನು ಬೆಳೆಯುತ್ತಾರೆ.

ಇವುಗಳ ಜೊತೆಗೆ ಬಾವಿ, ಪಂಪ್‌ಸೆಟ್‌ಗಳ ಆಶ್ರಿತ ಜಮೀನುಗಳಲ್ಲಿ ತೆಂಗು, ಬಾಳೆ, ಅಡಿಕೆ, ಪಪ್ಪಾಯ, ದಾಳಿಂಬೆ, ವೀಳ್ಯದೆಲೆ, ನುಗ್ಗೆಕಾಯಿ ಮುಂತಾದ ತೊಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿದ್ದರು. ಜೊತೆಗೆ ಮೆಣಸಿನಕಾಯಿ ಬದನೆ, ಬೆಂಡೆ, ಸಿಹಿಗುಂಬಳ, ಹುರುಳಿ, ಅವರೆ, ಕೋಸು ಮುಂತಾದ ತರಕಾರಿ ಬೆಳೆಗಳನ್ನು ಸಹ ಬೆಳೆಯುತ್ತಿದ್ದರು.

**ನೀರಾವರಿ**

ಧರ್ಮಪುರ ಪರಿಸರದ ಸುತ್ತಮುತ್ತಲಿನಲ್ಲಿ ಬಯಲು ಸೀಮೆಯಾಗಿದ್ದು ಸುಮಾರು ೧೫ಕಿ,ಮೀ ದೂರದಲ್ಲಿ ವೇದಾವತಿ ನದಿಯು ಹರಿದು ಹೋಗುತ್ತದೆ, ಇದರ ಒಂದು ಉಪಯೋಗ ಪ್ರಸ್ತುತ ಪ್ರದೇಶದ ಕೆಲವು ಕಡೆ ಮಾತ್ರ ಅನುಕೂಲತೆಯನ್ನು ಪಡೆದು ಕೊಂಡಿದ್ದು ಈ ವೇದಾವತಿ ನದಿಯ ತಂಪನ್ನು ಮಾತ್ರ ಪಡೆದಿದೆ ಎಂದು ಹೇಳಲಾಗಿದೆ. ಸುತ್ತಮುತ್ತಲಿನ ಪರಿಸರದಲ್ಲಿ ಕೆರೆ ಕಾಲುವೆಗಳು, ಪಂಪ್‌ಸೆಟ್‌ಗಳು ಮಳೆಗಾಲದಲ್ಲಿ ತುಂಬಿ ಕೃಷಿ ಚಟುವಟಿಕೆಗೆ ಪ್ರಮುಖ ತಾಣಗಳಾಗಿವೆ. ಈ ಪರಿಸರದಲ್ಲಿ ಕೆರೆಯನ್ನು ನಿರ್ಮಿಸಿದ್ದುದರ ಬಗ್ಗೆ ಶಾಸನಗಳಲ್ಲಿ ಉಲ್ಲೇಖ ಕಂಡುಬಂದಿದ್ದು ಶಿಡ್ಲಯ್ಯನಕೋಟೆ ಗ್ರಾಮದ ಓಲೆಕಾರ ಸಿದ್ದನ ಹೊಲದ ಶಾಸನದಿಂದ ಕ್ರಿ.ಶ. ೧೮೯೬ ರಲ್ಲಿ ಶಿಡ್ಲಯ್ಯನಕೋಟೆ ಪಶ್ಚಿಮಭಾಗದಲ್ಲಿ ಗೌಡ ಶಾನಬೋಗರು ಕೆರೆ ಕಟ್ಟಿಸಿದ ಬಗ್ಗೆ ತಿಳಿದುಬರುತ್ತದೆ, ಹೀಗೆ ಹಿರಿಯೂರಿನ ೨೫ ನೇ ಶಾಸನದಿಂದ ಕ್ರಿ.ಶ. ೧೫೭೩ ರಲ್ಲಿ ಶಿಡ್ಲಯ್ಯನಕೋಟೆ ಹರತಿ ಸ್ಥಳಕ್ಕೆ ಸೇರಿತ್ತೆಂದು ತಿಳಿಯುತ್ತದೆ.[೬]

ಈ ಪರಿಸರದಲ್ಲಿ ಕಾಣುವ ಪ್ರಮುಖವಾದ ಕೆರೆಗಳೆಂದರೆ ದೊಡ್ಡದಾದ ಕೆರೆ ಎಂದೇ ಗುರುತಿಸಲ್ಪಡುವ ಧರ್ಮಪುರ ಕೆರೆ ಖಂಡೇನಹಳ್ಳಿ ಕೆರೆ, ಶ್ರವಣಗೆರೆಕೆರೆ, ಹೊಸಕೆರೆ, ಬೇತೂರು

ಕೆರೆ, ರಾಣಿಕೆರೆ, ಹರತಿಕೋಟೆ ಕೆರೆ ಇತ್ಯಾದಿ ಇವುಗಳು ಸಾವಿರಾರು ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸಿರುತ್ತವೆ. ಹಾಗೆಯೇ ಈ ಮೇಲೆ ಉಲ್ಲೇಖಿಸಿದ ಎಲ್ಲಾ ಕೆರೆಗಳೂ ಸಹ ಮಳೆ ಆಶ್ರಿತವಾಗಿದ್ದು ಮಳೆಗಾಲದಲ್ಲಿ ತುಂಬಿ ಬೇಸಿಗೆ ಕಾಲದಲ್ಲಿ ಅಲ್ಪ ಸ್ವಲ್ಪ ಬತ್ತಿರುತ್ತವೆ. ಹೀಗಾಗಿ ಈ ಪ್ರಸ್ತುತ ಪರಿಸರದಲ್ಲಿ ವರ್ಷಪೂರ್ತಿಯಾಗಿ ನೀರೊದಗಿಸುವ ಯಾವ ಮೂಲವೂ ಇಲ್ಲದಿರುವುದನ್ನು ಗಮನಿಸಬಹುದಾಗಿದೆ. ಸಕ್ರ ಗ್ರಾಮದ ಕೆರೆ ಏರಿಯ ಮೇಲಿನ ಒಂದು ಶಾಸನದಿಂದ ಕ್ರಿ.ಶ. ೮೯೦ರಲ್ಲಿ ನೊಳಂಬ ಪಲ್ಲವ ರಾಜ ಮಹೇಂದ್ರನ ಆಳ್ವಿಕೆಯಲ್ಲಿ ಚಿತ್ತಪ್ಪನ ಕೆರೆಯ ನಿರ್ಮಾಣವಾದುದನ್ನು ತಿಳಿಸುತ್ತದೆ.[೭]

## ಅಳತೆ ಮತ್ತು ತೂಕಗಳು

ನಾವು ಯಾವುದೇ ಒಂದು ವಸ್ತುವನ್ನು ತೆಗೆದುಕೊಳ್ಳುವಾಗ ಅಥವಾ ಕೊಡುವಾಗ ನಿಗದಿಸಪಡಿಸಿದ ಪ್ರಮಾಣವೂಂದಿರುತ್ತದೆ. ಪ್ರಸ್ತುತ ಪ್ರದೇಶದಲ್ಲಿ ಪ್ರಾಚೀನ ಕಾಲದಲ್ಲಿ ಬಳಸುತ್ತಿರುವ ಅಳತೆಮಾಪನಗಳನ್ನು ಕಾಣಬಹುದು, ಖಂಡುಗ, ಸೊಟಿಗ, ಕೊಳಗ, ಮಣ, ಮಾನ, ಪಳಿಗೆ, ಎಕರೆ, ಪಂಚಕ, ಕಿಲಾ, ಕ್ವಿಂಟಾಲ್, ಮೊದಲದ ಅಳತೆಗಳಿದ್ದವು. ಕೊಳಗದಲ್ಲಿ ಧರ್ಮಕೊಳಗ, ದೇವರಕೊಳಗ, ಇದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ.

ಸಾಮಾನ್ಯವಾಗಿ ಈ ಪರಿಸರದಲ್ಲಿ ಪಾಳೆಗಾರರ ಆಡಳಿತಾತ್ಮಕವ್ಯವಸ್ಥೆ ಹೆಚ್ಚಾಗಿದ್ದು ಹತ್ತಿ, ಶುಂಟಿ, ಅರಿಶಿಣ, ಮೆಣಸು, ಸಕ್ಕರೆ, ಮೆಣಸಿನಕಾಯಿ, ಬೆಲ್ಲ, ಹುಣಸೆಹಣ್ಣು, ಮೊದಲಾದವುಗಳನ್ನು ಮಣದ ಅಳತೆಯಲ್ಲಿ ವ್ಯಾಪಾರವಾಗುತ್ತಿದ್ದವು, ಎಣ್ಣೆ ತುಪ್ಪಗಳಂತಹ ದ್ರವ್ಯಪದಾರ್ಥಗಳನ್ನು ಅಳೆಯಲು ಸೊಲ್ಲುಗೆಯನ್ನು ಉಪಯೋಗಿಸುತ್ತಿದ್ದರು ಬೆಲ್ಲದ ಹಚ್ಚು, ಅಡಿಕೆ, ಎಲೆ, ತೆಂಗಿನಕಾಯಿ, ಹಣ್ಣುಗಳನ್ನು ಎಣಿಕೆ ಮಾಡುತ್ತಿದ್ದರು.[೮]

## ಕಂದಾಯ ವ್ಯವಸ್ಥೆ

ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಕಂದಾಯವನ್ನು ಧಾನ್ಯ, ಮತ್ತು ದ್ರವ್ಯರೂಪದಲ್ಲಿ ವಸೂಲಿ ಮಾಡುವ ಪದ್ಧತಿಯನ್ನು ಕಾಣಲಾಗಿದೆ. ವಿವಿಧ ರೀತಿಯ ಕಸುಬುಗಳನ್ನು ಮಾಡುವವರ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದರು. ಹಲವಾರು ಪಂಗಡ ಕುಲ ಕಸುಬುದಾರರನ್ನು ಕಾಣಲಾಗಿದ್ದು ಉಪ್ಪಾರರ ಮೇಲೆ ಉಪ್ಪಿನ ತೆರಿಗೆಯನ್ನು, ನೇಕಾರರ ಮೇಲೆ ಮಗ್ಗದೆರೆ, ಗಾಣಿಗರ ಮೇಲೆ ಗಾಣದೆರಿಗೆ, ತೋಟದ ಸುಂಕ ಜೊತೆಗೆ ಮಾಗಳ ಸುಂಕ, ವ್ಯಾಪಾರದ ಮೇಲಿನ ಸುಂಕ ಮೊದಲಾದವುಗಳು ಆದಾಯದ ಮೂಲಗಳಾಗಿದ್ದವು ಭೂಕಂದಾಯ ವ್ಯವಸ್ಥೆ ರಾಜ್ಯದ ಮುಖ್ಯ ಆದಾಯವಾಗಿತ್ತು, ಭೂಕಂದಾಯವು ಪಾಳೆಯಗಾರರ ಕಾಲಾವಧಿಯಲ್ಲಿ ಭೂಮಿಯ ಹುಟ್ಟುವಳಿಯ ಮೂರನೇ ಒಂದು ಭಾಗವನ್ನು ಮೀರುತ್ತಿರಲಿಲ್ಲ. ಇವರು ರಸ್ತು ಎಂಬ

ಕಂದಾಯವನ್ನು ವಸೂಲಿ ಮಾಡುತ್ತಿದ್ದು ಜೊತೆಗೆ ಗಾವುಂಡ, ಸುಂಕ ಪರ್ಜುಂಕ, ವಡ್ಡಾರಾಹುಳದ ಪನ್ನಯದ ಸುಂಕ ಮೊದಲಾದ ತೆರಿಗೆಗಳನ್ನು ಸಂಗ್ರಹಿಸುತ್ತಿದ್ದರು ಎನ್ನಲಾಗಿದೆ.[೯] ಸಂಗ್ರಹಿಸಿದ ಆದಾಯವನ್ನು ರಾಜ್ಯದ ಅಧಿಕಾರವನ್ನು ನಿರ್ವಹಿಸುವ ಸಲುವಾಗಿ ಅಧಿಕಾರಿಗಳಿಗೆ, ಸೈನ್ಯಕ್ಕೆ, ಲೋಕೋಪಯೋಗಿ ಕಾರ್ಯಗಳಿಗೆ, ಸಾಮಾಜಿಕ ಕಾರ್ಯಗಳಿಗೆ, ವೆಚ್ಚವನ್ನು ಮಾಡುತ್ತಿದ್ದರು ಎಂದು ಹೇಳಲಾಗಿದೆ. ಪ್ರಸ್ತುತ ಪ್ರದೇಶದ ಪರಿಸರದಲ್ಲಿರುವ ಉಪ್ಪರಹಳ್ಳಿಯ ಪಾಟೇಲ ರಂಗಣ್ಣನ ಜಮೀನಿನಲ್ಲಿದ್ದ ಶಾಸನದಲ್ಲಿ ಕ್ರಿ.ಶ.೧೪೭೬ ರಲ್ಲಿ ಅಂಬಲಗೆರೆಯ ರಂಗನಾಥಸ್ವಾಮಿಗೆ ಪರಿಕರಹಳ್ಳಿಯನ್ನು ವೆಂಗಳಾಪುರವೆಂದು ಕರೆದು ಉಂಬಳಿ ಹಾಕಿದ ಉಲ್ಲೇಖವಿದೆ.[೧೦]

ಧರ್ಮಪುರದ ಸುತ್ತಮುತ್ತಲಿನಲ್ಲಿ ಹೆಚ್ಚಾಗಿ ಒಕ್ಕಲಿಗರು, ಉಪ್ಪಾರರು, ಗೊಲ್ಲರು, ಗಾಣಿಗರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರು, ಜೈನರು, ಹಲವಾರು ಪಂಗಡಗಳು ಇವೆ ಒಕ್ಕಲಿಗರದು ವ್ಯವಸಾಯ ಪ್ರಧಾನ ಕಸುಬಾಗಿದ್ದು, ಹಾಗೆಯೇ ಉಪ್ಪಾರರು ಉಪ್ಪಿನ ವ್ಯಾಪಾರ ಜೊತೆಗೆ ಅಡಿಕೆ ವ್ಯಾಪಾರ, ತೆಂಗಿನ ವ್ಯಾಪಾರ ಮಾಡುತ್ತಿದ್ದರು ಹಾಗೆಯೆ ಗೊಲ್ಲರು ಹೆಚ್ಚಾಗಿ ಕುರಿ, ಧನಗಳನ್ನು ಸಲಹುತ್ತಿದ್ದರು ನೇಕಾರರು ಹತ್ತಿಬಟ್ಟೆಯನ್ನು, ಜೇಡರು ರೇಷ್ಮೆ ನೂಲನ್ನ ತೆಗೆಯುತ್ತಿದ್ದರು, ಈ ಎಲ್ಲಾ ಪಂಗಡದವರು ಸಹ ಸುತ್ತಮುತ್ತಲಿನಲ್ಲಿ ರೇಷ್ಮೆ ಬೆಳೆಯನ್ನು ವಾಣಿಜ್ಯ ಬೆಳೆಯನ್ನಾಗಿ ಬೆಳೆದು ರೇಷ್ಮೆಯ ನೂಲನ್ನು ಸಹ ತೆಗೆಯುತ್ತಿದ್ದರು. ಒಣ ಕೊಬ್ಬರಿ ಮಾಡುವುದು, ಎಣ್ಣೆ ತೆಗೆಯುವುದು, ತಮಿಳರು ತೆಂಗಿನ ಗರಿಗಳಿಂದ ತಡಕೆ, ಚಾಪೆ, ತೆಂಗಿನ ಚಿಪ್ಪಿನಿಂದ ನಾರನ್ನು ತೆಗೆದು ಹಗ್ಗವನ್ನು ಮಾಡುವುದು, ಆಟಿಕೆ ವಸ್ತುಗಳನ್ನ ವಿವಿಧ ತರಹ ವಸ್ತುಗಳನ್ನು ಆಯಾ ಪಂಗಡದವರು ಉತ್ಪಾದನೆಯನ್ನು ಮಾಡುವ ಕಸುಬುದಾರರು ಈ ಪರಿಸರದಲ್ಲಿ ನೆಲೆಸಿದ್ದರು. ಕೆಲವು ಈ ಪ್ರದೇಶದಲ್ಲಿ ಬಳೆಗಾರರು, ಕುಂಬಾರರು ಗಡಿಗೆ ತಯಾರಿಕೆಯನ್ನು ಮಾಡುತ್ತಿದ್ದರು ಎಂದು ಹೇಳಲಾಗಿದೆ. ಪ್ರಸ್ತುತ ಪ್ರದೇಶದ ಪರಿಸರದಲ್ಲಿ ಶ್ರೇಷ್ಠವಾದ ಶಾಲುಗಳ ತಯಾರಿಕೆಗೆ ಪ್ರಸಿದ್ದಿ ಪಡೆದಿತ್ತು, ಅಷ್ಟೇ ನವಿರಾಗಿ ಬೆಚ್ಚಗೂ ಇರುತ್ತಿದ್ದುದರ ಉಲ್ಲೇಖವು ಶಾಸನದಲ್ಲಿ ಸಿಗುತ್ತದೆ.[೧೧] ಹಾಗೆಯೇ ಈ ಹಿಂದೆ ದೊಡ್ಡೇರಿ ಕಾಗದ ಎಂದು ಹಾಳೆಯ ಗಾತ್ರ ಅಂಗೀಕೃತವಾದ ಅಳತೆಯ ಮಾಪನವಾಗಿ 'ದೊಡ್ಡೇರಿ ಗಜ' ಎಂದು ಪ್ರಸಿದ್ದಿಯಾಗಿದೆ.[೧೨]

**ವಾಣಿಜ್ಯ ವ್ಯವಹಾರ**

ಧರ್ಮಪುರ ಪರಿಸರವು ಈ ಹಿಂದೆ ಹಲವು ಪ್ರಾಂತ್ಯಗಳೊಂದಿಗೆ ವ್ಯಾಪಾರ ವಾಣಿಜ್ಯ ವ್ಯವಹಾರವನ್ನು ಹೊಂದಿತ್ತೆಂದು ಹೇಳಬಹುದು. ಕ್ರಿ.ಶ. ೧-೨ನೇ ಶತಮಾನದಲ್ಲಿ ಚಿತ್ರದುರ್ಗ ಜಿಲ್ಲಾ ಪ್ರದೇಶವು ವಿದೇಶಿಯರೊಂದಿಗೆ ವಾಣಿಜ್ಯ ಸಂಬಂಧ ಹೊಂದಿದ್ದ ಬಗ್ಗೆ ಆಧಾರಗಳು

ನಮಗೆ ಚಂದ್ರವಳ್ಳಿ, ಬ್ರಹ್ಮಗಿರಿ, ಜಟಿಂಗಿರಾಮೇಶ್ವರ, ಪರಿಸರದಲ್ಲಿ ದೊರೆತಿವೆ. ಆ ಕಾಲದಲ್ಲಿ ಚಂದ್ರವಳ್ಳಿಯಲ್ಲಿ ಉತ್ಖನನ ಮಾಡಿದಂತಹ ಸಂದರ್ಭದಲ್ಲಿ ರೋಮ್ ನಾಣ್ಯಗಳು ದೊರೆತಿದ್ದು ರೋಮ್ ದೇಶದೊಡನೆ ವ್ಯಾಪಾರ ಸಂಬಂಧ ಇದ್ದಿತೆಂದು ಅಲ್ಲಿ ದೊರೆತಿರುವಂತಹ ನಾಣ್ಯಗಳು ನಮಗೆ ತಿಳಿಸಿವೆ. ಭೌಗೋಳಿಕವಾಗಿ ಈ ಪರಿಸರವೂ ಸಹ ಚಂದ್ರವಳ್ಳಿಯ ಜೊತೆಗೆ ಪರಸ್ಪರ ವ್ಯಾಪಾರ ಸಂಪರ್ಕವಿಟ್ಟುಕೊಂಡಿರುವಂತಹ ಸಾಧ್ಯತೆಗಳು ಉಂಟು. ಈ ದಿಶೆಯಲ್ಲಿ ಇನ್ನು ಹೆಚ್ಚಿನ ಹಾಗೂ ವ್ಯಾಪಕವಾದಂತಹ ಸಂಶೋಧನೆಗಳು ನಡೆಯಬೇಕಾಗಿದೆ ಹಾಗೆಯೇ ನಡೆಯುತ್ತಲೂ ಇವೆ.

ಪಾಳೆಯಗಾರರ ಕಾಲದಲ್ಲಿ ಈ ಪ್ರದೇಶದ ಪರಿಸರದ ಅಂತರದಲ್ಲಿ ಚಳ್ಳಕೆರೆ ತಾಲ್ಲೂಕಿನ ಜಾಜೂರು, ಕಾಮಸಮುದ್ರ ಗ್ರಾಮದಲ್ಲಿದ್ದ ಕುಂಚಿಗಾರ ಕಾಳ ಶೆಟ್ಟಿ ಎಂಬಾತನು ಕಬ್ಬಿಣ ಮತ್ತು ತಾಮ್ರ ಲೋಹಗಳನ್ನು ಬಂಗಾರ ಮಾಡುವ ವಿಧ್ಯೆಯನ್ನ ಕಲಿತಿದ್ದುದನ್ನ ಹಾಗೂ ತಾನು ತಯಾರಿಸಿದ ಬಂಗಾರದ ವರಾಹಗಳನ್ನು ಮಾಡಿಸಿಕೊಂಡು ಬರಲು ತನ್ನ ತಮ್ಮನನ್ನು ಚಿತ್ರದುರ್ಗ ಮತ್ತು ಹೊಸದುರ್ಗಗಳಿಗೆ ಕಳುಹಿಸುತ್ತಿದ್ದುದುನ್ನ ತಿಳಿದುಬರುತ್ತದೆ.[೧೩]

ಈ ಪರಿಸರದಲ್ಲಿ ಹಲವು ಪ್ರಮುಖ ರಾಜ ಮನೆತನಗಳು ಆಳ್ವಿಕೆಯನ್ನು ಮಾಡಲು ಪರಸ್ಪರ ಯುದ್ಧಗಳು ನಡೆದಿವೆ ಎನ್ನಲಾಗಿದೆ. ಕೆಲವು ಸಾಮಂತರುಗಳು ಎಂದರೆ ಹರತಿ ಪಾಳೆಯಗಾರರು, ನಿಡುಗಲ್ಲು ಪಾಳೆಯಗಾರರು, ಚಿತ್ರದುರ್ಗ ಪಾಳೆಯಗಾರರು ಹರಪನಹಳ್ಳಿ ಪಾಳೆಯಗಾರರು, ಗುಡೇಗೋಟೆ ಪಾಳೆಯಗಾರರು, ಇತ್ಯಾದಿ ಸ್ವಾತಂತ್ರ್ಯವಾಗಿ ಪಾಳೆಯಪಟ್ಟನ್ನು ಕಟ್ಟಿಕೊಂಡು ಆಡಳಿತ ನಡೆಸಿದರು, ಆದುದರಿಂದ ಇಲ್ಲಿ ಧಾರ್ಮಿಕ, ಸಂಘರ್ಷಗಳು ನಡೆದಿರಬಹುದೆಂದು ಹಲವು ಧರ್ಮಗಳು ಸಹ ಪ್ರಭಾವವನ್ನು ಬೀರಿರುವುದನ್ನು ಇಲ್ಲಿ ಕಾಣಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಶ್ಯಾಮಲಾ ಸಿ. ಆರ್., ಪೂರ್ವಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಪುಟ-೧೭೮

೨. ಎ. ಕ. ಸಂ. XI, ಸಂಖ್ಯೆ ೩೪, ಚಳ್ಳಕೆರೆ

೩. ಎ. ಕ. ಸಂ. XI, ಸಂಖ್ಯೆ ಸಂಖ್ಯೆ ೩೫, ಹಿರಿಯೂರು, ಪುಟ- ೩೦೦

೪. ಎ. ಕ. ಸಂ. XI, ಸಂಖ್ಯೆ ಸಂಖ್ಯೆ ೨೯, ಹಿರಿಯೂರು, ಪುಟ-೨೯೮

೫. ಎ. ಕ. ಸಂ. XI, ಸಂಖ್ಯೆ ೩೯; ಹಿರಿಯೂರು, ಪುಟ-೩೦೩

೬. ಎ. ಕ. ಸಂ. XI, ಸಂಖ್ಯೆ ೨೫, ಹಿರಿಯೂರು, ಪುಟ-೨೯೭

೭. ಎ. ಕ. ಸಂ. XI, ಸಂಖ್ಯೆ ೩, ಹಿರಿಯೂರು, ಪುಟ-೨೯೯

೮. ಶ್ಯಾಮಲಾ ಸಿ.ಆರ್., ಪೂರ್ವೋಕ್ತ, ಪುಟ-೧೭೦

೯. ಎ. ಕ. ಸಂ. XI, ಸಂಖ್ಯೆ ೭೮, ಚಳ್ಳಕೆರೆ

೧೦. ಎ. ಕ. ಸಂ. XI, ಸಂಖ್ಯೆ ೨೨, ಹಿರಿಯೂರು, ಪುಟ-೨೯೫

೧೧. ಎ. ಕ. ಸಂ. XI, ಸಂಖ್ಯೆ ೮೭, ಹಿರಿಯೂರು

೧೨. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ-೧೬೪

೧೩. ವಸು ಎಂ ವಿ., ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪುಟ-೧೭೮

* * *

## ವಾಸ್ತು ಮತ್ತು ಮೂರ್ತಿಶಿಲ್ಪ ಕಲೆ

### ೫.೧ ದೇವಾಲಯ ವಾಸ್ತು

ವಾಸ್ತವಿಕವಾಗಿ ಕಲೆ ಎಂದರೆ ಮನುಷ್ಯನ ಭಾವನೆಗಳನ್ನು ಚಿತ್ರಗಳ ಮೂಲಕ ಶಿಲ್ಪಕಲೆಗಳ ರೂಪದಲ್ಲಿ ತೋರಿಸುವುದಾಗಿದೆ. ಮಾನವ ಜೀವನದ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಘಟನಾವಳಿಗಳು ವಿಶಿಷ್ಟ ರೂಪವೇ ಕಲೆ ಎಂದು ಹೇಳುಬಹುದು. ಕಲೆಯು ಆದಿ ಮಾನವನ ಕಾಲದಿಂದಲೂ ಬೆಳೆದು ಬಂದುದನ್ನು ನಾವು ಕಾಣುತ್ತೇವೆ. ಮನುಷ್ಯನಲ್ಲಿ ಕಾಣುವಂತಹ ಮುಖ್ಯಗುಣಗಳೆಂದರೆ, ತಾನು ತನ್ನ ಜೀವಿತಾವದಿಯಲ್ಲಿ ಕಂಡು ಅನುಭವಿಸದ ಸಿಹಿ-ಕಹಿ ಅನುಭವಗಳನ್ನು ಕಲೆಯ ರೂಪದಲ್ಲಿ ತೋರಿಸುವುದು. ತನ್ನ ಆತಂಕಗಳನ್ನು, ಅನಿಸಿಕೆಗಳನ್ನು, ಅಭಿಪ್ರಾಯಗಳನ್ನು ಕಲೆಯ ಮೂಲಕ ತಿಳಿಯಪಡಿಸುವುದು. ಈ ರೀತಿಯಲ್ಲಿ ಮಾನವನಲ್ಲಿ ಅಂತರ್ಗತವಾಗಿರುವ ಅಭಿವ್ಯಕ್ತಿಯೇ ಕಲೆಯಾಗುತ್ತದೆ. ಯಾವುದೇ ಒಂದು ಕೆಲಸವನ್ನು ನಿಯಮಬದ್ಧವಾಗಿ, ಕ್ರಮಬದ್ಧವಾಗಿ ಮಾಡುವುದೇ ಕಲೆ ಎನಿಸಿಕೊಳ್ಳುತ್ತದೆ.

ಗಟ್ಟಿಯಾದ ಒಂದು ವಸ್ತುವಿನಿಂದ ವಸ್ತುವಿನ ಮೇಲೆ ನಿರ್ಮಾಣಗೊಂಡ ವಾಸಯೋಗ್ಯ ರಚನೆಗಳು ವಾಸ್ತುರಚನೆ ಎನಿಸಿಕೊಳ್ಳುತ್ತವೆ. ಕಾಲಾನಂತರದಲ್ಲಿ ಇವುಗಳು ಮಾನವನ ಭೌದ್ಧಿಕ ವಿಕಾಸನದ ರೀತಿಯ ಪ್ರತ್ಯಕ್ಷ ಸಾಕ್ಷಿಗಳು ಎಂದು ಹೇಳಬಹುದು.[೧]

ಮಾನಸಾರ, ಕಶ್ಯಪ, ಮಯಮತ ವಿಶ್ವಕರ್ಮ, ವೈಖಾನಸ, ಇನ್ನು ಹಲವಾರು ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ದೇವಾಲಯಗಳ ನಿರ್ಮಾಣದ ಬಗ್ಗೆ ಅನೇಕ ವಿವರಗಳು ದೊರೆಯುತ್ತವೆ. ಈ ಎಲ್ಲಾ ಗ್ರಂಥಗಳೂ ಪೂರ್ಣ ಪ್ರಮಾಣದಲ್ಲಿ ದೊರೆಯದೆ ಇದ್ದುದರಿಂದ ದೇವಾಲಯಗಳ ಉಗಮದ ಬಗ್ಗೆ ಇನ್ನು ಹೆಚ್ಚಿನ ವಿವರಗಳು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ.[೨] ಮಾನಸಾರ ಗ್ರಂಥದಿಂದ ದೇವಾಲಯಗಳ ನಿರ್ಮಾಣದ ಬಗ್ಗೆ ಹಲವಾರು ಮಾಹಿತಿಗಳನ್ನು ತಿಳಿಯಬಹುದು. ಈ ಗ್ರಂಥ ಒಟ್ಟು ೫೮ ಅಧ್ಯಾಯಗಳನ್ನು ಒಳಗೊಂಡಿದ್ದು ಪ್ರತೀ ಅಧ್ಯಾಯದಲ್ಲೂ ದೇವಾಲಯಗಳ ನಿರ್ಮಾಣದ ಉದ್ದೇಶ, ಶಿಲ್ಪಿಗೆ ಇರಬೇಕಾದ ಅರ್ಹತೆಗಳು, ದೇವಾಲಯ ನಿರ್ಮಾಣಕ್ಕೆ ಯೋಗ್ಯವಾದ ಸ್ಥಳ, ದೇವಾಲಯಗಳನ್ನು ಗ್ರಾಮ, ನಗರಗಳ ಯಾವ ಭಾಗದಲ್ಲಿ, ಯಾವ ದಿಕ್ಕಿನಲ್ಲಿ, ಯಾವ ರೀತಿಯಲ್ಲಿ ಕಟ್ಟಬೇಕು, ತಳವಿನ್ಯಾಸ, ಅದಿಷ್ಠಾನ, ಶಿಖರ, ದೇವರುಗಳ

ವಿಗ್ರಹ ಪ್ರತಿಷ್ಠಾಪನೆ, ಪರಿವಾರ ದೇವರುಗಳ ಪ್ರತಿಷ್ಠಾಪನೆ ಇನ್ನು ಮುಂತಾದ ವಿವರಗಳನ್ನು ತಿಳಿಸುತ್ತದೆ.[೩]

ಕಟ್ಟಡವನ್ನು ನಿರ್ಮಾಣ ಮಾಡಲು ಪ್ರಾರಂಭಿಸುವಾಗ ವಾಸ್ತುಪುರುಷನನ್ನು ತೃಪ್ತಿಪಡಿಸಲು ಮಾಡಬೇಕಾದ ಸಂಸ್ಕಾರ, ವಿಧಿ ವಿಧಾನಗಳನ್ನು ತಿಳಿಸುತ್ತದೆ. ದೇವಾಲಯದ ಉಪಪೀಠ, ಅದಿಷ್ಠಾನ, ಭಿತ್ತಿ, ಪ್ರಸ್ತರ, ಕಟ್ಟಡದ ಮೇಲ್ಚಾವಣಿ, ದೇವಾಲಯದ ಶಿಖರ, ಪ್ರಾಕಾರ ಮಂಟಪಗಳು, ಬಲಿಪೀಠ ಇನ್ನು ಮುಂತಾದ ವಿವರಗಳನ್ನು ತಿಳಿಸುತ್ತದೆ.[೪] ಹೀಗೆ ಈ ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವ ಅಂಶಗಳ ಹಿನ್ನೆಲೆಯಲ್ಲಿ ಉಗಮ, ನಿರ್ಮಾಣ ಮತ್ತು ವಿಕಾಸವನ್ನು ನೋಡಬಹುದು.

ದೇವಾಲಯ ಎಂದರೆ ದೇವರಿಗಾಗಿ ನಿರ್ಮಾಣ ಮಾಡಿದ ಆಲಯವಾಗಿದೆ. ಮಾನವನು ಮನೆಗಳನ್ನು ನಿರ್ಮಿಸಿಕೊಂಡು ಹೇಗೆ ಜೀವನ ನಿರ್ವಹಿಸುವನೋ ಅದೇ ರೀತಿಯಲ್ಲಿ ದೇವರಿಗೂ ಸಹ ಒಂದು ಆಲಯವನ್ನು ನಿರ್ಮಿಸಬೇಕು ಎನ್ನುವ ಉದ್ದೇಶದಿಂದ ದೇವಾಲಯಗಳನ್ನು ನಿರ್ಮಿಸಲು ಪ್ರಾರಂಭಿಸಿರಬೇಕು. ಮಾನವ–ದೈವ, ಇಹ–ಪರ, ವಾಸ್ತವಿಕ–ಆದರ್ಶ ಇವುಗಳ ಮಿಲನದ ಸಂಕೇತವೇ ದೇವಾಲಯ,[೫] ಭೂಲೋಕ ಸಂರಕ್ಷಣೆಗಾಗಿ ಭಗವಂತನು ಭೂಮಿಯಲ್ಲಿ ವಾಸಮಾಡುವ ಸ್ಥಳವಾದ ದೇವಾಲಯವು ಜೀವಾತ್ಮ – ಪರಮಾತ್ಮನಲ್ಲಿ ಇರುವ ಅಂತರವನ್ನು ಕಡಿಮೆ ಮಾಡುತ್ತದೆ. ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಕನಾದ ದೇವನ ಬಳಿಗೆ ಹೋಗಲು ಸರಿಯಾದ ಮಾರ್ಗವನ್ನು ತೋರಿಸುವಂತೆ ಅವನನ್ನು ಪ್ರಾರ್ಥಿಸುವ ಸ್ಥಳವೇ ದೇವಾಲಯ ಆಗಿದೆ ಎಂದು ಹೇಳಬಹುದಾಗಿದೆ.[೬]

ಇಂದು ನಾವು ನೋಡುತ್ತಿರುವ ದೇವಾಲಯಗಳು, ಶಿಲ್ಪಗಳು, ಸ್ಮಾರಕ ಶಿಲ್ಪಗಳು ಹಾಗೂ ಇನ್ನಿತರ ವಾಸ್ತುಕೃತಿಗಳು ಇದ್ದಕ್ಕಿದ್ದಂತೆ ಬೆಳೆದು ಬಂದವುಗಳಲ್ಲ, ಅವುಗಳಿಗೆ ತನ್ನದೇ ಆದ ಇತಿಹಾಸವಿದೆ, ವಿಶಾಲವಾದ ಕಾಲಮಾನವಿದೆ. ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಉಗಮ ಮತ್ತು ಬೆಳವಣಿಗೆಯನ್ನು ಹಲವಾರು ಹಂತಗಳಲ್ಲಿ ಅಧ್ಯಯನ ಮಾಡಬಹುದಾಗಿದೆ. ಮುಖ್ಯವಾಗಿ ಇತಿಹಾಸಪೂರ್ವಕಾಲ, ಇತಿಹಾಸ ಕಾಲ, ಹರಪ್ಪ–ವೈದಿಕ ಸಂಸ್ಕೃತಿಗಳ ಕಾಲ, ಮೌರ್ಯಕಾಲ, ಗುಪ್ತರ ಕಾಲ, ಚಾಲುಕ್ಯ, ಪಲ್ಲವಕಾಲ, ಕಲ್ಯಾಣದ ಚಾಲುಕ್ಯ, ಹೊಯ್ಸಳ ಹಾಗೂ ವಿಜಯನಗರ, ವಿಜಯನಗರೋತ್ತರ ಕಾಲಮಾನಗಳಲ್ಲಿ ದೇವಾಲಯುಗಳ ನಿರ್ಮಾಣದಲ್ಲಿ ಆದ ಬದಲಾವಣೆಗಳನ್ನು ನೋಡಬಹುದು.

ಮಾನವನು ಮೂಲದಲ್ಲಿ ಪ್ರಾಣಿಯಾಗಿದ್ದು ತನ್ನ ನಡವಳಿಕೆಗಳಿಂದ ಇತರ ಪ್ರಾಣಿಗಳಿಗಿಂತಲೂ ಭಿನ್ನವಾಗಿ ಕಾಣುತ್ತಾನೆ. ಪ್ರಾಣಿಯಿಂದ ಬೇರ್ಪಟ್ಟ ಕಾಲದಲ್ಲಿ ಈತನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದ.

ಆಹಾರ ಅನ್ವೇಷಕನಾಗಿದ್ದು ಈತ ತನ್ನ ಬುದ್ಧಿ ಶಕ್ತಿ ಬೆಳೆದಂತೆ ಆಹಾರ ಸಂಗ್ರಾಹಕನಾಗಿ, ಸ್ಥಿರವಾದ ಜೀವನವನ್ನು ಕಂಡುಕೊಂಡನು. ಗುಹೆಗಳಲ್ಲಿ, ವಾಸಿಸುತ್ತಿದ್ದ ಈತನು ಬಿಡುವಿನ ಸಂದರ್ಭದಲ್ಲೆಲ್ಲಾ ತಾನು ನೋಡಿದ, ಪ್ರಾಣಿ-ಪಕ್ಷಿಗಳು ಗೀರು ಚಿತ್ರಗಳನ್ನು ಬಿಡಿಸಲು ಪ್ರಾರಂಭಿಸಿದ ಈ ರೀತಿಯಲ್ಲಿ ಗುಹಾ ವರ್ಣಚಿತ್ರಗಳು ಹಲವಾರು ಪ್ರದೇಶಗಳಲ್ಲಿ ಪ್ರಮುಖವಾಗಿ ಎಂದರೆ ಮಧ್ಯಪ್ರದೇಶದ ಮಹಾದಿಯೋ ಬೆಟ್ಟಸಾಲುಗಳಲ್ಲಿರುವ ಗುಹೆಗಳಲ್ಲಿ ಮಧ್ಯಪ್ರದೇಶದ ಕಬ್ರಪ್ರಹಾರ್, ಬಂದ ಜಿಲ್ಲೆಯ ಮಾಣಿಕಪುರ, ಕೊಹರಬಾದ್, ಮೆಹುರಿಯಾ, ಬಿಜಯ್ ಗಡ್ ಇನ್ನಿತರ ಕಡೆಗಳಲ್ಲಿ ನೋಡಬಹುದಾಗಿದೆ. ಈ ಗುಹಾ ವರ್ಣಚಿತ್ರಗಳೇ ಭಾರತೀಯ ವಾಸ್ತುಕೃತಿಗಳ ಮೂಲಗಳಾಗಿವೆ.[೬]

ಸುಮಾರು ಕ್ರಿ.ಪೂ. ೨೫೦೦-೧೭೦೦ರ ಕಾಲಾವಧಿಯಲ್ಲಿ ಹರಪ್ಪ, ಸಂಸ್ಕೃತಿಯ ಕಲಾವದಿಯಲ್ಲಿ ಜನರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚು ಆಸಕ್ತಿಯನ್ನು ತೋರಿಸಿದಂತೆ ಕಾಣುತ್ತದೆ.[೭] ಇವರ ಕಲೆ ಇತರ ಭಾರತೀಯರ ಕಲೆಗಿಂತ ಭಿನ್ನ. ಕಾರಣ ಈ ಸಂಸ್ಕೃತಿಯ ನಂತರ ಭಾರತೀಯ ಕಲೆ ಪ್ರಾರಂಭವಾಗಲು ಸುಮಾರು ಒಂದು ಸಾವಿರ ವರ್ಷಗಳ ಅಂತರವನ್ನು ಕಾಣುತ್ತೇವೆ. ಹರಪ್ಪ ಸಂಸ್ಕೃತಿಯಲ್ಲಿ ಕಾಣುವ ಹರಪ್ಪ, ಮೆಹಂಜೋದಾರ, ಕಾಲಿಬಂಗನ್, ಇನ್ನಿತರ ನಗರಗಳು ಕೋಟೆಯಿಂದ ಸುತ್ತುವರಿಯಲ್ಪಟ್ಟಿದ್ದವು. ಕೋಟೆಯ ರಚನೆ, ಮುಖ್ಯ ಪ್ರವೇಶದ್ವಾರ, ನಗರಗಳ ನಿರ್ಮಾಣ, ರಸ್ತೆ ಹಾಗೂ ಒಳಚರಂಡಿ ನಿರ್ಮಾಣ, ಸೇತುವೆಗಳು, ಕಟ್ಟಡಗಳು ಇನ್ನು ಮೊದಲಾದ ಅಂಶಗಳನ್ನು ಗಮನಿಸಿದರೆ ಅವರ ಕಲೆ ನಮಗೆ ಅರಿವಾಗುತ್ತದೆ. ಇಲ್ಲಿ ದೊರೆತಿರುವಂತಹ ಹಲವಾರು ಶಿಲ್ಪಗಳು, ಪ್ರಾಣಿಪಕ್ಷಿಗಳ ಆಟಿಕೆ ವಸ್ತುಗಳು ಮಡಿಕೆ ಕುಡಿಕೆಗಳು ಅವರ ಕಲಾಸಕ್ತಿಗೆ ಸಾಕ್ಷಿಗಳಾಗಿವೆ.

ದೇವಾಲಯಗಳು ಇತಿಹಾಸ ಪೂರ್ವಕಾಲದಿಂದ ಉಗಮಗೊಂಡು ಕಾಲಾನುಕ್ರಮವಾಗಿ ವಿಕಸನ ಹೊಂದುತ್ತಾ ಹಂತ ಹಂತವಾಗಿ ಬೆಳವಣಿಗೆ ಹೊಂದಿರುವುದನ್ನು ಕಾಣುತ್ತೇವೆ. ಇವುಗಳು ಯಾವುದೇ ಪ್ರದೇಶದ ಇತಿಹಾಸ ರಚನೆಯಲ್ಲಿ ಪ್ರಮುಖವಾದ ಪಾತ್ರವನ್ನ ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶವಾದ ಧರ್ಮಪುರ ಪರಿಸರದಲ್ಲಿ ಕಂಡುಬರುವ ದೇವಾಲಯಗಳು ಈ ಮುಂದೆ ವಿವರಿಸಲು ಪ್ರಯತ್ನಿಸಿದ್ದೇನೆ. ಹಾಗೆಯೇ ಕಳೆದುಹೋದಂತಹ ಗತವೈಭವವನ್ನು ಪುನಃ ಕಟ್ಟುವಂತಹ ಬಹುಮುಖ್ಯ ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ ನಂಬಿಕೆಗಳ ಪ್ರತೀಕವಾಗಿ ಬೆಳೆದುಬಂದಿವೆ. ದೇವಾಲಯಗಳ ಅಧ್ಯಯನದಿಂದ ಆಯಾ ಪ್ರದೇಶದ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಆಚಾರ ವಿಚಾರಗಳನ್ನು ಗುರುತಿಸುವುದು. ಹಾಗೂ ಅವುಗಳನ್ನು ವಿಶ್ಲೇಷಿಸುವುದು ಸಾಧ್ಯವಾಗಿರುತ್ತದೆ. ಹಾಗಾಗಿ ಈ ಧರ್ಮಪುರ ಪರಿಸರದಲ್ಲಿನ ದೇವಾಲಯಗಳು ಸಹ ವಾಸ್ತು ಮತ್ತು ರಚನೆ ಕುರಿತು ಚರ್ಚಿಸಲಾಗಿರುತ್ತದೆ.

ಹೆಸರು : ಶ್ರೀ ರಂಗನಾಥಸ್ವಾಮಿ ದೇವಾಲಯ

ಗ್ರಾಮ : ಅಂಬಲಗೆರೆ

ತಾಲ್ಲೂಕು : ಹಿರಿಯೂರು

ಕಾಲಮಾನ : ಸು. ಕ್ರಿ.ಶ. ೧೫-೧೬ನೇ ಶತಮಾನ

ಧರ್ಮಪುರ ಪರಿಸರದಲ್ಲಿ ಸುಮಾರು ೧೨ ಕಿ.ಮೀ. ಅಂತರದಲ್ಲಿ ಅಂಬಲಗೆರೆ ಗ್ರಾಮವಿದೆ. ಈ ಗ್ರಾಮದ ಮಧ್ಯಭಾಗದಲ್ಲಿ ಶ್ರೀ ರಂಗನಾಥಸ್ವಾಮಿ ದೇವಾಲಯವಿದ್ದು ಈ ದೇವಾಲಯ ಸುಮಾರು ೧೫-೧೬ನೇ ಶತಮಾನದಲ್ಲಿ ನಿರ್ಮಾಣ ಮಾಡಿದಂತಹ ದೇವಾಲಯವಾಗಿದೆ. ಇಲ್ಲಿಯ ಸ್ತಂಭಶಾಸನವು ಅಂಬಲಗೆರೆಯ ತಿರುವೆಂಗಳನಾಥನ ನಂದಾಧೀಪಕ್ಕಾಗಿ ಗ್ರಾಮದ ಸುಂಕವನ್ನು ನೀಡಿದ ಬಗ್ಗೆ ಉಲ್ಲೇಖಿಸುತ್ತದೆ. ಅಂಬಲಗೆರೆಗೆ ಸುಮಾರು ೧ ಕಿ.ಮಿ. ದೂರದಲ್ಲಿ ಉಪ್ಪಾರಹಳ್ಳಿ ಗ್ರಾಮವಿದ್ದು, ಈ ಗ್ರಾಮದಲ್ಲಿರುವ ಕ್ರಿಶ. ೧೫೫೪ರ ಶಾಸನವು ಸದಾಶಿವರಾಯನು ಆಳ್ವಿಕೆ ಮಾಡುತ್ತಿರುವ ಸಮಯದಲ್ಲಿ ಅಂಬಲಗೆರೆಯ ತಿರುವೆಂಗಳನಾಥ ದೇವರಿಗೆ ಗೋಸಿಕೆರೆ ನಾಡೊಳಗಿರುವ ಉಪಕರಿಹಳ್ಳಿಗೆ ವೆಂಗಳಾಪುರ ಎಂದು ಮರುನಾಮಕರಣ ಮಾಡಿ ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ.[1]

ದೇವಾಲಯವನ್ನು ನೊಡಿದರೆ ವಿಜಯನಗರ ವಾಸ್ತುಶೈಲಿಯಲ್ಲಿ ನಿರ್ಮಾಣಗೊಂಡಿದೆ ಎಂದು ಸಹಜವಾಗಿ ಹೇಳಬಹುದು. ಪೂರ್ವಾಭಿಮುಖವಾಗಿರುವ ಈ ದೇವಾಲಯ ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಸಭಾಮಂಟಪಗಳನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದ ಮಧ್ಯದಲ್ಲಿ ಪೀಠದ ಮೇಲೆ ಸ್ಥಾನಿಕ ವಿಷ್ಣುವಿನ ಶಿಲ್ಪ ಇರುವುದು. ಚತುರ್ಭುಜಧಾರಿಯಾದ ವಿಷ್ಣುವಿನ ಮುಂದಿನ ಎರೆಡೂ ಕೈಗಳು ಅಭಯ ಹಾಗೂ ವರದ ಮುದ್ರೆಯಲ್ಲಿವೆ. ಹಿಂದಿನ ಕೈಗಳಲ್ಲಿ ಶಂಖ ಮತ್ತು ಚಕ್ರಗಳನ್ನು ಹಿಡಿದಿರುವನು. ಈತ ಹಿಡಿದಿರುವ ಆಯುಧಗಳ ಕ್ರಮಾಂಕದಿಂದ ಈತನನ್ನು ಕೇಶವನೆನ್ನಬಹುದು. ಶಿಲ್ಪದ ಸುತ್ತಲೂ ಪ್ರಭಾವಳಿ ಇದ್ದು, ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳಿವೆ. ಇಕ್ಕೆಲಗಳಲ್ಲಿ ಶ್ರೀದೇವಿ, ಭೂದೇವಿಯವರಿರುವರು. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಷ್ಟೇ ವಿಸ್ತೀರ್ಣದ ಅಂತರಾಳವಿದೆ. ಅಂತರಾಳದ ಪ್ರದೇಶದ್ವಾರದಲ್ಲಿ ಪಂಚಶಾಖೆಗಳಿವೆ. ವೈಷ್ಣವ ಧ್ವಾರಪಾಲಕರು, ಲಲಾಟದಲ್ಲಿ ಗಜಲಕ್ಷ್ಮಿ ಶಿಲವಿದೆ.

ಅಂತರಾಳಕ್ಕೆ ಹೊಂದಿಕೊಂಡಂತೆ ನವರಂಗದಲ್ಲಿ ನಾಲ್ಕು ಕಂಬಗಳು, ಉಳಿದಂತೆ ಇಪ್ಪತ್ತೆರಡು ಕಂಭಗಳಿವೆ. ಮಧ್ಯ ಭಾಗದ ಮುಖ್ಯ ನಾಲ್ಕು ಕಂಬಗಳು ಪೀಠ, ಪಾದ, ಬಹುಮುಖ, ಚೌಕ, ಸಿಂಹಸ್ತಿಯಲ್ಲಿ, ಮತ್ತು ಪುಷ್ಪಾಲಂಕಾರ ಭೋದಿಗೆಗಳನ್ನು ಹೊಂದಿವೆ. ನವರಂಗಕ್ಕೆ ಪೂರ್ವ ಹಾಗೂ ಉತ್ತರ ಹಾಗೂ ದಕ್ಷಿಣ ದಿಕ್ಕಿಗೆ ಮೂರು ಪ್ರವೇಶದ್ವಾರಗಳಿವೆ.

ಪೂರ್ವ ದಿಕ್ಕಿನಲ್ಲಿರುವುದೇ ಮುಖ್ಯ ಪ್ರವೇಶದ್ವಾರವಾಗಿದೆ ಪೂರ್ವ, ಉತ್ತರ, ದಕ್ಷಿಣ ಪ್ರವೇಶದ್ವಾರದ ಕಕ್ಷಾಸನದ ಮೇಲಿನ ಆರು ಕಂಬಗಳು ಸಿಂಹಸ್ತಿಯ ಕಂಬಗಳು, ಎಲ್ಲಾ ಕಂಬಗಳ ಚೌಕಗಳ ಪ್ರತೀಮುಖಗಳಲ್ಲಿ ವಿವಿಧ ರೀತಿಯ ಉಬ್ಬು ಶಿಲ್ಪಗಳಿವೆ. ಅವುಗಳಲ್ಲಿ ಪ್ರಮುಖವಾದವೆಂದರೆ ವ್ಯಾಳ, ಹಂಸ, ವೀರಭದ್ರ, ಭೈರವ, ನಾಟ್ಯಶ್ರೀ, ಯತಿ, ಸುಂದರ, ವಾಮನ, ಭಕ್ತ, ರಾಮ, ವಾಧ್ಯಗಾರ, ಗಜ, ಬೆಣ್ಣೆ ಕದಿಯುವ ಕೃಷ್ಣ, ಹನುಮ, ಗರುಡ, ವೀರ, ರತಿ, ವಿಷ್ಣು, ಕಾಮದೇನು ಇತ್ಯಾದಿ. ನವರಂಗದ ವಿತಾನದಲ್ಲಿ ಅರಳಿದ ಪದ್ಮದ ಅಲಂಕರಣವಿದೆ.. ದ್ವಾರದಲ್ಲಿ ಸರಳ ಶಾಖೆಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಪೇಧ್ಯಭಾಗದಲ್ಲಿ ವೈಷ್ಣವ ಧ್ವಾರಪಾಲಕರಿರುವರು. ಉತ್ತರಾಂಗದಲ್ಲಿ ಅನಂತಶಯನ ಶಿಲ್ಪವಿದೆ. ನವರಂಗಕ್ಕೆ ಹೊಂದಿಕೊಂಡತೆ ನಾಲ್ಕು ಕಂಬಗಳ ಸಭಾಮಂಟಪ ಇರುವುದು. ಸಭಾಮಂಟಪಕ್ಕೆ ಸುತ್ತಲೂ ಕಕ್ಷಾಸನ ಅಳವಡಿಸಲಾಗಿದೆ. ಕಕ್ಷಾಸನದಲ್ಲಿ ಹದಿನಾಲ್ಕು ಕಂಬಗಳಿರುವುದನ್ನು ಕಾಣಬಹುದು. ಸಭಾಮಂಟಪದ ಮಧ್ಯದ ನಾಲ್ಕು ಕಂಬಗಳು ಸಿಂಹಹಸ್ತಿ ಕಂಬಗಳಾಗಿವೆ. ಕಕ್ಷಾಸನದ ಮೂಲೆಗಳಲ್ಲಿಯ ಕಂಬಗಳು ಸಾಮಾನ್ಯ ಕಂಬಗಳಾಗಿವೆ. ಉಳಿದ ಕಂಬಗಳು ಕಂಬದ ಒಂದು ಮುಖದಲ್ಲಿ ಮತ್ತೊಂದು ಕಿರು ನೀಳಗಂಭ ಅಳವಡಿಸಿರುವ ಸ್ತಂಭಗಳು (ಸಂಯೋಗ ಸ್ತಂಭಗಳು) ಕಕ್ಷಾಸನದ ಮಧ್ಯದ ನಾಲ್ಕು ಕಂಬಗಳು ಪುಷ್ಪಾಲಂಕಾರ ಭೋದಿಗೆಯಲ್ಲಿದ್ದರೆ ಉಳಿದವು ಸರಳ ಭೋದಿಗೆಯಲ್ಲಿವೆ. ಇಲ್ಲಿಯೂ ಸಹ ಕಂಬಗಳ ಪ್ರತಿ ಚೌಕಗಳ ನಾಲ್ಕು ಮುಖಗಳಲ್ಲಿ ವಿವಿಧ ರೀತಿಯ ಉಬ್ಬು ಶಿಲ್ಪಗಳಿವೆ. ಅವುಗಳೆಂದರೆ ವೀರ, ಭಕ್ತ, ಹನುಮಂತ, ವಿಷ್ಣು, ಶಂಖ, ಭಕ್ತ, ಗರುಡ, ವಾಮನ, ವಾಧ್ಯಗಾರ, ಹಂಸ, ಚಕ್ರ, ಅನಂತಶಯನ, ನಾಟ್ಯಶ್ರೀ, ವೀರ, ವ್ಯಾಳ, ಸತಿ ಪತಿ ಮಿಥುನ ಗಣಪ ಇತ್ಯಾದಿ ಶಿಲ್ಪಗಳು. ಕಕ್ಷಾಸನದ ಒಳಭಾಗದಲ್ಲಿ ಗಜಸಾಲು ಇದೆ. ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಸಭಾಮಂಟಪ ಹೊರಭಾಗ ಸಾಕಷ್ಟು ಅಲಂಕರಣಗಳಿಂದ ಕೂಡಿರುತ್ತದೆ. ಆದರೆ ವಿಜಯನಗರ ಮತ್ತು ಪಾಳೆಯಗಾರರ ದೇವಾಲಯಗಳಲ್ಲಿ ಸರಳವಾದ ಅಂಲಕರಣವಿರುತ್ತದೆ. ದೇವಾಲಯ ಸಭಾಮಂಟಪದ ಧ್ವಾರಬಾಗಿಲ ಎಡಭಾಗದ ಭಿತ್ತಿಯಲ್ಲಿ ಶಾಸನವನ್ನು ಕಾಣಬಹುದು. ಅದು ಸುಣ್ಣ ಬಣ್ಣ ಗಚ್ಚು ಗಾರೆಯಿಂದ ಅಸ್ಪಷ್ಟ ಗೊಂಡಿದೆ.

ದೇವಾಲಯದ ಬಾಹ್ಯ ಭಿತ್ತಿ ಗಮನಿಸಿದರೆ ದೇವಾಲಯವನ್ನು ಅಧಿಷ್ಠಾನದ ಮೇಲೆ ನಿರ್ಮಾಣಮಾಡಲಾಗಿದೆ. ಅದಿಷ್ಠಾನದಲ್ಲಿ ಉಪಾನ, ಜಗತಿ, ಪದ್ಮದಳ, ತ್ರಿಪಟ್ಟಕುಮುದ, ಕಂಠ, ಚಾಚು ಪಟ್ಟಿಕೆಗಳಿವೆ. ಬಿತ್ತಿ ಸರಳವಾಗಿದೆ. ಗರ್ಭಗೃಹದ ಮೇಲೆ ಇಟ್ಟಗೆ, ಗಾರೆಯಿಂದ ನಿರ್ಮಿಸಿದ ದ್ವಿತಲ ವಿಮಾನವಿದೆ. ವಿಮಾನದಲ್ಲಿ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ವಿವಿಧ ಶಿಲ್ಪಗಳಿವೆ. ಮಳೆಗಾಳಿಯ ಪರಿಣಾಮ ಈಗ ಶಿಲ್ಪಗಳು ಅಸ್ಪಷ್ಟವಾಗಿವೆ. ಪ್ರಸ್ತುತ ಪ್ರದೇಶದಲ್ಲಿ ಈ ರೀತಿಯ ಇಟ್ಟಿಗೆ ಗಾರೆಯಿಂದ ನಿರ್ಮಿಸಿದ ವಿಜಯನಗರ ಕಾಲದ ಮೂಲ ಶಿಖರ

ಗೋಚರಿಸುವುದು ಕಡಿಮೆ ಪ್ರಮಾಣದಲ್ಲಿಯೇ ಎನ್ನಬಹುದು. ಕಾರಣ ಅವು ಶಿಥಿಲಗೊಂಡು ನಂತರದಲ್ಲಿ ಜೀರ್ಣೋದ್ಧಾರಗೊಂಡಿರುವ ಸಾಧ್ಯತೆ ಹೆಚ್ಚಿರುತ್ತದೆ. ಇಲ್ಲಿ ಮೂಲ ಶಿಖರವೂ ಇದ್ದು, ದುರಾದೃಷ್ಟವಶಾತ್ ಈ ಶಿಖರವೂ ಸಹ ಶಿಥಿಲಾವಸ್ಥೆಯಲ್ಲಿದೆ.

ಪ್ರಾಂಗಣದಲ್ಲಿ ಅಮ್ಮನವರ ಗುಡಿ ಇದೆ. ಇದು ಸಾದಾರಣವಾಗಿದ್ದು, ಗರ್ಭಗೃಹದಲ್ಲಿ ಅಮ್ಮನವರ ಶಿಲ್ಪವಿದೆ. ಪ್ರವೇಶದ್ವಾರದ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪ ಹಾಗೂ ಎಡ ಬಲಗಳಲ್ಲಿ ದ್ವಾರ ಪಾಲಕರ ಉಬ್ಬು ಶಿಲ್ಪಗಳನ್ನು ಕಾಣಬಹುದು. ದೇವಾಲಯದ ಸುತ್ತಲೂ ಪ್ರಾಂಗಣವಿದ್ದು ಪ್ರಾಂಗಣದ ಬಿತ್ತಿಯಲ್ಲಿ ಹಾವು, ಹಂಸ, ಲಿಂಗ, ನಂದಿಯ ಉಬ್ಬು ಶಿಲ್ಪಗಳನ್ನು ಕಾಣುವುದಾಗಿ ಪ್ರಾಂಗಣ ಸುತ್ತಲೂ ಮೂಲೆಗಳಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ ನಂದಿಯ ಶಿಲ್ಪಗಳಿವೆ.

ದೇವಾಲಯದ ಮುಂಭಾಗ ದೀಪಸ್ತಂಭ ಇರುವುದು. ಈ ದೀಪಸ್ತಂಭವನ್ನು ಕುಬ್ಜರು ಹೊತ್ತುಕೊಂಡಂತೆ ಚಿತ್ರಿಸಲಾಗಿದೆ. ಅದರ ಮುಂಭಾಗ ಮತ್ತೊಂದು ಬೃಹದಾಕಾರದ ಗರುಡ ಸ್ತಂಭ ಇದೆ. ಸ್ತಂಭದ ಮೇಲ್ತುದಿಯಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ಗರುಡನ ಶಿಲ್ಪ ಇರುವುದು. ಇದೇ ಗರುಡಸ್ತಂಭದ ಕೆಳಗೆ ಎರೆಡು ಭಗ್ನಗೊಂಡ ಶಿಲ್ಪಗಳಿವೆ. ಗರುಡಸ್ತಂಭದ ಹಿಂಭಾಗ ಉಯ್ಯಾಲೆ ಕಂಭವೂ ಇದೆ.[೧೦] ಈ ದೇವಾಲಯ ವೈಷ್ಣವ ಧರ್ಮದ ದೇವಾಲಯವಾಗಿದೆ ಸ್ತಂಭಗಳಲ್ಲಿ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಕಂಡರಿಸಿರುವುದು ಕಂಡುಬರುತ್ತದೆ. ಈ ದೇವಾಲಯದ ಹೆಸರಿನಲ್ಲಿ ಪ್ರತೀ ವರ್ಷ ಯುಗಾದಿ ಹಬ್ಬದಲ್ಲಿ ವಿಜೃಂಬಣೆಯಿಂದ ಒಂದು ವಾರದ ಕಾಲ ಜಾತ್ರೆಯು ನಡೆಯುತ್ತದೆ.

ಹೆಸರು : ಶ್ರೀರಂಗಧಾಮ ದೇವಾಲಯ

ಗ್ರಾಮ : ಧರ್ಮಪುರ

ಸ್ಥಳ : ಕೆರೆಯ ಕೋಡಿಯ ಮುಂಭಾಗದಲ್ಲಿ

ತಾಲ್ಲೂಕು : ಹಿರಿಯೂರು

ಕಾಲಮಾನ : ಸು. ಕ್ರಿ. ಶ. ೧೫-೧೬ನೇ ಶತಮಾನ

ಧರ್ಮಪುರ ಗ್ರಾಮದ ಕೆರೆ ಕೋಡಿಯ ಮುಂಭಾಗದಲ್ಲಿ ಶ್ರೀರಂಗಧಾಮ ದೇವಾಲಯವಿದೆ. ಸುಮಾರು ಕ್ರಿಶ ೧೫-೧೬ನೇ ಶತಮಾನದಲ್ಲಿ ನಿರ್ಮಾಣಗೊಂಡಿರುವ ದೇವಾಲಯುವೆಂದು, ವಾಸ್ತು ಲಕ್ಷಣಗಳ ಆಧಾರದ ಮೇಲೆ ಹೇಳಬಹುದು. ಪೂರ್ವಾಭಿಮುಖವಾಗಿರುವ ಈ ದೇವಾಲಯ ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದ ಮಧ್ಯಭಾಗದಲ್ಲಿ ಪೀಠದ ಮೇಲೆ ಚೆನ್ನಕೇಶವನ ಸ್ಥಾನಿಕ ಶಿಲ್ಪವಿದೆ. ಈ ಶಿಲ್ಪವು ಹಿಡಿದಿರುವ ಆಯುಧಗಳ ಕ್ರಮಾಂಕದಿಂದ ಈತನನ್ನು ಚನ್ನಕೇಶವ ಎನ್ನಬಹುದು. ಶಿಲ್ಪದ ಸುತ್ತಲೂ ಪ್ರಭಾವಳಿಯಿದೆ. ಇದೇ ರೀತಿಯ

ಪಕ್ಕದಲ್ಲಿ ಎಡಬದಿಯಲ್ಲಿ ಶ್ರೀ ಲಕ್ಷ್ಮೀ ಶಿಲ್ಪ ಇರುವುದು. ಈ ಶಿಲ್ಪವು ಅರಳಿದ ಕಮಲದಲ್ಲಿ ಕುಳಿತಿರುವ ಭಂಗಿಯಲ್ಲಿದೆ ಚತುರ್ಭುಜಧಾರಿಯಾಗಿದ್ದು, ಅಭಯ ಪದ್ಮ, ಕಮಲ, ವರದ ಮುದ್ರೆಯಲ್ಲಿ ಕಿರೀಟದಾರಿಯಲ್ಲಿದೆ. ಗರ್ಭಗೃಹದ ಬಾಗಿಲ ಎಡ ಬಲ ಬದಿಯಲ್ಲಿ ದ್ವಾರಪಲಕದ ಉಬ್ಬುಶಿಲ್ಪಗಳನ್ನು ಕಾಣಬಹುದು. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಷ್ಟೇ ವಿಸ್ತೀರ್ಣದ ಅಂತರಾಳವಿದೆ. ಅಂತರಾಳದ ಪ್ರವೇಶದ್ವಾರದಲ್ಲಿ ಸಾಧಾರಣ ದ್ವಾರಶಾಖೆ ಇದ್ದು ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ.

ಅಂತರಾಳಕ್ಕೆ ಹೊಂದಿಕೊಂಡಂತೆ ನಾಲ್ಕು ಕಂಬಗಳ ನವರಂಗ ಇದೆ. ಬಿತ್ತಿಯಲ್ಲಿ ಹನ್ನೆರಡು ಅರೆಗಂಬಗಳಿವೆ. ಮಧ್ಯಭಾಗದಲ್ಲಿ ಮುಖ್ಯವಾಗಿ ನಾಲ್ಕು ಕಂಬಗಳಿದ್ದು, ಅವು ಪೀಠ ಪಾದ, ಚೌಕ ಮತ್ತು ಸಾಧಾರಣ ಭೋದಿಗೆಯಲ್ಲಿವೆ. ಪ್ರತಿ ಕಂಬಗಳ ಚೌಕಗಳ ಪ್ರತಿ ಮುಖಗಳಲ್ಲಿ ವಿವಿಧ ರೀತಿಯ ಉಬ್ಬು ಶಿಲ್ಪಗಳಿವೆ. ಅವುಗಳೆಂದರೆ ಹಂಸ, ವ್ಯಾಳ, ಹನುಮಂತ, ಆಮೆ, ಯತಿ, ಸುಂದರಿ, ಭಕ್ತ, ವಾಧ್ಯಗಾರ ಹೀಗೆ ಇನ್ನೂ ಹಲವಾರು ಶಿಲ್ಪಗಳನ್ನು ಕಾಣಬಹುದಾಗಿದೆ. ನವರಂಗಕ್ಕೆ ಹೊಂದಿಕೊಂಡಂತೆ ಪೂರ್ವ ಹಾಗೂ ಉತ್ತರ ದಿಕ್ಕಿಗೆ ಎರೆಡು ಪ್ರವೇಶದ್ವಾರಗಳಿವೆ. ಪೂರ್ವ ದಿಕ್ಕಿನಲ್ಲಿರುವುದೇ ಮುಖ್ಯ ಪ್ರವೇಶದ್ವಾರ. ದ್ವಾರದಲ್ಲಿ ಸರಳ ಶಾಖೆಗಳಿವೆ. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ದೇವಾಲಯವನ್ನು ಏರುವಿನ್ಯಾಸದಲ್ಲಿ ಗಮನಿಸಿದರೆ, ಅದಿಷ್ಠಾನವನ್ನು ಹೊಂದಿದೆ. ಅದಿಷ್ಠಾನದಲ್ಲಿ ಉಪಾನ, ಜಗುತಿ, ಕುಮುದ, ಆಲಿಂಗನ, ಪಟ್ಟಿಕೆಗಳನ್ನು ಕಂಡುಬರುತ್ತವೆ. ಬಿತ್ತಿಯು ಸರಳವಾಗಿದೆ. ಕಪೋತದ, ಮೇಲ್ಭಾಗದಲ್ಲಿ ದ್ವಿತಲಗಳಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟ ಶಿಖರ ಮತ್ತು ಕಳಸವಿದೆ. ಶಿಖರದ ಸುತ್ತಲೂ ರಾಮಾಯಣದ ಕಥಾನಕ ಶಿಲ್ಪಗಳನ್ನು ಚಿತ್ರಿಸಲಾಗಿದೆ.

ಹೆಸರು : ಭೀಮರಾಯನ ಗುಡಿ

ಗ್ರಾಮ : ಧರ್ಮಪುರ

ಸ್ಥಳ : ಕೆರೆಯ ಏರಿಯ ಮೂಲೆಯಲ್ಲಿ

ಕಾಲಮಾನ : ಸು. ಕ್ರಿ.ಶ. ೧೫-೧೬ನೇ ಶತಮಾನ

ಧರ್ಮಪುರ ಗ್ರಾಮದಿಂದ ಅಮರಾಪುರಕ್ಕೆ ಹೋಗುವ ದಾರಿಯ ಬಲಭಾಗದ ಕೆರೆಯ ಏರಿಯ ಆಗ್ನೇಯ ದಿಕ್ಕಿನಲ್ಲಿ ಭೀಮಲಿಂಗೇಶ್ವರ ದೇವಾಲಯವಿದೆ. ಈ ಗ್ರಾಮದಲ್ಲಿ ಇದೇ ರೀತಿಯ ಸಾಧಾರಣವಾದ ಪಂಚಲಿಂಗಗಳ ದೇವಾಲಯಗಳಿವೆ ಅವುಗಳಲ್ಲಿ ಈ ದೇವಾಲಯ ಮಾತ್ರ ವಿಶೇಷವಾಗಿ ಕಂಡುಬರುತ್ತದೆ. ಈ ದೇವಾಲಯಗಳಿಗೆ ಸಂಬಂಧಿಸಿದಂತೆ ಯಾವುದೇ ಶಾಸನಗಳು ಲಭ್ಯವಿಲ್ಲದಿದ್ದರೂ ವಾಸ್ತುಶೈಲಿಯ ದೃಷ್ಟಿಯಿಂದ ಇವುಗಳ ಕಾಲಮಾನ ಸುಮಾರು ಕ್ರಿ.ಶ. ೧೫-೧೬ನೇ ಶತಮಾನದಾಗಿದೆ. ಸ್ಥಳೀಯರು ಮಾತ್ರ ಇವುಗಳನ್ನು ಪಂಚಲಿಂಗೇಶ್ವರ ದೇವಾಲಯಗಳು ಎಂದು ಕರೆಯುತ್ತಿದ್ದಾರೆ.

ತಳವಿನ್ಯಾಸದಲ್ಲಿ ಭೀಮೇಶ್ವರ ದೇವಾಲಯ ಗರ್ಭಗೃಹ, ಅಂತರಾಳ, ನವರಂಗ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲೆ ಪ್ರತಿಷ್ಠಾಪಿಸಿರುವ ಶಿವಲಿಂಗವಿದೆ. ಗರ್ಭಗೃಹದ ದ್ವಾರಶಾಖೆ ಸಾದಾರಣವಾಗಿದೆ. ಅಂತರಾಳದಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿಯ ಶಿಲ್ಪವಿದೆ. ಹಾಗೆಯೇ ನವರಂಗದಲ್ಲಿ ವೃತ್ತಾಕಾರದ ಪೀಠದ ಮೇಲೆ ಪ್ರತಿಷ್ಠಾಪಿಸಿರುವ ಮತ್ತೊಂದು ಶಿವಲಿಂಗವಿದೆ. ವಿತಾನದಲ್ಲಿ ಭುವನೇಶ್ವರಿಯನ್ನು ನೋಡಬಹುದು. ಬಿತ್ತಿಯಲ್ಲಿ ಸುತ್ತಲೂ೧೨ ಅರೆಗಂಬಗಳಿವೆ. ಅರೆಗಂಬಗಳು ಸಾದಾರಣವಾಗಿವೆ. ನವರಂಗದಲ್ಲಿನ ಮಧ್ಯದ ನಾಲ್ಕು ಕಂಬಗಳು ಹೆಚ್ಚು ಅಲಂಕೃತವಾದ ಹೂ ಬಳ್ಳಿಗಳಿಂದ ಅಲಂಕರಣಗೊಂಡಿವೆ. ಈ ದೇವಾಲಯಕ್ಕೆ ಎರಡು ಪ್ರವೇಶದ್ವಾರಗಳಿದ್ದು, ಪೂರ್ವಭಿಮುಖವಾಗಿರುವುದು ಪ್ರಮುಖವಾದ ಪ್ರವೇಶದ್ವಾರವಾಗಿದೆ.

ಈ ದೇವಾಲಯದ ಏರುವಿನ್ಯಾಸದಲ್ಲಿ ಸಾದಾರಣವಾದ ಅದಿಷ್ಠಾನ, ಬಿತ್ತಿ, ಸಮತಟ್ಟಾದ ಮೇಲ್ಛಾವಣಿ ಹೊಂದಿದೆ. ಈಗ ದೇವಾಲಯ ಮಳೆ ಗಾಳಿಯಿಂದ ಶಿಥಿಲಾವಸ್ಥೆಯಲ್ಲಿದೆ. ಇದೇ ರೀತಿಯಲ್ಲಿ ಇನ್ನುಳಿದ ಧರ್ಮರಾಯ, ಅರ್ಜುನ, ನಕುಲ ಸಹದೇವ ದೇವಾಲಯಗಳೂ ಸಹ ಶಿಥಿಲಾವಸ್ಥೆಯಲ್ಲಿದ್ದು, ಭೀಮೇಶ್ವರ ದೇವಾಲಯಕ್ಕಿಂತಲೂ ಸಾಧಾರಣವಾಗಿವೆ. ಈ ದೇವಾಲಯಗಳ ಗರ್ಭಗೃಹದಲ್ಲಿ ಚಚೌಕಾಕರದ ಪೀಟಗಳ ವೇಲೆ ಪ್ರತಿಷ್ಠಾಪಿಸಿರುವ ಶಿವಲಿಂಗಗಳಿದ್ದು ಅಭಿಮುಖವಾಗಿ ನಂದಿಯ ಶಿಲ್ಪವಿದೆ.

ಹೆಸರು : ಈಶ್ವರ ದೇವಾಲಯ
ಗ್ರಾಮ : ವೇಣುಕಲ್ಲುಗುಡ್ಡ
ಸ್ಥಳ : ಗ್ರಾಮದ ಮಧ್ಯಭಾಗದಲ್ಲಿ
ಕಾಲಮಾನ : ಸು. ಕ್ರಿ.ಶ. ೧೫-೧೬ನೇ ಶತಮಾನ

ಧರ್ಮಪುರದಿಂದ ಹಿರಿಯೂರಿಗೆ ಹೋಗುವ ಸುಮಾರು ೭ಕಿ.ಮೀ ಅಂತರದಲ್ಲಿ ವೇಣುಕಲ್ಲುಗುಡ್ಡ ಗ್ರಾಮವಿದ್ದು ಈ ಗ್ರಾಮದ ಮಧ್ಯಭಾಗದಲ್ಲಿ ಸುಮಾರು ಕ್ರಿ.ಶ, ೧೫-೧೬ನೇ ಶತಮಾನದಲ್ಲಿ ನಿರ್ಮಾಣವಾದಂತಹ ಈಶ್ವರ ದೇವಾಲಯವಿದೆ. ಈ ದೇವಾಲಯ ಸರಳವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ ಮತ್ತು ನವರಂಗವನ್ನು ಮಾತ್ರ ಹೊಂದಿದೆ, ಗರ್ಭಗೃಹದಲ್ಲಿ ಚಚೌಕಾಕಾರದ ಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು. ಈ ಲಿಂಗುವು ಕಪ್ಪು ಕಲ್ಲಿನಲ್ಲಿ ನಿರ್ಮಿಸಿದ್ದು ಬ್ರಹ್ಮಸೂತ್ರ, ಜಲಾಹರಿಯನ್ನು ಹೊಂದಿದೆ. ಗರ್ಭಗೃಹ ದ್ವಾರವು ಸರಳವಾಗಿದ್ದು ಮೇಲ್ಭಾಗದಲ್ಲಿ ಗಣೇಶ ಶಿಲ್ಪವಿದೆ. ನವರಂಗದಲ್ಲಿ ಶಿವಲಿಂಗುವಿಗೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಪ್ರಮುಖ ಪ್ರವೇಶದ್ವಾರವು ಸಹ ಸರಳವಾಗಿದ್ದು ಎಡ ಬಲಗಳಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಕಂಡರಿಸಲಾಗಿದೆ. ಏರುವಿನ್ಯಾಸದಲ್ಲಿ ದೇವಾಲಯವನ್ನು ಗಮನಿಸಿದರೆ ಅದಿಷ್ಠಾನದಲ್ಲಿ ಉಪಾನ, ಜಗುತಿ, ತ್ರಿಪಟ್ಟ ಕುಮುದ,

ಆಲಿಂಗ, ಆಂತರಿತ, ವಾಜನ, ಸರಳವಾದ ಬಿತ್ತಿ, ಪ್ರಸ್ತರದಲ್ಲಿ ಮುಂಚಾಚು, ಮೇಲ್ಚಾವಣಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ್ದು ಸಮತಟ್ಟಾಗಿರುವುದು. ನಾಲ್ಕು ಮೂಲೆಗಳಲ್ಲಿ ನಂದಿಯ ಶಿಲ್ಪಗಳನ್ನು ಅಳವಡಿಸಿದೆ. ಬಾಹ್ಯ ಬಿತ್ತಿಯಲ್ಲಿ ಲಜ್ಜಾಗೌರಿ, ನಂದಿ, ಆನೆ, ಮೀನು, ನಾಗರಹಾವು ಉಬ್ಬುಶಿಲ್ಪಗಳನ್ನು ಚಿತ್ರಿಸಲಾಗಿದೆ ಸಾಮಾನ್ಯವಾಗಿ ಈ ತರಹದ ಅಂಶಗಳ ದೇವಾಲಯಗಳು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿರುತ್ತವೆ. ದೇವಾಲಯದ ಮುಂಭಾಗದಲ್ಲಿ ಸುಮಾರು ೧೫ ಅಡಿ ಎತ್ತರದ ದ್ವೀಪಸ್ತಂವಿದೆ.

ಹೆಸರು : ಆಂಜನೇಯ ದೇವಾಲಯ

ಗ್ರಾಮ : ಬಿದರಕೆರೆ

ಸ್ಥಳ : ರಂಗೇನಹಳ್ಳಿಯಿಂದ ಬಿದರಕೆರೆಗೆ ಹೋಗುವ ದಾರಿಯಲ್ಲಿ ಎಡಭಾಗದಲ್ಲಿ

ಕಾಲಮಾನ : ಸು. ಕ್ರಿ.ಶ. ೧೫-೧೬ನೇ ಶತಮಾನ

ಅಧ್ಯಯನ ಪ್ರದೇಶವಾದ ಧರ್ಮಪುರ ಕೇಂದ್ರದಿಂದ ಸುಮಾರು ೧೨ ಕಿ.ಮೀ. ದೂರದಲ್ಲಿ ಬಿದರಕೆರೆ ಗ್ರಾಮವಿದ್ದು ಈ ದೇವಾಯದ ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ತೆರೆದ ಮುಖಮಂಟಪವಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಆಂಜನೇಯಸ್ವಾಮಿ ವಿಗ್ರಹವಿದೆ, ಸರಳವಾದ ದ್ವಾರವಿದೆ ತೆರೆದ ಮುಖಮಂಟಪದಲ್ಲಿ ನಾಲ್ಕು ಬಿಡಿ ಕಂಬಗಳಿದ್ದು ಹತ್ತು ಅರೆಗಂಬಗಳಿವೆ. ಈ ಕಂಬಗಳು ಸರಳವಾದ ಚಚೌಕಾರದಲ್ಲಿದ್ದು ಮಧ್ಯಭಾಗದಲ್ಲಿರುವ ನಾಲ್ಕು ಕಂಬಗಳ ಮೇಲೆ ಗರುಡ, ವಿಷ್ಣು, ಕೀರ್ತಿಮುಖ, ಕಥಾನಕಶಿಲ್ಪಗಳಿವೆ. ದೇವಾಲಯದ ಏರುವಿನ್ಯಾಸವನ್ನು ಗಮನಿಸಿದರೆ ಗರ್ಭಗೃಹದ ಅದಿಷ್ಠಾನವು ಉಪಾನ, ತ್ರಿಪಟ್ಟ ಕುಮುದ, ಆಲಿಂಗ, ಆಂತರಿತ, ನಿರಾಲಂಕೃತವಾದ ಬಿತ್ತಿ, ಪ್ರಸ್ತರ, ಏಕತಲದ ಜೀರ್ಣೋದಾರವಾಗಿರುವ ಕಳಸವನ್ನು ಕಾಣಲಾಗಿದೆ. ತೆರೆದ ಮಂಟಪ ಅದಿಷ್ಠಾನ, ಸರಳವಾಗಿದ್ದು ಅದಿಷ್ಠಾನದಲ್ಲಿ ಆನೆಗಳ ಸಾಲುಗಳ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಬಿತ್ತಿ, ಪ್ರಸ್ತರ, ಸಮತಟ್ಟಾಗಿರುವಂತೆ ಮೇಲ್ಚಾವಣಿಯನ್ನು ನಿರ್ಮಿಸಲಾಗಿದ್ದು. ದೇವಾಲಯದ ಸುತ್ತಲೂ ಪ್ರಕಾರದ ಗೋಡೆಯನ್ನು ನಿರ್ಮಿಸಲಾಗಿದೆ, ದೇವಾಲಯದ ಆವರಣದಲ್ಲಿ ಶಾಸನದ ಕಲ್ಲನ್ನು ನಿಲ್ಲಿಸಲಾಗಿದೆ ಮತ್ತು ಪಕ್ಕದಲ್ಲಿ ವೀರಗಲ್ಲು ಇದ್ದು ದೇವಾಲಯದ ಆವರಣದಲ್ಲಿ ೭ ಅಡಿ ಎತ್ತರವಾದ ದ್ವೀಪಸ್ತಂಭವೊಂದಿದೆ. ಈ ದೇವಾಲಯವನ್ನು ಇತ್ತೀಚಿನ ದಿನಗಳಲ್ಲಿ ಜೀರ್ಣೋದ್ದಾರವಾಗಿದ್ದು ಹೊಸ ರೂಪವನ್ನು ಪಡೆದು ಕೊಂಡಿದೆ.

ಹೆಸರು : ಸಿದ್ದೇಶ್ವರಸ್ವಾಮಿ ದೇವಾಲಯ

ಗ್ರಾಮ : ಬಿದರಕೆರೆ ಊರಿನ ಮಧ್ಯದಲ್ಲಿ

ಸ್ಥಳ : ಊರಿನ ಮಧ್ಯದಲ್ಲಿ

ಕಾಲಮಾನ : ಸು. ಕ್ರಿ.ಶ. ೧೫-೧೬ನೇ ಶತಮಾನ

ಧರ್ಮಪುರದಿಂದ ಹಿರಿಯೂರಿಗೆ ಹೊಗುವ ದಾರಿಯ ಬಲಕ್ಕೆ ಸುಮಾರು ೧೫ ಕಿ.ಮೀ ದೂರದಲ್ಲಿ ಬಿದರಕೆರೆ ಗ್ರಾಮವಿದ್ದು ಈ ಗ್ರಾಮದಲ್ಲಿ ಸಿದ್ದೇಶ್ವರಸ್ವಾಮಿ ದೇವಾಲಯವಿದೆ ಈ ದೇವಾಲಯ ಸುಮಾರು ಕ್ರಿಶ. ಸು. ೧೫-೧೬ನೇ ಶತಮಾನದಲ್ಲಿ ನಿರ್ಮಾಣಗೊಂಡಿರುವ ದೇವಾಲಯವಾಗಿದ್ದು ಈ ದೇವಾಲಯ ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ತೆರೆದ ಮುಖಮಂಟಪ, ಗರ್ಭಗೃಹದಲ್ಲಿ ಸಿದ್ದೇಶ್ವರಸ್ವಾಮಿ ವಿಗ್ರಹವಿದೆ, ಸರಳವಾದ ದ್ವಾರಶಾಖೆ ಹೊಂದಿದ್ದು, ಪ್ರಮುಖ ಪ್ರವೇಶದ್ವಾರವು ಸಾದಾರಣವಾಗಿದೆ ತೆರೆದಮಂಟಪದಲ್ಲಿ ೬ ಚಚೌಕಾಕಾರದ ಬಿಡಿ ಕಂಬಗಳು, ಹನ್ನೆರೆಡು ಅರೆಕಂಬಗಳನ್ನು ಕಂಡರಿಸಲಾಗಿದೆ. ಮಂಟಪದಲ್ಲಿ ಇರುವಂತಹ ಬಿಡಿ ಕಂಬಗಳಲ್ಲಿ ಕಥಾನಕ ಶಿಲ್ಪಗಳಿದ್ದು ಉಳಿದ ಕಂಬಗಳು ನಿರಾಲಂಕೃತವಾಗಿವೆ. ಈ ದೇವಾಲಯದ ಏರು ವಿನ್ಯಾಸದಲ್ಲಿ ಗಮನಿಸಿದಾಗ ಅದಿಷ್ಠಾನದಲ್ಲಿ ಪಟ್ಟಿಗಳಿದ್ದು ಉಪಾನ, ತ್ರಿಪಟ್ಟಕುಮುದ, ಆಲಿಂಗ, ಆಂತರಿತ, ಸರಳವಾದ ಬಿತ್ತಿ, ಸರಳವಾದ ಪ್ರಸ್ತರ, ತ್ರಿತಲಗಳನ್ನು ಹೊಂದಿರುವ ಕಳಸವನ್ನು ಕಾಣಲಾಗಿದ್ದು. ಮುಖಮಂಟಪದ ಅದಿಷ್ಠಾನ, ಮತ್ತು ಬಿತ್ತಿ ಸರಳವಾಗಿದೆ, ಮೇಲ್ಚಾವಣಿ ಸಮತಟ್ಟಾಗಿದೆ. ಮೇಲ್ಚಾವಣಿಯ ಮೂಲೆಯಲ್ಲಿ ನಂದಿಯ ಶಿಲ್ಪಗಳನ್ನು ಅಳವಡಿಸಿದೆ. ಈ ದೇವಾಲಯಕ್ಕೆ ಸುತ್ತಲೂ ಪ್ರಕಾರದ ಗೊಡೆಯಿದ್ದು ಆವರಣದಲ್ಲಿ ಹಲವಾರು ವೀರಗಲ್ಲುಗಳನ್ನು ನಿಲ್ಲಿಸಿದೆ. ದೇವಾಲಯದ ಮುಂಭಾಗದಲ್ಲಿ ಸುಮಾರು ಎತ್ತರದ ಧ್ವೀಪಸ್ತಂಭ, ಉಯ್ಯಾಲೆ ಸ್ತಂಬವಿದೆ.

ಹೆಸರು : ಬ್ರಹ್ಮದೇವರಗುಡಿ
ಗ್ರಾಮ : ಶಿಡ್ಲ್ಯಯ್ಯನಕೊಟೆ
ಸ್ಥಳ : ಜಂಗಮಯ್ಯನ ಹೊಲದಲ್ಲಿ
ಕಾಲಮಾನ : ಸು. ಕ್ರಿಶ.೧೫-೧೬ನೇ ಶತಮಾನ

ಧರ್ಮಪುರದಿಂದ ಚಳ್ಳಕೆರೆಗೆ ಹೋಗುವ ಸುಮಾರು ೧೦ ಕಿ.ಮೀ ದೂರದಲ್ಲಿ ಶಿಡ್ಲಯ್ಯನಕೊಟೆ ಗ್ರಾಮವಿದೆ ಈ ಗ್ರಾಮದ ಊರ ಹೊರವಲಯದ ವೇದಾವತಿ ನದಿಯ ದಂಡೆಯ ಜಂಗಮಯ್ಯನ ಜಮೀನಿನಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಿರುವ ಬ್ರಹ್ಮದೇವರಗುಡಿ ಇದೆ. ಇದು ಸರಳವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ, ಬಿದ್ದುಹೋಗಿರುವ ಮಂಟಪವಿದೆ. ಗರ್ಭಗೃಹದಲ್ಲಿ ಯಾವುದೇ ತರಹದ ಶಿಲ್ಪಗಳಿಲ್ಲ. ದ್ವಾರಬಾಗಿಲು ಸಾಧಾರಣವಾಗಿದ್ದು ಲಲಾಟದಲ್ಲಿ ಪದ್ಮದ ಚಿತ್ರಣವಿದೆ. ಏರುವಿನ್ಯಾಸದಲ್ಲಿ ಅಧಿಷ್ಠಾನ, ಅಧಿಷ್ಠಾನದಲ್ಲಿ ಪಟ್ಟಿಕೆಗಳಿದ್ದು ಮಣ್ಣಿನಲ್ಲಿ ಮುಚ್ಚಿಹೋಗಿವೆ. ಸರಳವಾದ ಕಲ್ಲಿನಿಂದ ನಿರ್ಮಿಸಿದ ಬಿತ್ತಿ, ಪ್ರಸ್ತರ, ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಾಣಗೊಂಡಿರುವ ದ್ವಿತಲ ಶಿಖರವಿದೆ. ಈ ದೇವಾಲಯವನ್ನು ಗಮನಿಸಿದರೆ ವಿಜಯನಗರ ಶೈಲಿ ಎಂದು ಹೇಳಬಹುದು, ಇದೇ ತೆರನಾದ ದೇವಾಲಯವನ್ನು ಹಂಪಿ ಪರಿಸರದ ಕಮಲಾಪುರದ ರಸ್ತೆಯ ಎಡಬಾಗದಲ್ಲಿದೆ. ಈ

ದೇವಾಲಯ ಆಕರ್ಷಣೀಯವಾಗಿದ್ದು ಮಳೆ ಗಾಳಿಗೆ ತುತ್ತಾಗಿದ್ದು ರಕ್ಷಣೆಯಿಲ್ಲದೆ ಅಳಿವಿನ ಅಂಚಿನಲ್ಲಿದೆ. ದೇವಾಲಯದ ಮುಂಬಾಗದಲ್ಲಿ ತ್ರುಟಿತಗೊಂಡಿರುವ ಶಾಸನದ ಕಲ್ಲು ಇರುವುದು ಕಂಡರಿಸಲಾಗಿದೆ.

ಹೆಸರು : ಉಮಾಮಹೇಶ್ವರಿ ದೇವಾಲಯ

ಗ್ರಾಮ : ಧರ್ಮಪುರ

ಸ್ಥಳ : ಊರಿನ ರಂಗೇಗೌಡರ ಮನೆಯಬಳಿ

ಕಾಲಮಾನ : ಸು. ಕ್ರಿ.ಶ.೧೫-೧೬ನೇ ಶತಮಾನ

ಪ್ರಸ್ತುತ ಧರ್ಮಪುರದ ಊರಿನ ಮಧ್ಯಬಾಗದ ರಂಗೇಗೌಡರ ಮನೆಯ ಪಕ್ಕದಲ್ಲಿ ಉಮಾಮಹೇಶ್ವರಿ ದೇವಾಲಯವಿದೆ. ಈ ದೇವಾಲಯ ಸಾಧಾರಣವಾಗಿದೆ, ತಳವಿನ್ಯಾಯಾಸದಲ್ಲಿ ಗರ್ಭಗೃಹದಲ್ಲಿ ಚೌಕಾಕಾರದ ಪೀಟದಮೇಲೆ ಪ್ರತಿಷ್ಠಾಪಿಸಿರುವ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ನಿರ್ಮಿಸಿರುವ ಉಮಾಮಹೇಶ್ವರಿ ಶಿಲ್ಪವಿದೆ ಗರ್ಭಗೃಹದ ದ್ವಾರ ಸರಳವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಎಡ ಬಲಗಳಲ್ಲಿ ಆನೆಗಳು ತನ್ನ ಸೊಂಡಿಲುಗಳನ್ನು ಎತ್ತಿ ನಿಂತಿರುವಂತೆ ಕಂಡರಿಸಲಾಗಿದ್ದು, ದ್ವಾರದ ಪಕ್ಕದಲ್ಲಿ ಗಣೇಶ ಮತ್ತು__ಬಿಡಿ ಶಿಲ್ಪಗಳಿವೆ. ನವರಂಗದಲ್ಲಿ ೧೨ ಅರೆಕಂಬಗಳು, ೪ ಬಿಡಿ ಕಂಬಗಳಿದ್ದು ಈ ಎಲ್ಲಾ ಕಂಬಗಳು ಚೌಕಾಕಾರ, ಸರಳವಾದ ಬೋದಿಗೆಯಲ್ಲಿವೆ. ಸರಳವಾದ ಪ್ರವೇಶದ್ವಾರವಿದ್ದು, ಏರುವಿನ್ಯಾಸದಲ್ಲಿ ದೇವಾಲಯ ಕಲ್ಲು, ಇಟ್ಟಿಗೆ ಗಾರೆಯಿಂದ ನಿರ್ಮಿಸಲಾಗಿದ್ದು. ಇದರ ಮೇಲ್ಚಾವಣಿ ಸಮತಟ್ಟಾಗಿದೆ. ಈ ದೇವಾಲಯವನ್ನು ಇತ್ತೀಚಿನ ದಿನಗಳಲ್ಲಿ ಇದಕ್ಕೆ ಸುಣ್ಣ ಬಣ್ಣದಿಂದ ಬಳಿದಿದ್ದಾರೆ.

ಹೆಸರು : ಈಶ್ವರ ದೇವಾಲಯ

ಗ್ರಾಮ : ಕಣಜನಹಳ್ಳಿ

ಸ್ಥಳ : ಕೋಟೆಯ ದ್ವಾರಬಾಗಿಲ ಬಲಬದಿಯಲ್ಲಿ ಊರಿನ ರಂಗೇಗೌಡರ ಮನೆಯ ಬಳಿ

ಕಾಲಮಾನ : ಸು. ಕ್ರಿ.ಶ.೧೫-೧೬ನೇ ಶತಮಾನ

ಪ್ರಸ್ತುತ ಧರ್ಮಪುರದಿಂದ ಚಳ್ಳಕೆರೆಗೆ ಹೋಗುವ ಸುಮಾರು ೫ಕಿ.ಮೀ ದೂರದ ಕಣಜನಹಳ್ಳಿ ಗ್ರಾಮದ ಕೋಟೆಯ ಪ್ರವೇಶದ್ವಾರದ ಒಳಗಡೆ ಬಲಬದಿಯಲ್ಲಿ ಈಶ್ವರ ದೇವಾಲಯವಿದ್ದು ಈ ದೇವಾಲಯ ಗೋಡೆಯು ಮಳೆಗಾಳಿಗೆ ಬಿದ್ದು ಹೋಗಿದೆ ಚೌಕಾಕಾರದ ಪೀಠದ ಮೇಲಿರುವ ಶಿವಲಿಂಗ ಅಭಿಮುಖವಾಗಿ ನಂದಿಯ ಶಿಲ್ಪ ಮಧ್ಯದಲ್ಲಿ ಗಣೇಶ ಮೂರ್ತಿಯೊಂದು ಇದೆ. ಈ ಶಿಲ್ಪಗಳು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ನಿರ್ಮಿತವಾಗಿದ್ದು ನಂದಿ ಶಿಲ್ಪವು ಅಲಂಕರಣಗೊಂಡಿದೆ.

ಹೆಸರು : ವೀರಭದ್ರದೇವಾಲಯ

ಗ್ರಾಮ : ಧರ್ಮಪುರ

ಸ್ಥಳ : ಊರಿನ ಮಧ್ಯಬಾಗ

ಕಾಲಮಾನ : ಸು. ಕ್ರಿ.ಶ. ೧೫–೧೬ನೇ ಶತಮಾನ

ಧರ್ಮಪುರ ಊರಿನ ಮಧ್ಯಭಾಗದಲ್ಲಿ ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿರುವ ಶ್ರೀ ವೀರಭದ್ರಸ್ವಾಮಿ ದೇವಾಲಯವಿದ್ದು, ಈ ದೇವಾಲಯದ ತಳವಿನ್ಯಾಸದಲ್ಲಿ ಗರ್ಭಗೃಹದಲ್ಲಿ ವೀರಭದ್ರನ ಮೂರ್ತಿಯನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ನಿರ್ಮಿಸಿದೆ. ಸರಳವಾದ ದ್ವಾರವಿದ್ದು ಅದರ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ, ಅಂತರಾಳವು ಸರಳವಾಗಿದೆ. ಅರೆಗಂಬಗಳಿಂದ ಕೂಡಿದೆ. ಅಂತರಾಳದ ಗೋಡೆಯ ಮೇಲೆ ನಂದಿ, ಶಿವಲಿಂಗ, ನಾಗರಹಾವು ಉಬ್ಬುಶಿಲ್ಪಗಳಿವೆ, ದೇವಾಲಯದ ಮೇಲ್ಚಾವಣಿ ಸಮತಟ್ಟಾಗಿದ್ದು ಗಚ್ಚುಗಾರೆಯಿಂದ ಆಧುನೀಕರಣಗೊಳಿಸಲಾಗಿದೆ.

ಹೆಸರು : ರಂಗನಾಥಸ್ವಾಮಿ ದೇವಾಲಯ

ಗ್ರಾಮ : ಅಬ್ಬಿನಹೊಳೆ

ಸ್ಥಳ : ಕೆರೆಯ ಮುಂಭಾಗದಲ್ಲಿ

ಕಾಲಮಾನ : ಸು.ಕ್ರಿ.ಶ. ೧೫–೧೬ನೇ ಶತಮಾನ

ಧರ್ಮಪುರದಿಂದ ಹಿರಿಯೂರಿಗೆ ಹೋಗುವ ದಾರಿಯ ಬಲಭಾಗಕ್ಕೆ ಸುಮಾರು ೮ಕಿ.ಮೀ ದೂರದಲ್ಲಿ ಅಬ್ಬಿನಹೊಳೆ ಗ್ರಾಮವಿದ್ದು ಈ ಗ್ರಾಮದ ಕೆರೆ ಮುಂಭಾಗದಲ್ಲಿ ಶ್ರೀ ರಂಗನಾಥಸ್ವಾಮಿ ದೇವಾಲಯುವಿದೆ. ಈ ದೇವಾಲಯುವು ಪ್ರಾಚೀನ ಕಾಲದ ದೇವಾಲಯವಾಗಿದ್ದು ಇತ್ತೀಚಿನ ದಿನಗಳಲ್ಲಿ ಆಧುನೀಕರಣಗೊಳಿಸಲಾಗಿದೆ. ಈ ದೇವಾಲಯ ಪೂರ್ವಾಭಿಮುಖವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪವಿದೆ. ಗರ್ಭಗೃಹದಲ್ಲಿ ರಂಗನಾಥನ ವಿಗ್ರಹ ಅಲಂಕೃತಗೊಳಿಸಿದ ಶಿಲ್ಪವಿದೆ. ಸಾಧಾರಣವಾದ ದ್ವಾರಶಾಖೆ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪ ಎಡಬಲಗಳಲ್ಲಿ ಎರಡು ಆನೆಗಳು ಸೊಂಡಿಲುಗಳನ್ನು ಎತ್ತಿ ನಿಂತಿರುವುದು ದ್ವಾರದ ಎಡಬಲಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಅಂತರಾಳ, ನವರಂಗದಲ್ಲಿ ನಾಲ್ಕು ಬಿಡಿ ಕಂಬಗಳ ವಿನ್ಯಾಸ, ಪೀಠದಲ್ಲಿ ಚೌಕಾಕಾರ ಮಧ್ಯಭಾಗ ಅಷ್ಟಮುಖದಿಂಡು, ಸರಳವಾದ ಬೋದಿಗೆಯಲ್ಲಿವೆ. ೧೨ ಅಎಕಂಬಗಳಿದ್ದು ಈ ಕಂಬಗಳು ಚೌಕಾರದಲ್ಲಿವೆ ಪ್ರವೇಶದ್ವಾರವು ಸಾದಾರಣವಾಗಿದ್ದು ಮುಖಮಂಟಪವಿದೆ ಮುಖಮಂಟಪವು ಎರೆಡು ಬಡಿ ಕಂಬ ಎರೆಡು ಅರೆಕಂಬಗಳಿಂದ ಕೋಡಿದೆ. ಕುಳಿತುಕೊಳ್ಳಲು ಕಟ್ಟೆಯನ್ನು ನಿರ್ಮಾಣ ಮಾಡಿದೆ. ಈ ದೇವಾಲಯದ ಏರುವಿನ್ಯಾಸದಲ್ಲಿ ಗಮನಿಸಿದರೆ ಗರ್ಭಗೃಹದ ಅಧಿಷ್ಠಾನವಿದ್ದು ಉಪಾನ, ಜಗತಿ, ತ್ರಿಪಟ್ಟ ಕುಮುದ, ಆಂತರಿತ, ಪಾದ, ಬಿತ್ತಿ, ಪ್ರಸ್ತರ, ದ್ವಿತಲ ಶಿಖರ, ಕಳಸ, ಶಿಖರದಲ್ಲಿ ವಿಷ್ಣುವಿನ ಹಲವು ಅವತಾರಗಳ ಶಿಲ್ಪಗಳು ಇವೆ.

ಸಿಂಹದ ಶಿಲ್ಪಗಳನ್ನು ಗಚ್ಚು ಗಾರೆಯಿಂದ ನಿರ್ಮಿಸಲಾಗಿದೆ. ನವರಂಗದ ಅಧಿಷ್ಠಾನ ಸರಳವಾಗಿದ್ದು, ಬಿತ್ತಿ, ಪ್ರಸ್ತರ, ಸಮತಟ್ಟಾದ ಮೇಲ್ಛಾವಣಿ ಸುತ್ತಲೂ ಅಲಂಕೃತ ಗೂಡುಗಳನ್ನು ನಿರ್ಮಿಸಿದ್ದು ಅವುಗಳಲ್ಲಿ ವಿಷ್ಣುವಿನ ಅವತಾರಗಳು ಮುಖಮಂಟಪದ ಮೇಲ್ಛಾವಣಿಯಲ್ಲಿ ಗಣೇಶ, ಕುಬ್ಜರ, ಸಪ್ತಮಾತೃಕೆಯರ, ಹಂಸಗಳ ಉಬ್ಬು ಶಿಲ್ಪಗಳಿವೆ. ಮುಂಭಾಗದಲ್ಲಿ ಸುಮಾರು ಎತ್ತರದ ದ್ವೀಪಸ್ತಂಬ, ಬಲಿಪೀಠ ಸ್ತಂಭಗಳಿವೆ. ದ್ವೀಪಸ್ತಂಬದ ಪೀಠದಲ್ಲಿ ಆಂಜನೇಯನ ಉಬ್ಬು ಶಿಲ್ಪವಿದೆ. ಮುಂಭಾಗದಲ್ಲಿ ಮಣ್ಣಿನಲ್ಲಿ ಮುಚ್ಚಿಹೋಗಿರುವ ಶಾಸನದ ಕಲ್ಲೊಂದಿದೆ.

ಹೆಸರು : ಏಳುಮಂಧ್ಯಕ್ಕನ ದೇವಾಲಯ

ಗ್ರಾಮ : ಅಬ್ಬಿನಹೊಳೆ

ಸ್ಥಳ : ಊರ ಹೊರವಲಯದ ಜಮೀನಿನಲ್ಲಿ

ಕಾಲಮಾನ : ಸು. ಕ್ರಿ.ಶ. ೧೫–೧೬ನೇ ಶತಮಾನ

ಪ್ರಸ್ತುತ ಪ್ರದೇಶದ ಅಬ್ಬಿನಹೊಳೆ ಗ್ರಾಮದ ಊರಹೊರವಲಯದ ಜಮೀನಿನಲ್ಲಿ ಮಧ್ಯಭಾಗದಲ್ಲಿ ಪ್ರಾಚೀನ ಕಾಲದ ದೇವಾಲಯವಿದ್ದು ಈ ದೇವಾಲಯವನ್ನು ಊರಿನ ಗ್ರಾಮಸ್ಥರು ಏಳುಮಂಧ್ಯಕ್ಕನ ದೇವಸ್ಥಾನ ಎಂದು ಕರೆಯುತ್ತಾರೆ. ಈ ದೇವಾಲಯ ಸಂಪೂರ್ಣವಾಗಿ ಮಳೆ ಗಾಳಿಗೆ ಬಿದ್ದು ಹೋಗಿದೆ. ಇಲ್ಲಿನ ಬೃಹತ್ತಾದ ನಂದಿಯು ಆಕರ್ಷಕವಾಗಿದ್ದು, ಸಪ್ತಮಾತೃಕೆಯರ ಶಿಲ್ಪ, ವೀರಗಲ್ಲುಗಳು ಅಳಿವಿನ ಅಂಚಿನಲಿವೆ. ಈ ದೇವಾಲಯವು ಬಹಳ ಪ್ರಾಚೀನ ದೇವಾಲಯವಾಗಿದ್ದು ಆಕರ್ಷಕ ದುಂಡಾದ, ಚೌಕಾಕಾರದ ಕಂಬಗಳಿದ್ದು ಮೇಲ್ಛಾವಣಿ ಸಂಪೂರ್ಣ ಬಿದ್ದು ಹೋಗಿದೆ. ಈ ದೇವಾಲಯದ ಜೀರ್ಣೋದ್ಧಾರ ಮಾಡುವುದು ಅತ್ಯವಶ್ಯಕವಾಗಿದೆ.

ಹೆಸರು : ಈಶ್ವರ ದೇವಾಲಯ

ಗ್ರಾಮ : ಅಬ್ಬಿನಹೊಳೆ

ಸ್ಥಳ : ಕೆರೆಯ ಮುಂಭಾಗ

ಕಾಲಮಾನ : ಆದುನಿಕ

ಪ್ರಸ್ತುತ ಧರ್ಮಪುರದ ಪರಿಸರದ ಅಬ್ಬಿನಹೊಳೆ ಗ್ರಾಮದ ಕೆರೆಯ ಮುಂಭಾಗದ ರಂಗನಾಥಸ್ವಾಮಿ ದೇವಾಲಯದ ಪಕ್ಕದಲ್ಲಿ ಆಧುನಿಕವಾಗಿ ನಿರ್ಮಿಸಿದ ಈಶ್ವರ ದೇವಾಲಯವಿದೆ. ಈ ದೇವಾಲಯ ಎತ್ತರವಾದ ಅಧಿಷ್ಠಾನದ ಮೇಲೆ ನಿರ್ಮಿಸಿದ್ದು ಗರ್ಭಗೃಹ, ಮುಖಮಂಟಪ ಸಭಾಮಂಟಪವನ್ನು ನಿರ್ಮಿಸಲಾಗಿದ್ದು. ಗರ್ಭಗೃಹದಲ್ಲಿ ಈಶ್ವರ ಲಿಂಗ, ಮುಖಮಂಟಪದಲ್ಲಿ ೬ ಅರೆಗಂಬಗಳು, ಎರಡು ಬಿಡಿಕಂಬಗಳು, ಲಿಂಗಕ್ಕೆ ಅಭಿಮುಖವಾಗಿ ನಂದಿ, ಎಡಬಾಗದಲ್ಲಿ ನವಗ್ರಹ ಮಂಟಪನ್ನು ಕಂಡರಿಸಲಾಗಿದೆ. ಈ ದೇವಾಲಯಕ್ಕೆ ಸುತ್ತಲೂ ಸಭಾಮಂಟಪವನ್ನು

ನಿರ್ಮಿಸಲಾಗಿದ್ದು ಉತ್ತರ ಮತ್ತು ದಕ್ಷಿಣದಲ್ಲಿ ಪ್ರವೇಶದ್ವಾರಗಳನ್ನು ಕಲ್ಪಿಸಲಾಗಿದೆ. ಈ ದೇವಾಲಯ ಆಧುನಿಕವಾಗಿ ನಿರ್ಮಾಣ ಮಾಡಿದಂತಹ ದೇವಾಲಯವಾಗಿದೆ.

ಹೆಸರು : ಬಸವಣ್ಣನಗುಡಿ

ಗ್ರಾಮ : ವೇಣುಕಲ್ಲುಗುಡ್ಡ

ಸ್ಥಳ : ಉರಿನಮಧ್ಯಬಾಗ

ಪ್ರಸ್ತುತ ಧರ್ಮಪುರದಿಂದ ಹಿರಿಯೂರಿಗೆ ಹೋಗುವ ಎಡಕ್ಕೆ ಸುಮಾರು ೭ಕಿ.ಮೀ. ದೂರದಲ್ಲಿ ವೇಣುಕಲ್ಲುಗುಡ್ಡವಿದ್ದು ಈ ಗ್ರಾಮದಲ್ಲಿ ಉತ್ತರಾಭಿಮುಖವಾಗಿ ನಿರ್ಮಿಸಿರುವ ಬಸವಣ್ಣನ ದೇವಾಲಯವಿದ್ದು ಈ ದೇವಾಲಯ ಕಟ್ಟೆಯ ಮೇಲೆ ನಿರ್ಮಾಣಗೊಂಡಿದ್ದು ಚೌಕಾಕಾರದ ಗರ್ಭಗೃಹದಲ್ಲಿ ನಂದಿಯ ಶಿಲ್ಪ ಸರಳವಾದ ದ್ವಾರಶಾಖೆ, ನವರಂಗ, ನಾಲ್ಕು ಸಾಧಾರಣ ಚೌಕಾಕಾಧರದ ಸ್ತಂಭಗಳೂ ೧೨ ಅರೆಕಂಬಗಳಿದ್ದು ಸರಳವಾದ ಪ್ರವೇಶದ್ವಾರ ಮುಖಮಂಟಪ, ಮಂಟಪದಲ್ಲಿ ಎರೆಡು ಚೌಕಾಕಾರದ ಕಂಬಗಳಿದ್ದು ಸುತ್ತಲೂ ಗಚ್ಚುಗಾರೆಯಿಂದ ನಿರ್ಮಿಸಲಾಗಿದ್ದು ಮೇಲ್ಚಾವಣಿ ಸಮತಟ್ಟಾಗಿದೆ. ಮುಂಭಾಗದಲ್ಲಿ ಸುಮಾರು ೧೫ ಅಡಿ ಎತ್ತರದ ದ್ವೀಪಸ್ತಂಭವಿದ್ದು ಪಕ್ಕದಲ್ಲಿ ಗರುಸುಕಲ್ಲಿನಲ್ಲಿ ಕೆತ್ತಲ್ಪಟ್ಟಿರುವ ಶಾಸನವೊಂದಿದೆ. ಈ ದೇವಾಲಯವನ್ನು ಗ್ರಾಮಸ್ಥರು ತುಗ್ಗಲಿ ಬಸವ ಎಂದು ಕರೆಯುತ್ತಾರೆ. ಪ್ರಾಚೀನ ಕಾಲದ ದೇವಾಲಯವಾಗಿದ್ದು ಇದನ್ನು ಇತ್ತೀಚಿನ ದಿನಗಳಲ್ಲಿ ಸುಣ್ಣ ಬಣ್ಣ, ಗಚ್ಚು ಗಾರೆಯಿಂದ ಜೀರ್ಣೋದ್ಧಾರಗೊಳಿಸಲಾಗಿದೆ.

ಹೆಸರು : ರೇಣುಕಾಪರಮೇಶ್ವರ ದೇವಾಲಯ

ಗ್ರಾಮ : ಕೊಡಿಹಳ್ಳಿ

ಸ್ಥಳ : ಊರಿನ ಮಧ್ಯಭಾಗ

ಧರ್ಮಪುರದಿಂದ ಶಿರಾಕ್ಕೆ ಹೊಗುವ ಸುಮಾರು ೧೦ಕಿ.ಮೀ ದೂರದಲ್ಲಿ ಕೋಡಿಹಳ್ಳಿ ಗ್ರಾಮವಿದ್ದು ಈ ಗ್ರಾಮದ ಮಧ್ಯಬಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿರುವ ಪ್ರಾಚೀನ ದೇವಾಲಯವಾಗಿದ್ದು ಈ ದೇವಾಲಯವನ್ನು ಶ್ರೀ ರೇಣುಕಾಪರಮೇಶ್ವರಿ ಎಂದು ಗ್ರಾಮಸ್ಥರು ಕರೆಯುತ್ತಿದ್ದಾರೆ. ಈ ದೇವಾಲಯದ ನವರಂಗ ಮುಖಮಂಟಪದ ಭಾಗವನ್ನು ಇತ್ತೀಚಿನ ದಿನಗಳಲ್ಲಿ ಜೀರ್ಣೋದ್ಧಾರಗೊಳಿಸಿದ್ದಾರೆ ಎನ್ನಲಾಗಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಅಮ್ಮನವರ ಶಿಲ್ಪವಿದ್ದು ಅಲಂಕರಣಗೊಂಡಿವೆ. ದ್ವಾರದಲ್ಲಿ ಎಡ ಬಲಗಳಲ್ಲಿ ದ್ವಾರಪಾಲಕರ, ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ಪಕ್ಕದಲ್ಲಿ ಆನೆಗಳು ಸೊಂಡಿಲುಗಳನ್ನು ಎತ್ತಿನಿಂತಿರುವುದು, ಶಾಖೆಗಳನ್ನು ಹೊಂದಿದೆ. ನವರಂಗದಲ್ಲಿ ೬ ಬಿಡಿಕಂಬಗಳಿದ್ದು ಪೀಠ, ಅಷ್ಟಮುಖದಿಂಡು, ದಿಂಬಿನಾಕಾರದ ಬೊದಿಗೆ, ತೊಲೆಯ ಮೇಲೆ ಶಾಸನದ ಪಾಠವಿದ್ದು ಸರಳವಾದ ದ್ವಾರವಿದೆ.

ಆಧುನೀಕರಣವಾಗಿ ನಿರ್ಮಿಸಿರುವ ಸಭಾಮಂಟಪವಿದ್ದು ಸಭಾಮಂಟಪಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಪ್ರವೇಶದ್ವಾರಗಳಿದ್ದು ೬ ಸಾಧಾರಣ ಕಂಬಗಳನ್ನು ಒಳಗೊಂಡಿದೆ.

ಮುಖಮಂಟಪದಲ್ಲಿ ಎರಡು ಬಿಡಿಕಂಬಗಳು, ೨ ಅರೆಕಂಬಗಳು, ಕಟ್ಟೆಯ ಮೇಲೆ ನಿರ್ಮಿಸಿದೆ. ಪೀಠದಲ್ಲಿ ಅಷ್ಟಮುಖ ದಿಂಡು, ದಿಂಬಿನಾಕಾರದ ಬೋದಿಗೆ ಇದೆ. ಈ ದೇವಾಲಯದ ಏರುವಿನ್ಯಾಸದಲ್ಲಿ ಅಧಿಷ್ಠಾನ, ಅಧಿಷ್ಠಾನದಲ್ಲಿ ಹಲವು ಪಟ್ಟಿಕೆಗಳಿಂದ ಕೂಡಿದ್ದು ಸರಳವಾದ ಬಿತ್ತಿ, ಬಿತ್ತಿಯಲ್ಲಿ ನಾಗರಹಾವು, ನವಿಲು, ಕೀರ್ತಿಮುಖ, ಉಬ್ಬುಶಿಲ್ಪಗಳಿವೆ. ಪ್ರಸ್ತರ, ದ್ವಿತಲ ಶಿಖರ, ಕಳಸವನ್ನು ರೂಪಿಸಲಾಗಿದ್ದು ನವರಂಗದ ಅಧಿಷ್ಠಾನ ಸರಳವಾಗಿದ್ದು ಭಿತ್ತಿ ಮೇಲ್ಛಾವಣಿ, ಸಮತಟ್ಟಾಗಿದೆ. ದೇವಾಲಯದ ಮುಂಭಾಗದಲ್ಲಿ ಸುಮಾರು ಎತ್ತರದ ದ್ವೀಪ ಸ್ತಂಭವಿದೆ. ಈ ದೇವಾಲಯವು ಪ್ರಾಚೀನ ಕಾಲದ ದೇವಾಲಯವಾಗಿದ್ದು ಇದನ್ನು ಇತ್ತೀಚಿನ ದಿನಗಳಲ್ಲಿ ಸುಣ್ಣ, ಬಣ್ಣ, ಗಚ್ಚು, ಗಾರೆಯಿಂದ ಜೀರ್ಣೋದ್ಧಾರಗೊಳಿಸಲಾಗಿದೆ.

**೫.೨ ಮೂರ್ತಿ ಶಿಲ್ಪಗಳು**

ಭಾರತ ದೇಶದಲ್ಲಿರುವಷ್ಟು ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ಬೇರೆ ಯಾವ ದೇಶದಲ್ಲೂ ಕಂಡು ಬರುವುದಿಲ್ಲ ಎಂದು ಹೇಳಬಹುದು. ಪ್ರತಿಯೊಂದು ಹಳ್ಳಿಗಳಲ್ಲಿ, ಗ್ರಾಮಗಳಲ್ಲಿ, ಪಟ್ಟಣಗಳಲ್ಲಿ, ನಗರಗಳಲ್ಲಿಯೂ ಸಹ ದೇವಾಲಯಗಳು, ಮಠಗಳು, ಇದ್ದೆ ಇರುತ್ತವೆ. ಆದುದರಿಂದಾಗಿ ಭಾರತದಲ್ಲಿ ಗಾದೆ ಹೇಳುವಂತೆ ಗುಡಿಗಳಿಲ್ಲದ ಗ್ರಾಮಗಳಿಲ್ಲ, ದೇವಾಲಯಗಳಿಲ್ಲದ ನಗರಗಳಿಲ್ಲವೆಂಬಂತೆ ದೇವಾಲಯಗಳು, ಗುಡಿಗಳು ಇದ್ದೆ ಇರುತ್ತವೆ ಎನ್ನಬಹುದು. ಕನಿಷ್ಟ ಪೂಜೆ ಮಾಡದೆ ಪಾಳುಬಿದ್ದಿರುವ ಚಿಕ್ಕ ಪುಟ್ಟ ಗುಡಿಗಳಾದರೂ ಇದ್ದೇ ಇರುತ್ತವೆ. ಸುಂದರವಾದ ಆಕರ್ಷಕವಾದಂತಹ ಮೂರ್ತಿಶಿಲ್ಪಗಳು ಇದ್ದೆ ಇರುತ್ತವೆ ಎನ್ನಬಹುದು, ಚಿತ್ರಕಲೆಯಲ್ಲಿ ಎಷ್ಟೊಂದು ಶೈಲಿಗಳು, ರೀತಿಗಳು ಕಾಣಿಸುತ್ತವೆಯೋ. ಹಾಗೆಯೇ ಶಿಲ್ಪದಲ್ಲೂ ಕಾಣಿಸುತ್ತವೆ.[೧೧]

ಶಿಲ್ಪಶಾಸ್ತ್ರಕ್ಕೂ ಮತ್ತು ಮಾನವನಿಗೆ ಬಹಳ ನಿಕಟವಾದ ಸಂಬಂಧವಿದೆ. ಮಾನವನು ಹುಟ್ಟಿದಂದೇ ಶಿಲ್ಪವು ಹುಟ್ಟಿದಂತೆ ಕಾಣುತ್ತದೆ. ಮೂರ್ತಿಶಿಲ್ಪ ಮತ್ತು ವಾಸ್ತುಶಿಲ್ಪ ಇವೆರಡಕ್ಕೂ ಸಂಬಂಧವಿರುವುದನ್ನು ನೋಡಬಹುದು. ಮೂರ್ತಿಶಿಲ್ಪ ವಾಸ್ತುಶಿಲ್ಪದ ಜೊತೆಯಲ್ಲಿ ಬೆಳೆದು ಬಂದಿದೆ ಎನ್ನುವುದು ಹಲವು ವಿದ್ವಾಂಸರ ವಾದ. ಆದರೆ ವಾಸ್ತುಶಿಲ್ಪಕ್ಕಿಂತಲೂ ಮೂರ್ತಿಶಿಲ್ಪ ಪ್ರಾಚೀನವಾದ ಇತಿಹಾಸ ಹೊಂದಿದೆ.[೧೨] ವಾಸ್ತು ಶಿಲ್ಪ ದೇವರುಗಳಿಗೆ ಆಲಯವಾಗಿದ್ದರೆ, ಮೂರ್ತಿಶಿಲ್ಪ ಸಾಕ್ಷಾತ್ ದೇವರಿಗೆ ಮೂರ್ತಿ ಸ್ವರೂಪವನ್ನು ನೀಡಿದೆ. ಅಂದರೆ ದೇವರುಗಳ ಸಾಂಕೇತಿಕವಾಗಿ ಈ ಮೂರ್ತಿಶಿಲ್ಪವು ಶಿಲ್ಪರೂಪ ಪಡೆದಿರುವುದನ್ನು ಕಾಣಬಹುದು. ಪ್ರಾಚೀನ ಕಾಲದಲ್ಲಿ ಮಾನವನು ತನ್ನ ಸುತ್ತಮುತ್ತಲಿನ ಪರಿಸರದಲ್ಲಿ ಅಗಾದವಾದ ಶಕ್ತಿಯಿದೆ ಎಂದು ನಂಬಿ ಶಿಲ್ಪಗಳನ್ನು ಮೂರ್ತೀಕರಿಸಲು ಪ್ರಾರಂಭಿಸಿದ. ನಂತರವಾಗಿ ಕಾಣದ ಶಕ್ತಿಯನ್ನು

ಪ್ರತಿನಿಧಿಸಲು ಒಂದು ನೆಲೆಯಲ್ಲಿ ಒಂದು ವಸ್ತುವನ್ನು ಮಣ್ಣಿನ ಅಥವಾ ಕಲ್ಲಿನಲ್ಲಿ ಗೊಂಬೆಯನ್ನು ಮಾಡಿಕೊಂಡು ಪೂಜಿಸಲು ಪ್ರಾರಂಭಿಸಿದ. ಈ ರೀತಿಯಾಗಿ ತಯಾರಿಸಿಕೊಂಡು ಪೂಜಿಸಿ ನಶಿಸಿ ಹೋಗಿರುವಂತಹ ಹಲವಾರು ಮೂರ್ತಿ ಶಿಲ್ಪಗಳನ್ನು ನಾವುಗಳು ಹಲವಾರು ಉತ್ಖನನಗಳಲ್ಲಿ, ಪಾಳುಬಿದ್ದಿರುವ ದೇವಾಲಯಗಳಲ್ಲಿ ದೊರತಿರುವುದನ್ನು ಕಾಣುತ್ತೇವೆ.

ಐತಿಹಾಸಿಕ ಯುಗಕ್ಕೆ ಬಂದರೆ ಭಾರತದಲ್ಲಿ ಮೂರ್ತಿಶಿಲ್ಪಗಳು ದೊರೆಯುವುದು ಮೌರ್ಯರ ಕಾಲದಲ್ಲಿ. ಅಂದರೆ ಸಾರನಾಥ, ಲೋಮಋಷಿ, ಇತ್ಯಾದಿ ಗುಹಾಲಯಗಳಲ್ಲಿರುವ ಈ ಕಲೆಯು ಭಾರತೀಯ ಶಿಲ್ಪಕಲಾ ಬೆಳವಣಿಗೆಯಲ್ಲಿ ಪ್ರಮುಖ ಹಂತವೆನ್ನಬಹುದು. ಈ ಕಾಲದಲ್ಲಿನ ಶಿಲ್ಪಗಳ ಶೈಲಿಯು ದೃಢವಾದ ಭಾರತೀಯ ಶಿಲ್ಪದ ಬೆಳವಣಿಗೆ ಸಾಧ್ಯವಾಯಿತು ಎನ್ನಬಹುದು.[೨] . ಈ ಕಾಲದ ಶಿಲ್ಪಗಳ ಅಂಗಾಂಗಗಳ ಅಳತೆಗಳಲ್ಲಿ ಸಮತೋಲನ, ದೇಹದಲ್ಲಿ ನಾವೀನ್ಯತೆ, ಗಂಭೀರಭಾವ, ಪ್ರಶಾಂತತೆಯ ಭಾವನೆಯನ್ನು ಶಿಲ್ಪಗಳಲ್ಲಿ ಕಾಣಬಹುದು.

ಗುಪ್ತರ ನಂತರವಾಗಿ ಬಂದಂತಹ ಅರಸರ ಪ್ರೋತ್ಸಾಹದೊಂದಿಗೆ ಭಾರತೀಯ ಮೂರ್ತಿಶಿಲ್ಪ ಉನ್ನತವಾದ ಸ್ಥಾನ ಪಡೆಯಿತು ಎನ್ನಬಹುದು. ಕರ್ನಾಟಕದಲ್ಲಿ ಮೂರ್ತಿ ಶಿಲ್ಪಕ್ಕೆ ಇತಿಹಾಸ ಪೂರ್ವ ಕಾಲದಿಂದಲ್ಲೂ ಮಹತ್ತರವಾದ ಸ್ಥಾನವಿದೆ. ಮಾನವನು ಈ ಮೊದಲು ಗುಹೆಗಳಲ್ಲಿ ವಾಸಿಸುತ್ತಿದ್ದ ಈ ಸಂದರ್ಭದಲ್ಲಿ ಗುಹೆಗಳ ಬಂಡೆಗಳ ಮೇಲೆ ಪ್ರಾಣಿಗಳ ಚಿತ್ರಗಳನ್ನು ಬರೆದಿರುವ ತೆಕ್ಕಲಕೋಟೆ, ಮಸ್ಕಿ, ಪಿಕ್ಲಿಹಾಳ್ ಇತ್ಯಾದಿ ಪ್ರದೇಶಗಳಲ್ಲಿ ಕಾಣಬಹುದಾಗಿದೆ. ನಂತರವಾಗಿ ಚಾರಿತ್ರಿಕ ಯುಗಕ್ಕೆ ಬಂದಾಗ ಮೂರ್ತಿ ಶಿಲ್ಪಗಳು ಹೆಚ್ಚಿನದಾಗಿ ಆಚರಣೆಗೆ ಬಂದಿರುವುದನ್ನು ಕಾಣುತ್ತೇವೆ. ಕದಂಬರ ಕಾಲಕ್ಕೆ ಬಂದರೆ ಮೂರ್ತಿ ಶಿಲ್ಪಗಳು ಹೇರಳವಾಗಿ ಕಂಡುಬರುತ್ತವೆ. ನಂತರ ಆಳ್ವಿಕೆ ನಡೆಸಿದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮೂರ್ತಿ ಶಿಲ್ಪಗಳು ಉತ್ತಮ ಸ್ಥಿತಿಯನ್ನು ತಲುಪಿ ಹೊಯ್ಸಳರ ಕಾಲಕ್ಕೆ ಅತ್ಯಂತ ಸುಂದರ ರೂಪವನ್ನು ಪಡೆಯಿತು ಎಂದು ಹೇಳಬಹುದು.

ಅಧ್ಯಯನದ ದೃಷ್ಟಿಯಿಂದ ಶೈವ, ವೈಷ್ಣವ, ಜೈನ ಶಿಲ್ಪಗಳೆಂದು ಪ್ರತ್ಯೇಕವಾಗಿ ವಿಭಾಗಿಸಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಹಲವು ಶೈವದೇವಾಲಯಗಳು ಕಾಣಸಿಗುತ್ತವೆ. ಈ ಶೈವ ದೇವಾಲಯಗಳಲ್ಲಿ ಪ್ರಮುಖವಾಗಿ ಕಂಡುಬರುವ ಶಿಲ್ಪಗಳೆಂದರೆ ಶಿವಲಿಂಗಗಳು, ನಂದಿಗಳು, ಶಿವ, ಉಮಾಮಹೇಶ್ವರ, ಭೈರವ, ವೀರಭದ್ರ, ಗಣೇಶ, ಕಾರ್ತಿಕೇಯ ಇತ್ಯಾದಿ. ಹಾಗೆಯೇ ಈ ಪ್ರದೇಶದಲ್ಲಿ ವೈಷ್ಣವ ಶಿಲ್ಪಗಳು ಮತ್ತು ಜೈನ ಶಿಲ್ಪಗಳೂ ಸಹ ಕಂಡುಬರುತ್ತವೆ. ಈ ಪ್ರದೇಶದಲ್ಲಿ ಚಿತ್ರದುರ್ಗ ಪಾಳೆಯಗಾರರು ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದರಿಂದ ಹಾಗೂ ಅವರು ವೈಷ್ಣವ ಪಂಥದವರಾಗಿದ್ದರಿಂದ ವೈಷ್ಣವ ದೇವಾಲಯ ಹಾಗೂ ಶಿಲ್ಪಗಳ ರಚನೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ. ವೈಷ್ಣವ ಶಿಲ್ಪಗಳಲ್ಲಿ ಹೆಚ್ಚಾಗಿ ಕಂಡುಬರುವ ಶಿಲ್ಪಗಳೆಂದರೆ ಕೇಶವ ಇತ್ಯಾದಿ. ಈ ಪ್ರದೇಶದಲ್ಲಿ ಜೈನ ಶಾಸನಗಳು ಕಂಡುಬಂದರೂ ಅಷ್ಟಾಗಿ ಜೈನ ಶಿಲ್ಪಗಳು ಕಂಡುಬರುವುದಿಲ್ಲ ಎಂದು ಹೇಳಬಹುದು.

## ನಂದಿಶಿಲ್ಪಗಳು

ಧರ್ಮಪುರ ಪ್ರದೇಶದಲ್ಲಿರುವ ಪ್ರತಿ ಶೈವ ದೇವಾಲಯಗಳಲ್ಲಿಯೂ ನಂದಿ ಶಿಲ್ಪಗಳಿರುವುದನ್ನು ಕಾಣುತ್ತೇವೆ. ನಂದಿ ಶಿಲ್ಪಗಳು ಗರ್ಭಗೃಹದಲ್ಲಿರುವಂತಹ ಶಿವಲಿಂಗಕ್ಕೆ ಅಭಿಮುಖವಾಗಿ ಅಂತರಾಳ ಅಥವಾ ನವರಂಗಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿವೆ. ಕೆಲವು ಶಿಲ್ಪಗಳನ್ನು ದೇವಾಲಯಗಳ ಹೊರ ಭಾಗದಲ್ಲಿರುವ ಪ್ರತ್ಯೇಕವಾದ ನಂದಿ ಮಂಟಪದಲ್ಲಿ ಪ್ರತಿಷ್ಠಾಪಿಸಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಈ ಎಲ್ಲಾ ನಂದಿಶಿಲ್ಪಗಳನ್ನು ಪೀಠದ ಮೇಲೆ ಕುಳ್ಳಿಸಿರುವಂತೆ ಕಂಡರಿಸಲಾಗಿದೆ. ಇವುಗಳು ಕೆಲವು ಮುಂದಿನ ಬಲಗಾಲನ್ನು ಹಿಂದಕ್ಕೆ ಮಡಿಚಿ ಎಡಗಾಲನ್ನು ಸ್ವಲ್ಪ ಮುಂದಕ್ಕೆ ಚಾಚಿರುವಂತೆ ಹಿಂದಿನ ಬಲಗಾಲನ್ನು ಮುಂದಕ್ಕೆ ಚಾಚಿ ಎಡಗಾಲನ್ನು ಹೊಟ್ಟೆಯ ಕೆಳಗೆ ಎಳೆದುಕೊಂಡು ಮಡಚಿ ಮಲಗಿರುವಂತೆ ಚಿತ್ರಿಸಲಾಗಿದೆ. ತಲೆಯನ್ನು ಮುಂದಕ್ಕೆ ನೇರವಾಗಿ, ಚಾಚಿಕೊಂಡಿರುತ್ತವೆ. ನಂದಿಗಳಿಗೆ ಗಂಟಾಸರ, ಗಗ್ಗರ, ಕೊರಳಸರ ಹಣೆಪಟ್ಟಿ, ಕಾಲ್ಗಡಗ ಮುಂತಾದ ಆಭರಣಗಳಿಂದ ಅಲಂಕರಿಸಲಾಗಿದೆ. ಬೇತೂರು ಕೆರೆಯ ಬಯಲಿನಲ್ಲಿ ಬೃಹತ್ತಾದ ನಂದಿ ಶಿಲ್ಪವಿದೆ. ಶಿಡ್ಲಯ್ಯನ ಕೋಟೆ ವೇದಾವತಿ ನದಿಯ ಪಕ್ಕದಲ್ಲಿ ಕಟ್ಟೆಯ ಮೇಲೆ ಜೋಡಿ ನಂದಿಶಿಲ್ಪಗಳು ಕಂಡುಬರುತ್ತವೆ. ಖಂಡೇನಹಳ್ಳಿ ಭೀಮಪ್ಪನವರ ಜಮೀನಿನಲ್ಲಿ ಅಂದರೆ ಖಂಡೇನಹಳ್ಳಿಯಿಂದ ಹೊಸಕೆರೆಗೆ ಹೋಗುವ ದಾರಿಯ ಎಡಭಾಗದಲ್ಲಿ ಪಾಳು ಬಿದ್ದು ತ್ರುಟಿತಗೊಂಡಿರುವ ನಂದಿ ಶಿಲ್ಪವು ಸಹ ಆಕರ್ಷಣೀಯವಾಗಿದೆ. ಅದೇ ತೆರನಾದ ಬೇತೂರು ಕೆರೆಯಲ್ಲಿ ಮತ್ತು ಕಣಜನಹಳ್ಳಿ ಕೋಟೆಯ ದ್ವಾರದ ಬದಿಯಲ್ಲಿ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಬೃಹದಾಕಾರದ ನಂದಿ ಶಿಲ್ಪಗಳಿವೆ.

## ಗಣೇಶ

ಧರ್ಮಪುರ ಗ್ರಾಮದಲ್ಲಿ ಪ್ರತ್ಯೇಕವಾದ ಗಣೇಶ ದೇವಾಲಯವಿದೆ. ಈ ದೇವಾಲಯದಲ್ಲಿ ಗಣೇಶನನ್ನು ಪೀಠದ ಮೇಲೆ ಇರುವಂತೆ ಪ್ರತಿಷ್ಠಾಪಿಸಿದ್ದಾರೆ. ಗಣೇಶನನ್ನು ಚತುರ್ಭುಜಗಳಲ್ಲಿರುವಂತೆ ಕಂಡರಿಸಲಾಗಿದ್ದು ಕೈಗಳಲ್ಲಿ ದಂತ, ಪಾಶ, ಅಂಕುಶ ಹಾಗೂ ಫಲಗಳನ್ನು ಹಿಡಿದಿರುವನು. ಕಿರೀಟ, ಹಾರ, ಸರ, ಕಿಂಕಣಿ, ಭುಜಬಂದಿ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದೆ. ಹಾಗೆಯೇ ಅಗಲವಾದ ಕಿವಿ, ಸೊಂಡಲಿನಿಂದ ಫಲ ತಿನ್ನುತ್ತಿರುವುದು, ಉದರದಲ್ಲಿ ನಾಗಬಂದವಿದೆ. ಇದೇ ರೀತಿಯಲ್ಲಿ ಖಂಡೇನಹಳ್ಳಿ ಭೀಮಪ್ಪನವರ ಜಮೀನಿನಲ್ಲಿ ಪಾಳುಬಿದ್ದಿರುವ ದೇವಾಲಯದ ಬಯಲಿನಲ್ಲಿಯೂ ಸಹ ತ್ರುಟಿತಗೊಂಡಿರುವ ಗಣೇಶ ಶಿಲ್ಪವೂ ಸಹ ಇದೇ ರೀತಿಯ ಲಕ್ಷಣಗಳನ್ನು ಹೊಂದಿದೆ. ಬಿದರಕೆರೆ ಆಂಜನೇಯ ಸ್ವಾಮಿಯ ದೇವಾಲಯದ ನವರಂಗದ ಕೊಷ್ಟಕದಲ್ಲಿ ಗಣೇಶ ಶಿಲ್ಪವಿದ್ದು ಇದು ಸಹ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ೩ ಅಡಿ ಎತ್ತರ ೨ಅಡಿ ಅಗಲದಲ್ಲಿದೆ. ಚತುರ್ಭುಜಧಾರಿಯಾಗಿದ್ದು ಅಭಯ ಅಸ್ತ, ಶಂಖ, ಪದ್ಮ, ವರದ ಮುದ್ರೆಯಲ್ಲಿದೆ.

**ಶಿವಲಿಂಗಗಳು**

ಧರ್ಮಪುರ ಪರಿಸರದಲ್ಲಿ ಹೆಚ್ಚಿನದಾಗಿ ಶಿವಲಿಂಗಗಳು ಕಂಡುಬರುತ್ತದೆ. ಕಾರಣ ಈ ಪ್ರದೇಶದಲ್ಲಿ (ನೊಳಂಬವಾಡಿ ೩೨೦೦೦) ನೊಂಳಬರು ಆಳ್ವಿಕೆ ನಡೆಸಿದ್ದು, ಇವರು ಶೈವ ಧರ್ಮೀಯರಾಗಿದ್ದರು. ಆದ್ದರಿಂದ ಅವರು ಶೈವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಹ ನೀಡಿದರು. ಪಂಚ ಪಾಂಡವರು ವನವಾಸದ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ಬೀಡು ಬಿಟ್ಟಿದ್ದರಿಂದ ಅವರ ನೆನಪಿಗಾಗಿ ಪಂಚ ಲಿಂಗಗಳನ್ನು ಪ್ರತಿಷ್ಠಾಪಿಸಿದ್ದಾರೆ ಎನ್ನಲಾಗಿದೆ. ಅವುಗಳೆಂದರೆ ಭೀಮಲಿಂಗೇಶ್ವರ, ಧರ್ಮಲಿಂಗೇಶ್ವರ, ನಕುಲ, ಸಹದೇವ, ಅರ್ಜುನ. ಭೀಮಲಿಂಗೇಶ್ವರ ದೇವಾಲಯ, ಕೆರೆಯ ಏರಿಯ ಮೇಲಿದ್ದು, ಈ ದೇವಾಲಯದ ಗೃಹದಲ್ಲಿ ಆಕರ್ಷಣೀಯ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲ್ಪಟ್ಟ ಶಿವಲಿಂಗವಿದೆ. ಚೌಕಾಕಾರದ ಪೀಠ, ಪೀಠದಲ್ಲಿ ಪಟ್ಟಿಕೆಗಳಿಂದ ನಿರ್ಮಾಣವಾಗಿದ್ದು, ತಲೆಯ ಭಾಗ ಉದ್ದವಾಗಿದೆ. ನವರಂಗದಲ್ಲಿಯು ಸಹ ಮತ್ತೊಂದು ಲಿಂಗವನ್ನು ಕಾಣಬಹುದು. ಇದು ವೃತ್ತಾಕಾರವಾಗಿದ್ದು, ಪೀಠ, ಪಟ್ಟಿಕೆಗಳಿವೆ. ಲಿಂಗವು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲ್ಪಟ್ಟಿದೆ. ಬ್ರಹ್ಮ ಸೂತ್ರ, ಜಲಾಹರಿ, ರುದ್ರಭಾಗ ಕಂಡುಬರುತ್ತದೆ. ಇದೇ ರೀತಿಯಲ್ಲಿ ಧರ್ಮರಾಯ ದೇವಾಲಯ ಕೆರೆಯ ಕೋಡಿಯ ಮೂಲೆಯಲ್ಲಿ ಪೂರ್ವಾಭೀಮುಖವಾಗಿದೆ. ಇದರಲ್ಲಿಯೂ ಸಹ ಲಿಂಗ ಕಂಡುಬರುತ್ತದೆ. ಇದು ಚಚೌಕಾಕಾರದ ಪೀಠ, ಪಟ್ಟಿಕೆಗಳು, ಬ್ರಹ್ಮಸೂತ್ರ, ಜಲಾಹರಿ, ಭಾಗಗಳನ್ನು ಒಳಗೊಂಡಿದೆ. ಹಾಗೆಯೇ ಅರಳೀಕೆರೆಯ ರಸ್ತೆಯ ಎಡಬದಿಯಲ್ಲಿ ಜಮೀನಿನಲ್ಲಿ ಪಶ್ಚಿಮಾಭಿಮುಖವಾಗಿ ನಕುಲ ದೇವಾಲಯವಿದ್ದು ಇದರಲ್ಲಿಯೂ ಸಹ ಸಾದಾರಣವಾದ ಪೀಠವಿಲ್ಲದ ಶಿವಲಿಂಗವಿದೆ, ಇದು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಬ್ರಹ್ಮಸೂತ್ರವನ್ನು ಮಾತ್ರ ಹೊಂದಿದೆ. ಹಾಗೆಯೇ ಪೂರ್ವಾಬಿಮುಖವಾಗಿ ಸಹದೇವ ದೇವಾಲಯವಿದ್ದು ಇದು ಚೌಕಾಕಾರದ ಪೀಠ ಪಟ್ಟಿಕೆಗಳು, ಬ್ರಹ್ಮಸೂತ್ರ, ಜಲಾಹರಿ, ಭಾಗಗಳನ್ನು ಒಳಗೊಂಡಿದೆ. ಧರ್ಮಪುರ ಪ್ರದೇಶದ ವೇಣುಕಲ್ಲು ಗುಡ್ಡ ಗ್ರಾಮದಲ್ಲಿಯೂ ಸಹ ಒಂದು ಈಶ್ವರ ದೇವಾಲಯವಿದೆ, ದೇವಾಲಯ ಪೂರ್ವಾಭಿಮುಖವಾಗಿದ್ದು, ಇದರಲ್ಲಿಯೂ ಸಹ ಆಕರ್ಷಣೀಯವಾದ ಶಿವಲಿಂಗವನ್ನು ಕಾಣಬಹುದು. ಇದು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು ಚಚೌಕಾಕಾರದ ಪೀಠ, ಪಟ್ಟಿಕೆಗಳನ್ನು, ಬ್ರಹ್ಮಸೂತ್ರ, ಜಲಾಹರಿಯನ್ನು ಒಳಗೊಂಡಿದೆ. ಕಣಜನಹಳ್ಳಿ ಗ್ರಾಮದ ಕೋಟೆಯ ದ್ವಾರ ಬಾಗಿಲ ಹಿಂಭಾಗದಲ್ಲಿ ಮತ್ತೊಂದು ಈಶ್ವರ ದೇವಾಲಯವಿದೆ. ಅದು ಪಾಳುಬಿದ್ದಿದ್ದು ಬಯಲಿನಲ್ಲಿ ಕಪ್ಪು ಗ್ರಾನೈಟ್ ಕಲ್ಲಿನ ಚಚೌಕಾಕಾರದ ಶಿವಲಿಂಗ ಮಾತ್ರ ಕಂಡುಬರುತ್ತದೆ. ಇದರಲ್ಲಿಯೂ ಸಹ ಬ್ರಹ್ಮಸೂತ್ರ, ಜಲಾಹರಿಯನ್ನು ಕಾಣಬಹುದು. ಅಬಿಮುಖವಾಗಿ ನಂದಿಯ ಶಿಲ್ಪವನ್ನು ಕಂಡರಿಸಲಾಗಿದೆ.

## ಭೈರವ

ಧರ್ಮಪುರ ಪರಿಸರದಲ್ಲಿ ಹಲವಾರು ಭೈರವನ ಶಿಲ್ಪಗಳು ಕಂಡುಬರುತ್ತವೆ. ಅವುಗಳಲ್ಲಿ ಅಂಬಲಗೆರೆ, ಧರ್ಮಪುರಗಳಲ್ಲಿರುವ ಭೈರವ ಶಿಲ್ಪಗಳು ಹೆಚ್ಚು ಆಕರ್ಷಣೀಯವಾಗಿವೆ. ಅಂಬಲಗೆರೆಯ ರಂಗನಾಥಸ್ವಾಮಿ ದೇವಾಲಯದ ಆವರಣದಲ್ಲಿರುವ ಭೈರವ ಶಿಲ್ಪ ಕಪ್ಪುಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದ್ದು ಸುಮಾರು ೪ ಅಡಿ ಎತ್ತರ ೨ ಅಡಿ ಅಗಲ ವಿಸ್ತೀರ್ಣದಲ್ಲಿರುವ ಭೈರವನು ಪೀಠದ ಮೇಲಿರುವನು. ಚತುರ್ಭುಜಧಾರಿಯಾದ ಭೈರವನು ತನ್ನ ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಖಡ್ಗ, ಡಮರುಗ, ತ್ರಿಶೂಲ, ಹಾಲಾ, ಕಪಾಲಗಳನ್ನು ಹಿಡಿದಿರುವನು. ಕಿರೀಟದಾರಿಯಾದ ಈತನು ಕಂಠಹಾರ, ಮಣಿಸರ, ಯಜ್ಞೋಪವಿತ, ತೋಳಬಂದಿ, ಕೈಕಡಗ, ಕಾಲಕಡಗ, ಕಠೀಬಂದ ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿದ್ದು ಶಿಲ್ಪದ ಸುತ್ತಲೂ ಪ್ರಭಾವಳಿ ಮಧ್ಯದಲ್ಲಿ ಕೀರ್ತಿಮುಖವಿದೆ. ಬಲಬದಿಯಲ್ಲಿ ಬೃಂಗಿ ಹಾಗೂ ಎಡಬದಿಯಲ್ಲಿ ನಾಯಿಯನ್ನು ತೋರಿಸಲಾಗಿದೆ. ನಾಯಿ ಭೈರವನು ಕೈಯಲ್ಲಿ ಹಿಡಿದಿರುವ ರುಂಡಕ್ಕೆ ಬಾಯಿ ಹಾಕಿರುವ ಉಬ್ಬು ಶಿಲ್ಪವಿದೆ.

ಇದೇ ತೆರನಾದ ಮತ್ತೊಂದು ಭೈರವನ ಶಿಲ್ಪ ಧರ್ಮಪುರದ ಧರ್ಮರಾಯ ದೇವಾಲಯದಲ್ಲಿದೆ ಆದರೆ ಇದು ಆಕಾರ ಮತ್ತು ಗಾತ್ರದಲ್ಲಿ ಸ್ವಲ್ಪ ಚಿಕ್ಕದಿದೆ ಇನ್ನುಳಿದಂತೆ ಚತುರ್ಭುಜಧಾರಿಯಾದ ಈತನು ಖಡ್ಗ, ತ್ರಿಶೂಲ, ಡಮರುಗ, ಕಪಾಲ, ಹಿಡಿದಿರುವನು. ಈತನು ಕಂಠಹಾರ, ಮಣಿಸರ, ಯಜ್ಞೋಪವಿತ, ರುಂಡಮಾಲೆ, ಕಾಲಕಡಗ, ಕೈಕಡಗ, ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವನು. ಶಿಲ್ಪದ ಬಲ ಕೆಳಬಾಗದಲ್ಲಿ ಬೃಂಗಿಯನ್ನು ಎಡಬಾಗದಲ್ಲಿ ನಾಯಿಯನ್ನು ತೋರಿಸಲಾಗಿದೆ. ನಾಯಿಯು ಭೈರವನು ಕೈಯಲ್ಲಿ ಹಿಡಿದಿರುವ ರುಂಡಕ್ಕೆ ಬಾಯಿ ಹಾಕಿರುವಂತೆ ಚಿತ್ರಿಸಲಾಗಿದೆ.

## ವೀರಭದ್ರ

ಧರ್ಮಪುರ ಪರಿಸರದಲ್ಲಿ ಹಲವಾರು ವೀರಭದ್ರನ ಶಿಲ್ಪಗಳು ಕಂಡುಬರುತ್ತವೆ. ಅವುಗಳಲ್ಲಿ ಧರ್ಮಪುರದ ವೀರಭದ್ರೇಶ್ವರ ದೇವಾಲಯುದಲ್ಲಿರುವ ವೀರಭದ್ರನ ಶಿಲ್ಪವು ಆಕರ್ಷಣೀಯವಾಗಿದೆ. ಶಿಲ್ಪವು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ನಿರ್ಮಾಣಗೊಂಡಿದೆ. ನಾಲ್ಕು ಅಡಿ ಎತ್ತರ ೨ ಅಡಿ ಅಗಲ ವಿಸ್ತೀರ್ಣದಲ್ಲಿರುವ ವೀರಭದ್ರ ತ್ರಿಭಂಗಿಯಲ್ಲಿರುವನು. ಚತುರ್ಭುಜಧಾರಿಯಾದ ಈತನು ತನ್ನ ಕೈಗಳಲ್ಲಿ ಖಡ್ಗ, ಬಿಲ್ಲು, ಭಾಣ, ಹಾಗೂ ಗುರಾಣಿಗಳನ್ನು ಹಿಡಿದಿರುವನು. ಕಿರೀಟದಾರಿಯಾದ ಈತನು ಯಜ್ಞೋಪವಿತ, ಕಾಲಕಡಗ, ಕಿಂಕಿಣಿ, ಕೈಕಡಗ, ಕೇಯುರ, ಕಠೀಬಂದ, ಕೊರಳಸರ ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವನು, ಶಿಲ್ಪದ ಸುತ್ತಲೂ ಪ್ರಭಾವಳಿಯದ್ದು ಮಧ್ಯದಲ್ಲಿ ಕೀರ್ತಿಮುಖವಿದೆ. ಶಿಲ್ಪಕ್ಕೆ ಸಂಬಂದಿಸಿದಂತೆ ಯಾವುದೇ ಕಾಲಮಾನವಿಲ್ಲದಿದ್ದರೂ ಶೈಲಿ ದೃಷ್ಟಿಯಿಂದ ಸುಮಾರು ೧೨-೧೩ನೇ ಶತಮಾನ

ಎಂದು ಹೇಳಬಹುದು. ಶಿಲ್ಪವನ್ನು ಶಿವಲಿಂಗದ ಪೀಠದ ಮೇಲೆ ಪ್ರತಿಷ್ಠಾಪಿಸಿರುವುದು ವಿಶೇಷವಾಗಿದೆ.

**ವೈಷ್ಣವ ಶಿಲ್ಪಗಳು**

ಧರ್ಮಪುರದ ಪರಿಸರದಲ್ಲಿ ಹಲವಾರು ವೈಷ್ಣವ ಶಿಲ್ಪಗಳಿವೆ. ಅವುಗಳಲ್ಲಿ ಮುಖ್ಯವಾಗಿ ವಿಷ್ಣು, ಕೇಶವ, ಕಾರ್ತೀಕೇಯ, ಇತ್ಯಾದಿ ಶಿಲ್ಪಗಳು ಪ್ರಮುಖವು. ಧರ್ಮಪುರ ರಂಗನಾಥದೇವಾಲಯದ ಆವರಣದಲ್ಲಿ ಇರುವ ವಿಷ್ಣುವಿನ ಶಿಲ್ಪವು ತುಂಬಾ ಪ್ರಮುಖವಾದುದು. ಈ ಶಿಲ್ಪವು ೩ಅಡಿ ಎತ್ತರ, ೨ಅಡಿ ಅಗಲ ವಿಸ್ತೀರ್ಣದಲ್ಲಿ ಕಪ್ಪು ಕಲ್ಲಿನಲ್ಲಿ ನಿರ್ಮಾಣಗೊಂಡಿದೆ. ಸ್ಥಾನಿಕ ಭಂಗಿಯಲ್ಲಿರುವ ವಿಷ್ಣುವು ಚತುರ್ಭುಜಧಾರಿಯಾಗಿರುವನು ಬಲ ಕೆಳಕೈ ಭಗ್ನಗೊಂಡಿದ್ದು ಹಿಂದಿನ ೨ ಕೈಗಳಲ್ಲಿ ಶಂಖ, ಚಕ್ರಗಳನ್ನು ಎಡ ಕೆಳಕೈಯಲ್ಲಿ ಗದೆಯನ್ನು ಹಿಡಿದಿರುವನು ವಿಷ್ಣುವಿನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರಿರುವರು ಕಿರೀಟದಾರಿಯಾಗಿರುವ ಈತನು ತಲೆಯ ಹಿಂಬದಿಯಲ್ಲಿ ಪ್ರಭಾವಳಿಯಿದ್ದು ಇನ್ನುಳಿದಂತೆ ಯಜ್ಞೋಪವಿತ, ಕಂಠಹಾರ, ಮಣಿಸರ, ಭುಜಬಂದಿ, ಕೈಕಡಗ, ಕಾಲಕಡಗ, ಇತ್ಯಾದಿ ಆಭರಣಗಳನ್ನು ಧರಿಸಿರುವನು. ಶಿಲ್ಪದ ಸುತ್ತಲೂ ಪ್ರತ್ಯೇಕವಾಗಿ ಮಾಡಿರುವ ಪ್ರಭಾವಳಿ ಇದೆ. ಪ್ರಬಾವಳಿಯಲ್ಲಿ ವಿವಿದ ಶಿಲ್ಪಗಳನ್ನು ಕಂಡರಿಸಲಾಗಿದೆ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ.

ಧರ್ಮಪುರದ ಕೆರೆಯ ಕೋಡಿಯ ಬಳಿಯಿರುವ ರಂಗನಾಥ ದೇವಾಲಯದ ಗರ್ಭಗೃಹದಲ್ಲಿ ರಂಗನಾಥ ಮತ್ತು ಲಕ್ಷ್ಮಿಯ ಶಿಲ್ಪಗಳಿವೆ. ಈ ಶಿಲ್ಪವು ಸಾಮಾನ್ಯವಾಗಿ ವೈಷ್ಣವ ಶಿಲ್ಪಗಳು, ಸಮಭಂಗಿಯಲ್ಲಿ ರಚನೆಗೊಂಡಿರುತ್ತವೆ. ಆದರೆ ಇಲ್ಲಿರುವ ರಂಗನಾಥ ಶಿಲ್ಪವು ದ್ವಿಭಂಗಿಯಲ್ಲಿರುವಂತೆ ಕಂಡುಬರುತ್ತದೆ. ಚತುರ್ಭುಜಧಾರಿಯಾಗಿರುವ ವಿಷ್ಣುವು ತನ್ನ ಹಿಂದಿನ ಕೈಗಳಲ್ಲಿ ಬಿಲ್ಲು, ಬಾಣ, ಮುಂದಿನ ಕೈಗಳಲ್ಲಿ ಆಭಯ, ಮತ್ತು ಗದೆಗಳನ್ನು ಹಿಡಿದಿರುವನು. ಸಾಮಾನ್ಯವಾಗಿ ವಿಷ್ಣುವಿನ ಶಿಲ್ಪಗಳಲ್ಲಿ ಪದ್ಮ, ಶಂಖ, ಚಕ್ರಗಳಿರುವುದನ್ನು ಕಾಣುತ್ತೇವೆ ಆದರೆ ಇಲ್ಲಿ ಬಿಲ್ಲು, ಬಾಣ, ಇರುವುದು ವಿಶೇಷವೆಂದೇ ಹೇಳಬಹುದು. ಪ್ರಾಯಶಃ ಈ ಬಿಲ್ಲು ಬಾಣಗಳನ್ನು ಹಿಡಿದಿರುವ ಕಲ್ಪನೆ ಶ್ರೀ ರಾಮನದು ಇರಬೇಕು, ಶ್ರೀರಾಮನು ಸಹ ವಿಷ್ಣುವಿನ ಒಂದು ಅವತಾರವೇ ಆಗಿರುವುದರಿಂದ ಶ್ರೀರಾಮನ ಕಲ್ಪನೆಯಲ್ಲಿ ಈ ಶಿಲ್ಪವನ್ನು ರಚನೆಯಾಗಿರುವ ಸಾಧ್ಯತೆ ಇದೆ. ವಿಷ್ಣು ಉದ್ದನೆಯ ಕಿರೀಟ, ಹಾಗೂ ಹಾರ, ವೈಜಯಂತಿಮಾಲ, ಭುಜಬಂಧಿ, ಕಾಲಕಡಗ, ಕೈಕಡಗ, ಕಠೀಬಂದ, ಕಂಠಹಾರ, ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವನು ಶಿಲ್ಪದ ಇಕ್ಕೆಲಗಳಲ್ಲಿ ಶ್ರೀದೇವಿ, ಭೂದೇವಿಯರಿರುವರು. ಶಿಲ್ಪಕ್ಕೆ ಬಳಸಿರುವ ಕಲ್ಲನ್ನು ಗಮನಿಸಿದರೆ ಕಪ್ಪು ಶಿಲೆ ಎಂದು ಹೇಳಬಹುದು ಹಾಗಾಗಿ ಇದರ ಕಾಲಮಾನ ಕ್ರಿ.ಶ. ಸುಮಾರು ೧೨-೧೩ನೇ ಶತಮಾನ ಎಂದು ಹೇಳಬಹುದು. ಇದೇ ರೀತಿಯ ಶಿಲ್ಪವನ್ನು ಹೊಸದುರ್ಗ ತಾಲ್ಲೂಕಿನ ಮತ್ತೋಡಿನಲ್ಲಿ

ಕಾಣಬಹುದು. ಮತ್ತೋಡಿವಿನಲ್ಲಿ ಸಹ ಇದೇ ರೀತಿ ಶಿಲ್ಪವಿದ್ದು ಸ್ಥಳೀಯರು ಬಾಣದ ರಂಗನಾಥ ಎಂದು ಕರೆಯುತ್ತಾರೆ.

ಅಂಬಲಗೆರೆಯ ಶ್ರೀರಂಗನಾಥಸ್ವಾಮಿ ದೇವಾಲಯದ ವಿಷ್ಣುವಿನ ಶಿಲ್ಪ ಪ್ರಸ್ತುತ ಅಧ್ಯಯನದ ಪ್ರದೇಶಧ ಶಿಲ್ಪಗಳಲ್ಲಿ ಮುಖ್ಯವೆನುಸುತ್ತದೆ. ಗರ್ಭಗೃಹದ ಮಧ್ಯದಲ್ಲಿರುವ ಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿರುವ ವಿಷ್ಣುವಿನ ಶಿಲ್ಪವಿದೆ. ಚತುರ್ಭಜಧಾರಿಯಾಗಿರುವ ವಿಷ್ಣುವು ತನ್ನ ಮುಂದಿನ ಎರೆಡು ಕೈಗಳು ಅಭಯ, ಹಾಗೂ ವರದ ಮುದ್ರೆಯಲ್ಲಿ ಮುಂದಿನ ಕೈಗಳಲ್ಲಿ ಶಂಖ ಮತ್ತು ಚಕ್ರ ಹಿಡಿದಿರುವನು. ಈತನು ಹಿಡಿದಿರುವ ಆಯುದಗಳು ಕ್ರಮಾಂಕದಿಂದ ಈತನ್ನು ಕೇಶವ ಎನ್ನಬಹುದು. ಶಿಲ್ಪದ ಸುತ್ತಲೂ ಪ್ರಭಾವಳಿಯಿದ್ದು ಪ್ರಭಾವಳಿಯಲ್ಲಿ ದಶಾವತಾರಗಳನ್ನು ತೋರಿಸಲಾಗಿದೆ. ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರಿರುವರು, ಕಿರೀಟದಾರಿಯಾದ ಈತನು ಕೊರಳಹಾರ, ಕಠೀಬಂದ, ಯಜ್ಞೋಪವಿತ, ಕೈಕಡಗ, ಕಾಲಕಡಗ, ಕೇಯುರ, ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವನು. ಪೀಠದಲ್ಲಿ ವಿಷ್ಣುವಿನ ವಾಹನವಾದ ಗರುಡನನ್ನು ತೋರಿಸಲಾಗಿದೆ.

ಧರ್ಮಪುರ ಕೆರೆಯ ಕೋಡಿಯ ಬಯಲಿನಲ್ಲಿ ಅನಾಥವಾಗಿ ನಿಲ್ಲಿಸಲ್ಪಟ್ಟಿರುವ ಶಿಲ್ಪವೂಂದು ಇದೆ ಸ್ಥಳೀಯರು ಈ ಶಿಲ್ಪವನ್ನು ಶ್ರವಣಕುಮಾರ ಎನ್ನುವ ಹೆಸರಿನಿಂದ ಪೋಜಿಸಲ್ಪಡುತ್ತಿರುವರು. ಆದರೆ ಈ ಶಿಲ್ಪದ ಪ್ರತೀಮಾ ಲಕ್ಷಣಗಳ ಆದಾರದ ಮೇಲೆ ಗಮನಿಸಿದರೆ ಸೂರ್ಯ ಶಿಲ್ಪವೆಂದು ಹೇಳಲಾಗಿದ್ದು ಬಹುತೇಕ ಶಿಲ್ಪವು ಭಗ್ನಗೊಂಡಿದೆ. ಈ ಶಿಲ್ಪವು ವೈಷ್ಣವ ಶಿಲ್ಪವೆಂದು ಹೇಳಲು ಸಾಧ್ಯತೆ ಇದೆ. ಶಿಲ್ಪವು ಬೃಹದಾಕಾರವಾಗಿದ್ದು ಸುಮಾರು ೫ ಅಡಿ ಎತ್ತರವಿದೆ. ಸ್ಥಾನಿಕ ಭಂಗಿಯಲ್ಲಿರುವ ಈತನು ಚತುರ್ಭುಜಧಾರಿಯಾಗಿದ್ದಾನೆ. ಈತನ ನಾಲ್ಕು ಕೈಗಳು ಭಗ್ನಗೊಂಡಿವೆ. ಕಿರೀಟದಾರಿಯಾದ ಈತನ ತಲೆಯ ಮೇಲೆ ಪ್ರಭಾವಳಿ ಇದೆ ಇನ್ನುಳಿದಂತೆ ಸರಳ ಅಲಂಕೃತವಾಗಿದ್ದು ಕೊರಳಹಾರ, ಯಜ್ಞೋಪವಿತ, ಕಠೀಬಂದಗಳನ್ನು ಧರಿಸಿರುವನು. ಶಿಲ್ಪಗಳ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರಿರುವರು. ಶಿಲ್ಪಕ್ಕೆ ಬಳಸಿರುವ ಮರಳು ಮಿಶ್ರಿತ ಗಟ್ಟಿ ಕಲ್ಲು ಆಗಿದ್ದರಿಂದ ಹೆಚ್ಚಿನ ಅಲಂಕಾರ ಇಲ್ಲದೆ ಇರುವುದನ್ನು ಗಮನಿಸಿದರೆ ಇದರ ಕಾಲಮಾನ ಕ್ರಿ.ಶ. ಸು. ಕ್ರಿ ಶ. ೧೬-೧೭ನೇ ಶತಮಾನ ಎಂದು ಹೇಳಬಹುದು.

### ಶಾಕ್ತ ಶಿಲ್ಪಗಳು

ಪ್ರಸ್ತುತ ಅಧ್ಯಯನ ಪ್ರದೇಶವಾದ ಧರ್ಮಪುರ ಪರಿಸರದಲ್ಲಿ ಶಾಕ್ತ ಶಿಲ್ಪಗಳು ಸಹ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕಾಳಿ, ದುರ್ಗಿ, ಲಕ್ಷ್ಮಿ, ಭುವನೇಶ್ವರಿ, ಚಾಮುಂಡೇಶ್ವರಿ, ಇತ್ಯಾದಿ ಶಿಲ್ಪಗಳು ಪ್ರಮುಖವಾದವು. ಶಿಲ್ಪಗಳು ಧರ್ಮಪುರದ ಪಂಚಲಿಂಗೇಶ್ವರ ಪ್ರೌಡಶಾಲೆಯ ಮುಂಬಾಗದಲ್ಲಿ ಹಲವಾರು ಶಿಲ್ಪಗಳನ್ನು ಸಂಗ್ರಹಿಸಲಾಗಿದೆ.

ಅವುಗಳಲ್ಲಿ ಏಕಾಕ್ಷಶ್ವರಿ ಎಂದು ಕರೆಯಲ್ಪಡುವ ಶಿಲ್ಪವು ತುಂಬಾ ಆಕರ್ಷಕವಾಗಿದ್ದು ಕಪ್ಪು ಕಲ್ಲಿನಲ್ಲಿ ನಿರ್ಮಾಣಗೊಂಡಿದೆ. ಚತುರ್ಭುಜಧಾರಿಯಾದ ದೇವತೆಯು ತನ್ನ ಕೈಗಳಲ್ಲಿ ಖಡ್ಗ, ತ್ರಿಶೂಲ, ಡಮರುಗ, ಪಲಗಳನ್ನು ಹಿಡಿದಿರುವಳು. ಭುಜಭಂದಿ, ಕಾಲಕಡಗ, ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವಳು, ಇದೇ ರೀತಿಯ ಲಕ್ಷಣಗಳನ್ನು ಹೊಂದಿರುವ ಮತ್ತೊಂದು ಶಿಲ್ಪ ಇಲ್ಲಿಯೆ ಇದೆ.

ಧರ್ಮರಾಯನ ದೇವಾಲಯದ ಎಡಭಾಗದಲ್ಲಿ ಕಪ್ಪುಕಲ್ಲಿನಲ್ಲಿ ನಿರ್ಮಿಸಿರುವ ಭೈರವಿ ಶಿಲ್ಪವನ್ನು ಕಾಣಲಾಗಿದ್ದು ಈ ಶಿಲ್ಪವು ಸುಮಾರು ೩ ಅಡಿ ಎತ್ತರ ೨ ಅಡಿ ಅಗಲ ವಿಸ್ತೀರ್ಣವಿದೆ. ಈ ಶಿಲ್ಪದಲ್ಲಿ ಭೈರವಿ ಆರು ಕೈಗಳನ್ನು ಹೊಂದಿದ್ದು ರೌದ್ರಾವತಾರ ರೋಪದಲ್ಲಿರುವುದನ್ನು ಕಾಣಬಹುದು. ಕ್ರಮವಾಗಿ ಬಲ ಮೂರು ಕೈಗಳು ಮೇಲಕ್ಕೆತ್ತಿದ್ದು ಎಡಕೈಗಳು ಕೆಳಗೆ ಇಳಿಬಿಟ್ಟಿರುವಂತೆ ಕಂಡುಬರುತ್ತದೆ. ಕೈಗಳಲ್ಲಿ ಖಡ್ಗ, ಪರಶು, ಪುಷ್ಪ, ಇತ್ಯಾದಿ ಆಯುದಗಳನ್ನು ಹಿಡಿದಿರುವಳು, ಶಿಲ್ಪದ ಸುತ್ತಲೂ ಪ್ರಭಾವಳಿ, ಕಿರೀಟದಾರಿಯಲ್ಲಿರುವುದನ್ನು ಕಾಣಲಾಗಿದೆ. ಕೊರಳಹಾರ, ಭುಜಬಂದಿ, ಕೈಕಡಗ, ಕಾಲಕಡಗ, ರುಂಡಮಾಲೆ, ಧರಿಸಿರುವುದನ್ನು ಚಿತರಿಸಲಾಗಿದೆ. ಈ ಶಿಲ್ಪಕ್ಕೆ ಸಂಭಂದಿಸಿದಂತೆ ಯಾವುದೇ ಕಾಲಮಾನವಿಲ್ಲದಿದ್ದರು ವಾಸ್ತುಶೈಲಿಯ ಧೃಷ್ಟಿಯಿಂದ ಸುಮಾರು ಕ್ರಿ.ಶ. ೧೩-೧೪ನೇ ಶತಮಾನ ಎಂದು ಹೇಳಬಹುದು.

ಧರ್ಮಪುರದ ರಂಗನಾಥಸ್ವಾಮಿಯ ದೇವಾಲಯದ ಗರ್ಭಗೃಹದಲ್ಲಿ ರಂಗನಾಥ ಶಿಲ್ಪದ ಎಡಬದಿಯಲ್ಲಿ ಲಕ್ಷ್ಮಿಯ ಶಿಲ್ಪವನ್ನು ಕಾಣಲಾಗಿದ್ದು, ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದೆ. ಸಂಪತ್ತಿನ ಆದಿದೇವತೆಯಾದ ಲಕ್ಷ್ಮಿಯನ್ನು ಕಮಲದ ಮೇಲೆ ಕೂರಿಸಿದೆ. ವಿಷ್ಣುವಿನ ಪತ್ನಿಯಾದ ಲಕ್ಷ್ಮಿಯನ್ನು ವಿಷ್ಣುವಿನೊಂದಿಗೆ ಬಿಡಿಯಾಗಿ ಚಿತ್ರಿಸಿರುವುದನ್ನು ಕಂಡುಬರುತ್ತದೆ. ಶಿಲ್ಪವು ನಾಲ್ಕು ಕೈಗಳೊಂದಿದ್ದು ಅಭಯ, ಅಸ್ತ, ಶ್ರೀಫಲ, ಪದ್ಮ, ವರದ ಮುದ್ರೆಯಲ್ಲಿರುವಳು, ಕಂಠಾಭರಣ, ಭುಜಬಂದಿ, ಕೈಕಡಗ, ಕಿರೀಟದಾರಿಯಾಗಿದ್ದು ಸುತ್ತಲೂ ಪ್ರಭಾವಳಿಯನ್ನು ಕಾಣಬಹುದು.

ಧರ್ಮಪುರದಿಂದ ಹಿರಿಯೂರಿಗೆ ಹೋಗುವ ಮಾರ್ಗದ ಮಧ್ಯದಲ್ಲಿ ಸುಮಾರು ೬ಕಿ.ಮೀ ದೂರದಲ್ಲಿ ಅಬ್ಬಿನಹೊಳೆ ಗ್ರಾಮವಿದ್ದು ಗ್ರಾಮದ ಊರ ಹೊರವಲಯದ ಉತ್ತರದಿಕ್ಕಿನಲ್ಲಿ ಏಳುಮಂಧ್ಯಕ್ಕನ ದೇವಾಸ್ಥಾನದಲ್ಲಿ ಕಪ್ಪು ಬಳಪದ ಕಲ್ಲಿನಲ್ಲಿ ಕೆತ್ತಲ್ಪಟ್ಟಿರುವ ಸಪ್ತಮಾತೃಕಾ ಶಿಲ್ಪವಿದ್ದು, ಶಿಲ್ಪಗಳನ್ನು ಒಂದೇ ಪಟ್ಟಿಕೆಯಲ್ಲಿ ತೋರಿಸಲಾಗಿದೆ. ಬ್ರಾಹ್ಮಿ, ಮಹೇಶ್ವರಿ, ಕೌಮಾರ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡ, ಶಿಲ್ಪಗಳನ್ನು ಕಂಡರಿಸಲಾಗಿದೆ. ಇವರುಗಳು ಸವ್ಯ ಲಲಿತಾಸನದಲ್ಲಿ ಕುಳಿತಿರುವರು. ಪೀಠದಲ್ಲಿ ಅವರುಗಳ ವಾಹನಗಳನ್ನು ತೋರಿಸಲಾಗಿದೆ. ಇವರು ವಸ್ತ್ರದಾರಿಗಳಾಗಿದ್ದು ವಿವಿದ ಆಭರಣಗಳಿಂದ ಅಲಂಕೃತಗೊಂಡಿರುವರು. ಈ ಶಿಲ್ಪವು ಬಹುತೇಕವಾಗಿ ಭಗ್ನಗೊಂಡಿದೆ.

### ೫.೩ ವೀರಗಲ್ಲುಗಳು

ವೀರ ಎನ್ನುವುದು ಮೂಲತಃ ಸಂಸ್ಕೃತ ಭಾಷೆಯ ಪದವಾಗಿದ್ದು ಇದು ವ್ಯಕ್ತಿಯ ಪರಾಕ್ರಮ, ಶೌರ್ಯ, ಶಕ್ತಿ ಗುಣಗಳನ್ನು ಸೂಚಿಸುವ ಅರ್ಥದಲ್ಲಿ ಬಳಸಲಾಗುತ್ತದೆ. ಇಂಗ್ಲೀಷ್ ಭಾಷೆಯಲ್ಲಿ ಈ ಪದಕ್ಕೆ ಸಮಾನಾರ್ಥ ಪದವಾಗಿ 'Hero' ಎಂಬ ಪದವನ್ನು ಬಳಸುವುದು ರೂಪದಲ್ಲಿದೆ. ಮೂಲತಃ ಗ್ರೀಕ್ ಭಾಷೆಯಿಂದ ಇಂಗ್ಲೀಷ್ ಭಾಷೆಗೆ ಬಂದ ಪದವಾಗಿದೆ. ಇದು ಕಾಲದಿಂದ ಕಾಲಕ್ಕೆ ಹೆಚ್ಚು ಅರ್ಥ ವ್ಯಾಪ್ತಿಯನ್ನು ಪಡೆಯುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ.

ಈ ಪದವು ದೈವಿಕ ಶಕ್ತಿಯುಳ್ಳ ಮನಷ್ಯ ದೇವತೆಗಳಿಂದ ಬಂದಿದ್ದು ಶೌರ್ಯ, ಸಾಹಸ ಮತ್ತು ದಕ್ಷತೆ ಮುಂತಾದ ಗುಣಗಳುಳ್ಳ ಮನುಷ್ಯ ಎಂಬ ಅರ್ಥದಲ್ಲಿ ಬಳಸಿರುವುದು ಕಂಡು ಬರುತ್ತದೆ. ನಂತರದ ದಿನಗಳಲ್ಲಿ ಸಾಮಾಜಿಕ ಉತ್ತಮ ಕಾರ್ಯಗಳನ್ನು ಮಾಡಿದ ಮಾನವರನ್ನು ವೀರ ಎನ್ನುವ ಅರ್ಥದಲ್ಲಿ ಕರೆದಿರುವುದನ್ನು ಕಾಣುತ್ತೇವೆ.

ಭಾರತೀಯ ಸಮಾಜದಲ್ಲಿ, ಹಲವಾರು ಸಂದರ್ಭದಲ್ಲಿ ಸಾಮಾಜಿಕ ಹಿತಕಾರ್ಯ ಮಾಡಿದ, ಉತ್ತಮ ಕೆಲಸಗಳನ್ನು ಮಾಡುವ, ಯೋಧನ ಕೆಲಸಗಳಲ್ಲಿ ಭಾಗವಹಿಸುವ ವ್ಯಕ್ತಿಗೆ ಈ ರೀತಿಯಾಗಿ ಕರೆಯಲಾಗುತ್ತದೆ. ವೀರ ಮತ್ತು ಮಹಾಸತಿಗಲ್ಲುಗಳನ್ನು ನೆಡುವಾಗ ಅವುಗಳನ್ನು ಯಾವ ಉದ್ದೇಶಕ್ಕಾಗಿ ಸ್ಥಾಪಿಸಿದ್ದಾರೆ ಎಂಬುದು ಬಹುಮುಖ್ಯವಾದ ಸಂಗತಿಯಾಗಿರುತ್ತದೆ. ವೀರಗಲ್ಲುಗಳನ್ನು ಸಾಮಾನ್ಯವಾಗಿ ಲೌಕಿಕ ಮತ್ತು ಪರಮಾದಿಕಾರ ದೃಷ್ಟಿಗಳಿಂದ ಕಾಣಲಾಗುತ್ತದೆ.[೧೪] ವೀರನು ಕಾಳಗದಲ್ಲಿ ಹೋರಾಡಿ ಮಡಿದಿರುವುದರ ಬಗ್ಗೆ ಹಾಗೆಯೇ ವೀರನು ಗೋವುಗಳನ್ನು ಅಪಾಯದ ಸಂದರ್ಭದಲ್ಲಿ ಸಂರಕ್ಷಿಸಿರುವುದರ ಬಗ್ಗೆ, ವೀರನು ಗಡಿಯನ್ನು ದಾಳಿಕೋರರಿಂದ ಹೋರಾಡಿ ಮಡಿದಿರುವುದರ ಬಗ್ಗೆ, ತನ್ನ ಸತಿಯೂ ಸಹ ಸಹಗಮನ ಅನುಸರಿಸಿ ಇಡೀ ಲೋಕಕ್ಕೆ ತಿಳಿಯಲೆಂದು ಸತಿಗಲ್ಲುಗಳನ್ನು ನಿಲ್ಲಿಸಿರುವುದನ್ನು ನಾವು ಕಾಣುತ್ತೇವೆ. ಈ ವೀರಗಲ್ಲುಗಳನ್ನು ಸತ್ತ ವ್ಯಕ್ತಿಯ ವೀರನ ಮಕ್ಕಳ ಅಥವಾ ವೀರನ ರಕ್ತ ಸಂಬಂಧಿಗಳು ಇನ್ನು ಕೆಲ ಸಂದರ್ಭದಲ್ಲಿ ಆ ರಾಜನು ವೀರಗಲ್ಲುಗಳನ್ನು ಹಾಕಿಸಿರುವುದನ್ನು ಕಾಣುತ್ತೇವೆ. ಇನ್ನೂ ಕೆಲ ಸಂದರ್ಭದಲ್ಲಿ ವೀರನ ಅಣ್ಣ ತಮ್ಮಂದಿರುಗಳು, ಊರಿನ ಪ್ರಮುಖ ಗಣ್ಯವ್ಯಕ್ತಿಗಳು, ವೀರನ ನೆನಪಿಗಾಗಿ ವೀರಗಲ್ಲುಗಳನ್ನು ಹಾಕಿಸಿರುವುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ.[೧೫] ಅನೇಕ ವೀರಗಲ್ಲುಗಳಲ್ಲಿ ಶಾಸನಗಳ ಪಾಠ ದೊರಕಿದ್ದು ಅವುಗಳ ಸಹಾಯದಿಂದ ವೀರಗಲ್ಲುಗಳ ಉದ್ದೇಶ, ಹಾಕಿಸುತ್ತಿದ್ದವರ ವಿವರ ಇತ್ಯಾದಿ ಅಂಶಗಳು ತಿಳಿದು ಬರುತ್ತವೆ. ಸಮಾಜದ ಒಳತಿಗಾಗಿ ಗ್ರಾಮದ ಅಥವಾ ಒಂದು ಪ್ರದೇಶದ, ರಾಜ್ಯದ, ಹಿತದೃಷ್ಟಿಯಿಂದ ಯುವಕರಲ್ಲಿ ಸ್ವಾಭಿಮಾನ ತೋರಿಸುವ ಉದ್ದೇಶದಿಂದ ಅಡಳಿತಾಧಿಕಾರಿಗಳು, ಸ್ಥಳೀಯರು, ಅಥವ ರಾಜರು ಈ ರೀತಿಯ ವೀರಗಲ್ಲುಗಳನ್ನು ಹಾಕಿಸಿರುವುದು ಕಂಡುಬರುತ್ತದೆ.

ಕೆಲವು ಸಂದರ್ಭದಲ್ಲಿ ತಾವು ಸಾಕಿದ ಪ್ರೀತಿಯ ಪ್ರಾಣಿಗಳ ನೆನಪಿಗಾಗಿ ಒಡೆಯರು ಹಾಕಿಸಿದ ವೀರಗಲ್ಲುಗಳು ಕಂಡು ಬರುತ್ತವೆ.[೧೬] ಕಾಳಗದಲ್ಲಿ ಹೋರಾಡಿ ಮಡಿದ ಪರಾಕ್ರಮ ಮತ್ತು ಶೌರ್ಯವನ್ನು ಸಮಾಜಕ್ಕೆ ತಿಳಿಸುವುದಕ್ಕೋಸ್ಕರ ಈ ರೀತಿಯ ವೀರಗಲ್ಲುಗಳನ್ನು ಹಾಕಿಸಿರುವುದು ಕಂಡುಬರುತ್ತದೆ. ಹತಕೂರಿವಿನಲ್ಲಿ ಒಂದು ಶಾಸನೋಕ್ತ ವೀರಗಲ್ಲನ್ನು ಕಾಣಲಾಗಿದ್ದು, ಈ ವೀರಗಲ್ಲಿನ ಶಾಸನದ ಆಧಾರದಿಂದ ಬೇಟೆಯಲ್ಲಿ ಸತ್ತ ಪ್ರೀತಿಪಾತ್ರ ನಾಯಿಯ ವಿವರವನ್ನು ತಿಳಿಯಬಹುದಾಗಿದೆ.[೧೭]

ವೀರಗಲ್ಲುಗಳನ್ನು ಸಾಮಾನ್ಯವಾಗಿ ದೇವಾಲಯಗಳ ಬಳಿ, ಕೆರೆಯ ಏರಿಯ ಬಳಿ, ಜಮೀನುಗಳಲ್ಲಿ ಕವಲುದಾರಿಗಳಲ್ಲಿ, ಊರಿನ ಚಾವಡಿಗಳ ಮುಂದೆ, ಪಂಚಾಯಿತಿ ಕಟ್ಟೆಗಳ ಮುಂದೆ ನಿಲ್ಲಿಸಿರುವುದನ್ನು ಕಾಣುತ್ತೇವೆ. ಕಾರಣವೇನೆಂದರೆ, ಜನಸಾಮಾನ್ಯರ ಕಣ್ಣಿಗೆ ಬೀಳಬೇಕೆನ್ನುವ ಉದ್ದೇಶದಿಂದ ಈ ರೀತಿಯಾಗಿ ವೀರಗಲ್ಲುಗಳನ್ನು ನಿಲ್ಲಿಸಿರುವ ಸಾಧ್ಯತೆಯಿದೆ. ಕೆಲವು ಬಾರಿ ಹೊಲ ಗದ್ದೆಗಳಲ್ಲಿ ವೀರಗಲ್ಲುಗಳನ್ನು ನಿಲ್ಲಿಸಿರುತ್ತಾರೆ. ಏಕೆಂದರೆ ವೀರನಿಗೆ ಬಿಟ್ಟ ದಾನ ದತ್ತಿಯ ವಿಚಾರವಾಗಿ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು ಎನ್ನುವ ವಿವರ ಹಲವಾರು ಶಾಸನೋಕ್ತ ವೀರಗಲ್ಲುಗಳಿಂದ ತಿಳಿದುಬರುತ್ತದೆ.[೧೮] ಇನ್ನು ಕೆಲವೊಮ್ಮೆ ವೀರಗಲ್ಲುಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸ್ಥಾನಪಲ್ಲಟ ಹೊಂದಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

ಯುದ್ಧದಲ್ಲಿ ಅಥವಾ ಕಾಳಗದಲ್ಲಿ ಹೋರಾಡಿ ಮಡಿದ ವೀರನ ಜ್ಞಾಪಕಾರ್ಥವಾಗಿ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು ಎನ್ನುವುದು ಸ್ಪಷ್ಟಸಂಗತಿ.[೧೯] ಈ ಹಿನ್ನೆಲೆಯಲ್ಲಿ ವೀರಗಲ್ಲುಗಳಲ್ಲಿ ಹಲವಾರು ವಿಧಗಳಿದ್ದು ಅವುಗಳಲ್ಲಿ ಪ್ರಮುಖವಾದ ವಿಧಗಳನ್ನು ಈ ಮುಂದಿನಂತೆ ನೋಡಬಹುದು.

೧. ಕಳ್ಳರೊಡನೆ ಹೋರಾಟ ಮಾಡಿ ಮಡಿದ ವೀರರ ವಿರಗಲ್ಲುಗಳು,

೨. ಸೀಮಾ ಸಂಬಂಧ ಕಾಳಗದಲ್ಲಿ ಹೋರಾಡಿ ಮಡಿದ ವೀರರ ವೀರಗಲ್ಲುಗಳು

೩. ನೀರಿನಲ್ಲಿ ಸತ್ತ ವೀರರ ವೀರಗಲ್ಲುಗಳು

೪. ಬೇಟೆಯಲ್ಲಿ ಸತ್ತ ವೀರರ ವೀರಗಲ್ಲುಗಳು

೫. ಕಾಳಗದಲ್ಲಿ ಸತ್ತ ವೀರರ ವೀರಗಲ್ಲುಗಳು

೬. ಯುದ್ಧದಲ್ಲಿ ಸತ್ತ ವೀರರ ವೀರಗಲ್ಲುಗಳು.

೭. ಹಂದಿಯ ಬೇಟೆಯಲ್ಲಿ ಸತ್ತ ವೀರರ ವೀರಗಲ್ಲುಗಳು.

೮. ಗೋ ಸಂರಕ್ಷಣೆಯಲ್ಲಿ ಮಡಿದ ವೀರರ ವೀರಗಲ್ಲುಗಳು

ಈ ರೀತಿಯಾಗಿ ಕೆಲವು ಅಂಶಗಳಿಗೆ ಅನುಗುಣವಾಗಿ ಹೋರಾಟ ಮಾಡಿ ಮಡಿದ ವೀರರ ನೆನಪಿಗಾಗಿ ವೀರರ ವೀರಗಲ್ಲುಗಳ ವಿಧಗಳನ್ನು ಕಾಣಬಹುದಾಗಿದೆ.[೨೦]

ಶಿಲ್ಪ : ವೀರಗಲ್ಲು

ಸ್ಥಳ : ಪಂಚಲಿಂಗೇಶ್ವರ ಮಹಾವಿದ್ಯಾಲಯದ ಮುಂಭಾಗ

ಗ್ರಾಮ : ಧರ್ಮಪುರ, ಹಿರಿಯೂರು (ತಾ.)

ಕಾಲಮಾನ : ಕ್ರಿ.ಶ. ಸು. ೧೦ನೇ ಶತಮಾನ

ಧರ್ಮಪುರ ಗ್ರಾಮದ ಪಂಚಲಿಂಗೇಶ್ವರ ಮಹಾ ವಿದ್ಯಾಲಯದ ಮುಂಭಾಗ ಇರುವಂತಹ ಈ ವೀರಗಲ್ಲು ರಾಷ್ಟ್ರಕೂಟ ಮತ್ತು ನೊಳಂಬರ ಆಳ್ವಿಕೆಯ ಸಮಕಾಲೀನದ್ದಾಗಿದೆ. ಇದನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ೩ ಹಂತಗಳಲ್ಲಿ ಕೆತ್ತನೆ ಮಾಡಲಾಗಿದೆ. ಮೊದಲನೇ ಹಂತದಲ್ಲಿ ವೀರನು ಶತ್ರುಗಳಿಗೆ ಅಭಿಮುಖವಾಗಿ ನಿಂತು ಬಿಲ್ಲಿನಿಂದ ಬಾಣ ಪ್ರಯೋಗ ಮಾಡುತ್ತಿರುವ ದೃಶ್ಯವಿದೆ. ವೀರನ ಬಲಭುಜದ ಹಿಂದೆ ಬತ್ತಳಿಕೆಗಳಿವೆ. ಅವರ ಎದುರಾಗಿ ಒಬ್ಬ ಶತ್ರು ನಿಂತಿದ್ದಾನೆ. ವೀರನ ಬೆನ್ನ ಹಿಂದೆ ಲಂಬವಾಗಿ ನಾಲ್ಕು ದನಗಳು ನಿಂತಿರುವ ದೃಶ್ಯ ಇದೆ. ಹಾಗಾಗಿ ಇದೊಂದು ಗೋಗ್ರಹಣ ವೀರ ಶಿಲ್ಪವಾಗಿದೆ ಎಂದು ಹೇಳಬಹುದು. ಎರಡನೇ ಹಂತದಲ್ಲಿ ವೀರನ ತೋಳುಗಳನ್ನು ಭುಜದ ಮೇಲೆ ಹೊತ್ತು ಅಪ್ಸರೆಯರು ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಮೂರನೇ ಹಂತದಲ್ಲಿ ಮಡಿದಂತಹ ವೀರನು ಪೀಠದ ಮೇಲೆ ಕುಳಿತಿದ್ದಾನೆ. ಆತನ ಎಡಬಲಭಾಗದಲ್ಲಿ ಸೇವಕಿಯರಿಬ್ಬರು ಚಾಮರವನ್ನು ಬೀಸುತ್ತಾ ನಿಂತಿದ್ದಾರೆ. ಬಲಭಾಗದಲ್ಲಿ ಕಮಂಡಲವಿದೆ. ಮೇಲಿನ ಭಾಗ ಅರ್ಧ ವೃತ್ತಾಕಾರದಲ್ಲಿದೆ. ಇದರಲ್ಲಿ ಶಾಸನದ ಪಾಠವನ್ನು ಕಾಣಲಾಗಿದ್ದು, ಶಾಸನದ ಪಾಟ ತ್ರುಟಿತಗೊಂಡಿದೆ.

ಈ ವೀರಗಲ್ಲಿನಲ್ಲಿ ವೀರನು ವೀರಗಚ್ಚೆಯನ್ನು ಧರಿಸಿದ್ದಾನೆ. ಕಾಲ್ಗಡಗ, ಕೊರಳಹಾರ, ತೋಳಬಂದಿ, ಕಿವಿ ಓಲೆ, ಕಂಠಹಾರ, ಕೈಕಡಗವನ್ನು ಧರಿಸಿದ್ದಾನೆ. ವೀರನು ಗೋವುಗಳ ರಕ್ಷಣೆಗಾಗಿ ಹೋರಾಟ ಮಾಡುವಂತಹ ಸಂದರ್ಭದಲ್ಲಿ ಹೋರಾಡಿ ಮಡಿದ ನೆನಪಿಗಾಗಿ ಈ ವೀರಗಲ್ಲನ್ನು ನಿಲ್ಲಿಸಿರುವುದರಿಂದ ಇದನ್ನು ಗೋಗ್ರಹಣ ವೀರಗಲ್ಲು ಎಂದು ಕರೆಯಬಹುದಾಗಿದೆ.

ಶಿಲ್ಪ : ವೀರಗಲ್ಲು

ಸ್ಥಳ : ಎಳುಮಂಧ್ಯಕ್ಕನ ದೇವಸ್ಥಾನದಲ್ಲಿ

ಗ್ರಾಮ : ಅಬ್ಬಿನಹೊಳೆ

ಕಾಲಕಮಾನ : ಕ್ರಿ.ಶ. ಸು. ೧೦–೧೧ನೇ ಶತಮಾನ

ಅಬ್ಬಿನಹೊಳೆ ಗ್ರಾಮವು ಧರ್ಮಪುರ ಕೇಂದ್ರದಿಂದ ಹಿರಿಯೂರಿಗೆ ಹೋಗುವ ಮಾರ್ಗದಲ್ಲಿ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಊರ ಹೊರವಲಯದ

ಜಮೀನಿನಲ್ಲಿ ಎಳುಮಾದಕ್ಕನ ದೇವಸ್ಥಾನವಿದ್ದು ಈ ದೇವಸ್ಥಾನದಲ್ಲಿ ಇರುವಂತಹ ವೀರಗಲ್ಲು ಇದಾಗಿದೆ, ಇದು ರಾಷ್ಟ್ರಕೂಟ ನೊಳಂಬರ ಕಾಲಕ್ಕೆ ಸೇರಿದ್ದಾಗಿದ್ದು, ಬಿಳಿ ಬಳಪದಕಲ್ಲಿನಲ್ಲಿ ೩ ಹಂತಗಳಲ್ಲಿ ಕೆತ್ತಲ್ಪಟ್ಟಿದೆ. ಮೊದಲನೇ ಹಂತದಲ್ಲಿ ವೀರನು ಕುದುರೆಯ ಮೇಲೆ ಕುಳಿತು ಎದುರಿಗೆ ಬರುತ್ತಿರುವ ವೈರಿಗೆ ಈಟಿಯಿಂದ ತಿವಿಯಲು ಪ್ರಯತ್ನಿಸುತ್ತಿರುವ ದೃಶ್ಯವಿದೆ. ಎದುರಿನಲ್ಲಿ ವೈರಿಯು ಬಿಲ್ಲು ಬಾಣ ಹಿಡಿದು ಹೊಡೆಯಲು ಪ್ರಯತ್ನಿಸುತ್ತಿರುವಂತಿದೆ, ವೀರನ ಕಡೆಗೆ ಬಾಣ ನಾಟಿರುವುದು ಕಾಣಬಹುದು. ವೀರನು ತುರುಬುಕಟ್ಟಿದ್ದಾನೆ. ಕೈಕಡಗ, ಕೊರಳಹಾರ, ಕಾಲಕಡಗ, ವೀರಗಚ್ಚೆಯನ್ನು ಧರಿಸಿದ್ದಾನೆ. ೨ನೇ ಹಂತದಲ್ಲಿ ವೀರನು ಮಂಟಪದಲ್ಲಿ ಕುಳಿತಿದ್ದಾನೆ. ಅಪ್ಸರೆಯರು ವೀರನನ್ನು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯ ಕಾಣಬಹುದು. ಅಪ್ಸರೆಯರು ಕಿರೀಟ ಧರಿಸಿದ್ದಾರೆ. ಕಂಠಹಾರ, ಕೈಕಡಗ, ತೋಳುಬಂದಿ, ವೀರಗಚ್ಚೆಯನ್ನು ಧರಿಸಿದ್ದಾರೆ. ಮೂರನೇ ಹಂತದಲ್ಲಿ ಪೀಠವುಳ್ಳ ಲಿಂಗ, ಎಡಭಾಗದಲ್ಲಿ ವೀರನು ಕುಳಿತಿದ್ದಾನೆ. ಬಲಭಾಗದಲ್ಲಿ ನಂದಿ, ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ದೃಶ್ಯಾವಳಿಯನ್ನು ಕಾಣಬಹುದಾಗಿದ್ದು, ಮೇಲ್ಭಾಗ ತ್ರಿಕೋನಾಕಾರದಲಿದೆ. ವೀರನು ಊರಿನ ಕಳ್ಳಕಾಕರ ರಕ್ಷಣೆಗಾಗಿ ಹೋರಾಟ ಮಾಡಿ ಮಡಿದಂತಹ ಸಂದರ್ಭದಲ್ಲಿ ವೀರನ ನೆನಪಿಗಾಗಿ ನಿಲ್ಲಿಸಿದಂತಹ ವೀರಗಲ್ಲು ಎಂದು ಹೇಳಬಹುದು.

ಶಿಲ್ಪ : ವೀರಗಲ್ಲು
ಸ್ಥಳ : ಏಳುಮಂಧ್ಯಕ್ಕನ ದೇವಾಸ್ಥಾನದಲ್ಲಿ
ಗ್ರಾಮ : ಅಬ್ಬಿನಹೊಳೆ
ಕಾಲಮಾನ : ಕ್ರಿ.ಶ. ಸು. ೧೧-೧೨ನೇ ಶತಮಾನ

ಇದೇ ಗ್ರಾಮದ ಏಳುಮಂಧ್ಯಕ್ಕನ ದೇವಸ್ತಾನದಲ್ಲಿ ಮತ್ತೊಂದು ವೀರಗಲ್ಲಿದೆ. ಇದು ಕಪ್ಪು ಬಳಪದ ಕಲ್ಲಿನಲ್ಲಿ ಮೂರು ಹಂತದಲ್ಲಿ ಚಿತ್ರಿಸಲಾಗಿದೆ. ಮೊದಲನೇ ಹಂತ ತೃಟಿತಗೊಂಡಿದ್ದು ಮಣ್ಣಿನಲ್ಲಿ ಹೂತುಹೋಗಿರುವುದರಿಂದ ಚಿತ್ರಗಳು ಅಸ್ಪಷ್ಟವಾಗಿವೆ. ಎರಡನೇ ಹಂತದಲ್ಲಿ ವೀರನು ಮಂಟಪದಲ್ಲಿ ಕುಳಿತಿದ್ದಾನೆ. ಎಡ ಬಲ ಭಾಗಗಳಲ್ಲಿ ಅಪ್ಸರೆಯರು ವೀರನನ್ನು ಮಂಟಪದ ಮೂಲಕ ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತಿದೆ. ಇವರು ತೋಳುಬಂದಿ, ಕೈಕಡಗ, ಕಾಲಕಡಗ, ಸೊಂಟದಿಂದ ಮೊಣಕಾಲಿನವರೆಗೆ ವಸ್ತ್ರವನ್ನು ಧರಿಸಿದ್ದಾರೆ. ತಲೆಗೆ ತುರುಬು ಕಟ್ಟಿಕೊಂಡಿದ್ದಾರೆ. ಮೇಲಿನ ಹಂತದಲ್ಲಿ ಇಹಲೋಕದ ಚಿತ್ರಣವನ್ನು ಕಾಣಬಹುದು. ಲಿಂಗ, ನಂದಿ, ಸೂರ್ಯ ಚಂದ್ರರ ಚಿತ್ರಗಳಿವೆ.

ಶಿಲ್ಪ : ವೀರಗಲ್ಲು
ಸ್ಥಳ : ಅರಳೀಕೆರೆಯಿಂದ ಪಿ.ಡಿ. ಕೋಟೆಗೆ ಹೋಗುವ ದಾರಿಯಲ್ಲಿ ಎಡಭಾಗದಲ್ಲಿ
ಗ್ರಾಮ : ಅರಳೀಕೆರೆ
ಕಾಲಮಾನ : ಸು.ಕ್ರಿ.ಶ. ೧೧-೧೨ನೇ ಶತಮಾನ

ಧರ್ಮಪುರ ಪರಿಸರದ ಅರಳೀಕೆರೆ ಗ್ರಾಮವು ಸುಮಾರು ೪ ಕಿ.ಮೀ. ದೂರದಲ್ಲಿದೆ, ಈ ಗ್ರಾಮದಿಂದ ಪಿ.ಡಿ. ಕೋಟೆಗೆ ಹೋಗುವ ದಾರಿ ಮಧ್ಯದ ಎಡಭಾಗದಲ್ಲಿ ಈ ವೀರಗಲ್ಲು ಇದೆ. ಇದು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದ್ದು,ಇದರಲ್ಲಿ ಮೂರು ಹಂತಗಳನ್ನು ಕಾಣಬಹುದು. ಈ ವೀರಗಲ್ಲು ರಾಷ್ಟ್ರಕೂಟ ಮತ್ತು ನೊಳಂಬ ಕಾಲ ಆಡಳಿತದ ಸಮಕಾಲೀನವಾಗಿದ್ದು ಇದು ಅತ್ಯಂತ ಆಕರ್ಷಣೀಯವಾಗಿದೆ. ಮೊದಲನೇ ಹಂತದಲ್ಲಿ ವೀರನು ಹುಲಿಯನ್ನು ಹೊಡೆಯುತ್ತಿರುವಂತೆ ಚಿತ್ರಿಸಲಾಗಿದೆ. ವೀರನು ತುರುಬು ಕಟ್ಟಿದ್ದಾನೆ. ಕೊರಳಹಾರ, ತೋಳಬಂದಿ, ಕೈಕಡಗ, ವೀರಗಚ್ಚೆ ಧರಿಸಿದ್ದಾನೆ. ಎರಡನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯವಿದೆ. ಅಪ್ಸರೆಯರು ಬಲಗೈಯನ್ನು ವೀರನ ಭುಜದ ಮೇಲೆ ಹಾಕಿದ್ದಾನೆ. ಎಡಗೈಗಳನ್ನು ಮೇಲಕ್ಕೆ ಎತ್ತಿದ್ದಾರೆ. ತುರುಬು ಕಟ್ಟಿದ್ದಾರೆ. ಕಿವಿ ಓಲೆ, ತೋಳುಬಂದಿ, ಕೈಕಡಗ ಧರಿಸಿದ್ದಾರೆ. ಮೂರನೇ ಹಂತದಲ್ಲಿ ಲಿಂಗ ಪಕ್ಕದಲ್ಲಿ ವೀರನು ಕೈ ಜೋಡಿಸಿ ಪದ್ಮಾಸನದಲ್ಲಿ ಕುಳಿತಿದ್ದಾನೆ. ಈ ವೀರಗಲ್ಲು ಹುಲಿ ಬೇಟೆಯ ವೀರಗಲ್ಲು ಎಂದು ಹೇಳಬಹುದಾಗಿದೆ. ಈ ವೀರಗಲ್ಲು ಧರ್ಮಪುರ ಹೋಬಳಿಯಲ್ಲಿ ಕಂಡು ಬಂದಂತಹ ಒಂದೇ ವೀರಗಲ್ಲಾಗಿದೆ. ಈ ರೀತಿಯ ವೀರಗಲ್ಲು ಚಿತ್ರದುರ್ಗ ಜಿಲ್ಲೆಯ ಹಲವಾರು ಗ್ರಾಮಗಳಲ್ಲಿ ಕಂಡುಬಂದಿದ್ದು. ಅವುಗಳಲ್ಲಿ ಮುಖ್ಯವಾಗಿ ಚಿತ್ರದುರ್ಗ ತಾಲ್ಲೂಕಿನ ಗೊಡಬನಾಳ್, ಚಳ್ಳಕೆರೆ ತಲ್ಲೂಕಿನ ಪಿ.ಮಹದೇವಪುರ ಇತ್ಯಾದಿಗಳು ಪ್ರಮುಖವು. ಈ ಎಲ್ಲಾ ವೀರಗಲ್ಲುಗಳು ಒಂದೇ ರೀತಿಯಲ್ಲಿದ್ದು ರಾಷ್ಟ್ರಕೂಟ, ನೊಳಂಬ ಕಾಲಕ್ಕೆ ಸೇರಿಸಲಾಗಿವೆ.

ಶಿಲ್ಪ : ವೀರಗಲ್ಲು

ಸ್ಥಳ : ಬೇತೂರು ಕೆರೆಯಲ್ಲಿ ದಕ್ಷಿಣ ದಿಕ್ಕಿನಲ್ಲಿ

ಗ್ರಾಮ : ಬೇತೂರು

ಕಾಲಮಾನ : ಕ್ರಿ.ಶ. ಸು. ೧೨ನೇ ಶತಮಾನ

ಬೇತೂರು ಗ್ರಾಮವು ಧರ್ಮಪುರದಿಂದ ದಕ್ಷಿಣ ದಿಕ್ಕಿನಲ್ಲಿ ಅಂದರೆ ಚಳ್ಳಕೆರೆಗೆ ಹೋಗುವ ದಾರಿಯಲ್ಲಿ ಸುಮಾರು ೮ ಕಿ.ಮೀ. ದೂರದಲ್ಲಿದೆ. ಇದನ್ನು ಬಿಳಿ ಗ್ರಾನೈಟ್ ಕಲ್ಲಿನಲ್ಲಿ ಮೂರು ಹಂತಗಳಲ್ಲಿ ಚಿತ್ರಿಸಲಾಗಿದೆ. ಮೊದಲನೇ ಹಂತದಲ್ಲಿ ವೀರನು ಕುದುರೆ ಮೇಲೆ ಕುಳಿತು ಎದುರಾಳಿಯೊಡನೆ ಹೋರಾಟ ಮಾಡುತ್ತಿರುವ ದೃಶ್ಯವಿದೆ ವೀರನು ತನ್ನ ಎಡಗೈಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ಬಲಗೈಲಿ ಖಡ್ಗವನ್ನು ಎತ್ತಿದ್ದಾನೆ. ಮುಂಭಾಗದಲ್ಲಿ ವೈರಿಗಳ ಕಾಲಾಳು ಪಡೆ ಹೋರಾಟ ಮಾಡುತ್ತಿದ್ದಾರೆ. ಹಿಂಭಾಗದಲ್ಲಿ ಸೇವಕರು ವೀರನಿಗೆ ಛತ್ರಿ ಹಿಡಿದಿದಾರೆ. ಕುದುರೆಯ ಕಾಲ ಕೆಳಗೆ ವೈರಿಗಳು ಸತ್ತುಬಿದ್ದಿದ್ದಾರೆ. ವೀರನು ತುರುಬು ಕಟ್ಟಿದ್ದಾನೆ. ಕಿವಿ ಓಲೆ, ಭುಜಬಂದಿ ಕೊರಳಹಾರ, ಕೈಕಡಗ, ವೀರಗಚ್ಚೆಯನ್ನು ಧರಿಸಿದ್ದಾನೆ.

ಎರಡನೇ ಹಂತದಲ್ಲಿ ಮಂಟಪದಲ್ಲಿ ಪದ್ಮಾಸನದಲ್ಲಿ ತನ್ನ ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸುವ ಭಂಗಿಯಲ್ಲಿ ಕುಳಿತಿರುವ ದೃಶ್ಯ ಕಾಣಬಹುದು. ಅಪ್ಸರೆಯರು ಮಂಟಪದ ಮೂಲಕ ಸ್ವರ್ಗಕ್ಕೆ ವೀರನನ್ನು ಕರೆದೊಯ್ಯುವುದು ಅತ್ಯಂತ ಸೊಗಸಾಗಿ ಮೂಡಿಬಂದಿದೆ. ಸೊಂಟದಿಂದ ಪಾದದವರೆಗೆ ವಸ್ತ್ರವನ್ನು ಧರಿಸಿದ್ದಾರೆ. ಕಾಲಕಡಗವನ್ನು ಸಹ ಕಾಣಬಹುದು.

ಮೂರನೇ ಹಂತದಲ್ಲಿ ಪೀಠವುಳ್ಳ ಲಿಂಗ ಎಡಭಾಗದಲ್ಲಿ ನಂದಿ, ಬಲಭಾಗದಲ್ಲಿ ವೀರನು ಪದ್ಮಾಸನದಲ್ಲಿ ಕುಳಿತುಕೊಂಡಿದ್ದಾನೆ. ಪಕ್ಕದಲ್ಲಿ ಒಬ್ಬ ಸ್ತ್ರೀಯು ಲಿಂಗುವಿಗೆ ಅಭಿಷೇಕ ಮಾಡುತ್ತಿರುವುದನ್ನು ಕಾಣಬಹುದು. ದಾಳಿಕೋರರು ಊರಿನ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಸೀಮಾ ಸಂಬಂಧದ ವಿಚಾರದ ವಿಷಯವಾಗಿ ವೀರನು ಹೋರಾಡಿ ಮಡಿದ ವಿಷಯಕ್ಕಾಗಿ ಈ ವೀರಗಲ್ಲನ್ನು ನಿಲ್ಲಿಸಲಾಗಿದೆ ಹಾಗಾಗಿ ಇದನ್ನು ಸೀಮಾಸಂಭದ ವೀರಗಲ್ಲು ಎಂದು ಕರೆಯಲಾಗುತ್ತಿದೆ.

ಶಿಲ್ಪ : ವೀರಗಲ್ಲು

ಸ್ಥಳ : ಊರಬಾಗಿಲ ಬಲಭಾಗದಲ್ಲಿ

ಗ್ರಾಮ : ಕಣಜನಹಳ್ಳಿ ಹಿರಿಯೂರು (ತಾ)

ಕಾಲಮಾನ : ಕ್ರಿ.ಶ. ಸು. ೧೪-೧೫ನೇ ಶತಮಾನ

ಕಣಜನಹಳ್ಳಿ ಗ್ರಾಮವು ಧರ್ಮಪುರದಿಂದ ಚಳ್ಳಕೆರೆಗೆ ಹೋಗುವ ಮಧ್ಯದಲ್ಲಿ ಸು. 5 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಕೋಟೆಯ ದ್ವಾರಬಾಗಿಲ ಬಲಭಾಗದಲ್ಲಿ ಹಲವಾರು ವೀರಗಲ್ಲು ಮತ್ತು ಸತಿಗಲ್ಲುಗಳಿವೆ. ಅವುಗಳಲ್ಲಿ ಬಲಭಾಗದಲ್ಲಿರುವ ವೀರಗಲ್ಲು ಪ್ರಮುಖವಾದುದು. ಇದರಲ್ಲಿ ವೀರನು ಕುದುರೆಯ ಮೇಲೆ ಕುಳಿತು ಯುದ್ಧದಲ್ಲಿ ತೊಡಗಿರುವುದು ಕಂಡುಬರುತ್ತದೆ. ವೀರನು ಬಲಗೈಲಿ ಈಟಿಯನ್ನು ವೈರಿ ಪಡೆಯ ಕಡೆಗೆ ಬೀಸುತ್ತಿರುವುದು. ಎಡಗೈಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ವೀರನು ತುರುಬು ಕಟ್ಟಿದ್ದಾನೆ. ಕಿವಿ, ಓಲೆ, ಕೊರಳಹಾರ, ತೋಳಬಂದಿ, ಕೈಕಡಗವನ್ನು ವೀರಗಚ್ಚೆಯನ್ನು, ಧರಿಸಿರುವನು. ಕುದುರೆಯ ಮುಂಭಾಗದಲ್ಲಿ ಒಬ್ಬ ವೀರನು ತನ್ನ ಎಡಗೈಲಿ ಬಿಲ್ಲನ್ನು ಹಿಡಿದು ಬಲಗೈಲಿ ಬಿಲ್ಲನ್ನು ಹಿಡಿದು ಬಲಗೈಯಿಂದ ಬಾಣವನ್ನು ತೆಗೆಯುತ್ತಿರುವ ದೃಶ್ಯವನ್ನು ಕಾಣಲಾಗಿದೆ. ಈತನೂ ಸಹ ತುರುಬು ಕಟ್ಟಿದ್ದು, ಕೊರಳಹಾರ, ತೋಳುಬಂದಿ ಕೈಕಡಗ, ಕಾಲುಕಡಗ, ವೀರಗಚ್ಚೆಯನ್ನು ಧರಿಸಿದ್ದಾನೆ. ಈ ವೀರಗಲ್ಲಿನ ಸುತ್ತ ಪಟ್ಟಿಯಲ್ಲಿ ಶಾಸನದ ಪಾಟವನ್ನು ಕಾಣಬಹುದಾಗಿದೆ. ಮೇಲ್ಭಾಗದಲ್ಲಿ ಲಿಂಗ, ನಂದಿ ಸೂರ್ಯ ಚಂದ್ರರನ್ನು ಕಾಣಬಹುದು. ಇದೂ ಸಹ ಸೀಮಾ ಕಾಳಗಕ್ಕೆ ಸಂಬಂದಿಸಿದ ವೀರಗಲ್ಲಾಗಿದೆ.

ಶಿಲ್ಪ : ವೀರಸತಿಗಲ್ಲು

ಸ್ಥಳ : ಕಾಂತರಾಜ್ (ಉಪಾನ್ಯಾಸಕರು)ರವರ ಕಣದಲ್ಲಿ

ಗ್ರಾಮ : ಅರಳೀಕೆರೆ

ಕಾಲಮಾನ : ಕ್ರಿ.ಶ ಸು. ೧೫-೧೬ನೇ ಶತಮಾನ

ಆರಳೀಕೆರೆ ಗ್ರಾಮವು ಧರ್ಮಪುರದಿಂದ ೩ ಕಿ.ಮೀ. ದೂರದಲ್ಲಿದೆ ಈ ಗ್ರಾಮದ ಕಾಂತರಾಜ್‌ರವರ ಕಣದಲ್ಲಿ ಸು. ೧೫-೧೬ನೇ ಶತಮಾನದ ವೀರಗಲ್ಲು ಇದೆ. ಇದು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದೆ. ಇದರಲ್ಲಿ ವೀರನು ಕುದುರೆಯ ಮೇಲೆ ಕುಳಿತು ಎಡಗೈಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ಬಲಗೈಲಿ ಈಟಿಯನ್ನು ಹಿಡಿದು ಬೀಸುತ್ತಿರುವಂತೆ ಚಿತ್ರಿಸಲಾಗಿದೆ. ಕುದುರೆ ಆಭರಣಗಳಿಂದ ಅಲಂಕಾರಗೊಳಿಸಲಾಗಿದೆ. ವೀರನು ಕಿವಿ ಓಲೆ, ಕೊರಳಹಾರ, ತೋಳುಬಂದಿ, ಕೈಕಡಗ, ಕಾಲಕಡಗ, ಧರಿಸಿರುವನು. ಹಿಂಭಾಗದಲ್ಲಿ ಈತನ ಸತಿಯು ಎರಡು ಕೈಗಳನ್ನು ಮೇಲಕ್ಕೆ ಎತ್ತಿ ಹಿಡಿದು ನಿಂತಿದ್ದಾಳೆ. ಬಲಗೈಲಿ ನಿಂಬೆಹಣ್ಣು, ಎಡಗೈಲಿ ಪುಷ್ಪವನ್ನು ಹಿಡಿದಿದ್ದಾಳೆ. ಬಲಭಾಗಕ್ಕೆ ತುರುಬು ಕಟ್ಟಿದ್ದಾಳೆ, ಕಿವಿ ಓಲೆ, ಕೊರಳಹಾರ, ತೋಳಬಂದಿ, ಕೈಕಡಗ,, ಸೊಂಟದಿಂದ ಪಾದದವರೆಗೆ ನೆರಿಗೆಯಂತಹ ಅಲಂಕೃತ ವಸ್ತುವನ್ನು, ಕಾಲಕಡಗವನ್ನು ಧರಿಸಿದ್ದಾಳೆ, ಮೇಲ್ಭಾಗದಲ್ಲಿ ಸರ್ಪವನ್ನು ಕಾಣಬಹುದು. ಇದು ಸಹ ಸೀಮಾ ಸಂಬಂದದ ವೀರಸತಿಗಲ್ಲು ಎಂದು ಹೇಳಬಹುದು.

ಶಿಲ್ಪ : ವೀರಗಲ್ಲು

ಸ್ಥಳ : ಹಳೇ ಪ್ರಾಥಮಿಕ ಶಾಲೆಯ ಆವರಣ

ಗ್ರಾಮ : ಧರ್ಮಪುರ

ಕಾಲಮಾನ : ಕ್ರಿಶ ಸು. ೧೫-೧೬ನೇ ಶತಮಾನ

ಪ್ರಸ್ತುತ ಅಧ್ಯಯನ ಪ್ರದೇಶವಾದ ಧರ್ಮಪುರದ ಹಳೇ ಪ್ರಾಥಮಿಕ ಶಾಲೆಯ ಮುಂಭಾಗದಲ್ಲಿ ಅಂದರೆ ಸಕ್ಕರ ಗ್ರಾಮಕ್ಕೆ ಹೋಗುವ ದಾರಿಯ ಎಡ ಬದಿಯಲ್ಲಿ ಪ್ರಸುತ್ತ ವೀರಗಲ್ಲು ಇದೆ. ಈ ವೀರಗಲ್ಲನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಮೂರು ಹಂತಗಳಲ್ಲಿ ಚಿತ್ರಿಸಲಾಗಿದೆ, ಇದು ಶಾಸನೋಕ್ತ ವೀರಗಲ್ಲು ಆಗಿದ್ದು ಶಾಸನ ತುಟಿತಗೊಂಡಿದೆ. ಮೊದಲನೆ ಹಂತದಲ್ಲಿ ವೀರನು ವೈರಿಗೆ ಬಿಲ್ಲನ್ನು ಹೋಡಿಯುತ್ತಿರುವ ದೃಶ್ಯ, ಹಿಂಬಾಗದಲ್ಲಿ ಗೋವುಗಳ ಚಿತ್ರಣವಿದೆ. ಎರಡನೆ ಹಂತದಲ್ಲಿ ವೀರನನ್ನು ಅಪ್ಸರೆಯರು ಕೈಗಳನ್ನು ಬುಜದ ಮೇಲೆ ಹಾಕಿ ಸ್ವರ್ಗಕ್ಕೆ ಕರೆದೊಯ್ಯುವ ಚಿತ್ರಣ, ಮೂರನೇ ಹಂತದಲ್ಲಿ ವೀರನು ಪೀಠದ ಮೇಲೆ ಪದ್ಮಾಸನದಲ್ಲಿ ಕೂಳಿತಿದ್ದು ಎಡಬಲಬಾಗದಲ್ಲಿ ಚಾಮರಧಾರೆಯರು ಚಾಮರವನ್ನು ಬೀಸುತ್ತಿರುವ ದೃಶ್ಯ ಕಂಡರಿಸಲಾಗಿದೆ. ಇದರಲ್ಲಿ ವೀರನು ಮೊದಲನೇ ಹಂತದಲ್ಲಿ ತುರುಬುಕಟ್ಟಿದ್ದಾನೆ, ಮೂರನೇ ಹಂತದಲ್ಲಿ ಕಿರೀಟವನ್ನ ಧರಿಸಿದ್ದು ಕೊರಳಹಾರ, ಕಿವಿಓಲೆ, ಕಂಟಹಾರ, ಬುಜಬಂದಿ, ಕೈಕಡಗ, ಸೊಂಟಪಟ್ಟಿ, ವೀರಗಚ್ಚೆ, ಕಾಲಕಡಗ ಧರಿಸಿದ್ದಾನೆ. ಈ ವೀರಗಲ್ಲು ಗೋವುಗಳ ರಕ್ಷಣೆಯ ಸಂದರ್ಭದಲ್ಲಿ ವೀರನು ಹೋರಾಟ ಮಾಡಿ ಮಡಿದಂತಹ ಸಂಧರ್ಭದಲ್ಲಿ ವೀರನ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲು ಎಂದು ಹೇಳಬಹುದು.

ಶಿಲ್ಪ : ವೀರ ಮಾಸ್ತಿಕಲ್ಲುಗಳು

ಸ್ಥಳ : ತಿಮ್ಮಣ್ಣ ಬಿನ್ ಗುಡ್ಡಪ್ಪನವರ ಮನೆಯ ಮುಂಭಾಗ

ಗ್ರಾಮ : ಧರ್ಮಪುರ

ಕಾಲಮಾನ : ಕ್ರಿ.ಶ ಸು. ೧೫-೧೬ನೇ ಶತಮಾನ

ಪ್ರಸ್ತುತ ಧರ್ಮಪುರ ಗ್ರಾಮದ ಮಧ್ಯದಲ್ಲಿರುವ ಶನಿಮಹಾತ್ಮ ದೇವಸ್ಥಾನದ ಬಳಿ ತಿಮ್ಮಣ್ಣ ಬಿನ್ ಗುಡ್ಡಪ್ಪನವರ ಮನೆಯ ಮುಂಭಾಗದ ಮಂಟಪದಲ್ಲಿ ನಾಲ್ಕು ವೀರಗಲ್ಲು ಮತ್ತು ಸತಿಗಲ್ಲುಗಳಿವೆ. ಈ ವೀರಗಲ್ಲನ್ನು ಕೆಂಪು ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದೆ. ಕ್ರಮವಾಗಿ ಮೊದಲನೇ ವೀರಗಲ್ಲಿನಲ್ಲಿ ವೀರನು ಕುದುರೆಯನ್ನು ಏರಿದ್ದು ಎಡಗೈಲಿ ಕುದರೆಯ ಲಗಾಮು, ಬಲಗೈಲಿ ಬರ್ಚಿಯನ್ನ ಹಿಡಿದಿದ್ದಾನೆ. ಕುದುರೆಯು ಜಿಗಿಯುತ್ತಿರುವ ದೃಶ್ಯವಿದ್ದು ಮುಂಭಾಗದಲ್ಲಿ ಒಬ್ಬ ವೀರನು ಎಡಗೈಲಿ ಬಿಲ್ಲು ಹಿಡಿದು, ಬಲಗೈಲಿ ಬಾಣ ತೆಗೆಯತ್ತಿರುವಂತೆ ಕಂಡುಬರುತ್ತದೆ. ಪಕ್ಕದಲ್ಲಿನ ಮತ್ತೊಂದು ವೀರಗಲ್ಲಿನಲ್ಲಿ ವೀರನು ಬಿಲ್ಲಿಗೆ ಬಾಣ ಹೊಡಿರುವುದು ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಚಿತ್ರಣ ಹಾಗೆಯೆ ಪಕ್ಕದಲ್ಲಿ ಮತ್ತೊಂದು ವೀರ ಸತಿಗಲ್ಲು ಭಗ್ನಗೊಂಡಿದ್ದು ವೀರನು ಖಡ್ಗವನ್ನು ಹೆಗಲ ಮೇಲೆ ಇರಿಸಿದ್ದು ಪಕ್ಕದಲ್ಲಿ ಆತನ ಸತಿಯರು ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಿರುವುದನ್ನು ಕಾಣುತ್ತೇವೆ, ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿತ್ರಣವಿದೆ. ಹಾಗೆಯೆ ಮತ್ತೊಂದು ವೀರಗಲ್ಲಿನಲ್ಲಿ ವೀರನು ಎಡಗೈಲಿ ಬಿಲ್ಲನ್ನು ಹಿಡಿದು, ಬಲಗೈಲಿ ಬಾಣ ತೆಗೆಯುತ್ತಿರುವುದನ್ನ ಕಂಡರಿಸಲಾಗಿದೆ. ಈ ಎಲ್ಲಾ ವೀರಗಲ್ಲುಗಳಲ್ಲಿ ವೀರರು ಒಂದೇ ತೆರನಾದ ಉಡುಪು, ಆಭರಣಗಳನ್ನು ಧರಿಸಿದ್ದಾರೆ. ತಲೆಯ ಹಿಂಬದಿಯಲ್ಲಿ ಕೂದಲನ್ನು ತುರುಬು ಕಟ್ಟಿದ್ದಾರೆ, ಕಿವಿಓಲೆ, ಕೊರಳಹಾರ, ಬುಜಬಂದಿ, ಕೈಕಡಗ, ವೀರಗಚ್ಚೆ, ಕಾಲಕಡಗ, ಧರಿಸಿರುವುದನ್ನ ಕಾಣಬಹುದು ಈ ವೀರಗಲ್ಲುಗಳನ್ನು ಗಡಿ ರಕ್ಷಣೆಯ ವೀರಗಲ್ಲುಗಳೆಂದು ಹೇಳಬಹುದು.

ಶಿಲ್ಪ : ವೀರಗಲ್ಲುಗಳು

ಸ್ಥಳ : ಹಳಿಕಾರ್ ತಿಪ್ಪೇಸ್ವಾಮಿಯವರ ಜಮೀನಿನಲ್ಲಿ (ಮಂಟಪದಲ್ಲಿ)

ಗ್ರಾಮ : ಶಿಡ್ಲಯ್ಯನಕೋಟೆ

ಕಾಲಮಾನ : ಕ್ರಿ.ಶ ಸು. ೧೧-೧೨ನೇ ಶತಮಾನ

ಪ್ರಸ್ತುತ ಅಧ್ಯಯನ ಪ್ರದೇಶದ ಧರ್ಮಪುರದಿಂದ ಸುಮಾರು ೯ಕಿ.ಮೀ ದೂರದಲ್ಲಿ ಐತಿಹಾಸಿಕ ಸ್ಥಳವಾದ ಶಿಡ್ಲಯ್ಯನಕೋಟೆ ಗ್ರಾಮವಿದೆ. ಈ ಗ್ರಾಮಕ್ಕೆ ಹೋಗುವ ದಾರಿಯ ಬಲಬದಿಯಲ್ಲಿ ಹಳಿಕಾರ್ ತಿಪ್ಪೇಸ್ವಾಮಿಯವರ ಜಮೀನಿನ ಮಂಟಪದಲ್ಲಿ ವೀರಗಲ್ಲುಗಳಿವೆ. ಇವುಗಳನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದೆ. ಇದರಲ್ಲಿ ವೀರನು ಎಡಗೈಲಿ ಬಿಲ್ಲನ್ನು ಹಿಡಿದು ತನ್ನ ಹೆಗಲ ಮೇಲೆ ಇರಿಸಿದ್ದಾನೆ, ತನ್ನ ಬಲಗೈಲಿ ಖಡ್ಗವನ್ನು ಮುಂದಕ್ಕೆ ಚಾಚಿರುವಂತೆ ಕಂಡುಬರುತ್ತದೆ. ಮುಂಬಾಗದಲ್ಲಿ ಗೋವುಗಳ ಚಿತ್ರಣವನ್ನು ಕಾಣಬಹುದು. ಮೇಲ್ಭಾಗದಲ್ಲಿ

ಶಿವಲಿಂಗ, ಸೂರ್ಯ, ಚಂದ್ರರ ಚಿತ್ರಣವನ್ನು ಕಂಡರಿಸಲಾಗಿದೆ. ಪಕ್ಕದ ಮತ್ತೊಂದು ವೀರಗಲ್ಲಿನಲ್ಲಿ ವೀರನು ಖಡ್ಗವನ್ನ ಹಿಡಿದು ನಿಂತಿರುವ ದೃಶ್ಯವಿದೆ. ಈ ಎರಡು ವೀರಗಲ್ಲುಗಳು ಸಹ ಗೋವುಗಳ ರಕ್ಷಣೆಯ ಸಂದರ್ಭದಲ್ಲಿ ಹೋರಾಟ ಮಾಡಿ ಮಡಿದ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲು ಎಂದು ಹೇಳಬಹುದು. ವೀರನು ತುರುಬು ಕಟ್ಟಿದ್ದು ಕಿವಿಓಲೆ, ಕೊರಳಹಾರ, ತೊಳುಬಂದಿ, ಕೈಕಡಗ, ವೀರಗಚ್ಚೆ, ಕಾಲಕಡಗ ದರಿಸಿದ್ದಾನೆ.

ಶಿಲ್ಪ : ವೀರಗಲ್ಲು

ಸ್ಥಳ : ಊರಿನ ಮಧ್ಯಭಾಗದ ನಾಗೇಂದ್ರಪ್ಪ ತಂದೆ ಕೆಂಚಪ್ಪನವರ ಮನೆಯ ಪಕ್ಕ

ಗ್ರಾಮ : ಕೃಷ್ಣಾಪುರ

ಕಾಲಮಾನ : ಕ್ರಿ.ಶ ಸು. ೧೧-೧೨ನೇ ಶತಮಾನ

ಧರ್ಮಪುರದಿಂದ ಸುಮಾರು ೧ಕಿ.ಮೀ ದೂರದಲ್ಲಿ ಕೃಷ್ಣಾಪುರ ಗ್ರಾಮವಿದೆ ಈ ಗ್ರಾಮದ ಊರಿನ ಮಧ್ಯಬಾಗದ ನಾಗೇಂದ್ರಪ್ಪ ತಂದೆ ಕೆಂಚಪ್ಪನವರ ಮನೆಯ ಪಕ್ಕದ ಮಂಟಪದಲ್ಲಿ ಸುಮಾರು ನಾಲ್ಕು ವೀರಗಲ್ಲುಗಳಿವೆ. ಇವುಗಳನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಲಾಗಿದೆ. ಈ ವೀರಗಲ್ಲುಗಳಲ್ಲಿ ಮೊದಲನೆಯದರಲ್ಲಿ ವೀರನು ತನ್ನ ಬಲಗೈಲಿ ಖಡ್ಗ ಹಿಡಿದು ಎಡಗೈಯನ್ನು ತನ್ನ ಸೊಂಟದ ಮೇಲೆ ಇರಿಸಿದ್ದಾನೆ. ಹಾಗೆಯೇ ಸೊಂಟದಲ್ಲಿ ಒಂದು ಖಡ್ಗವನ್ನು ಇರಿಸಿದ್ದಾನೆ. ಇದರ ಪಕ್ಕದ ವೀರಗಲ್ಲಿನಲ್ಲಿ ವೀರನು ತನ್ನ ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಿರುವ ಚಿತ್ರಣವಿದೆ. ಹಾಗೇಯೆ ಪಕ್ಕದ ಮತ್ತೊಂದು ವೀರಗಲ್ಲಿನಲ್ಲಿ ವೀರನು ಎಡಗೈಲಿ ಭರ್ಚಿಯನ್ನು, ಬಲಗೈಲಿ ಖಡ್ಗವನ್ನು ಹಿಡಿದು ನಿಂತಿರುವ ದೃಶ್ಯದ ಚಿತ್ರಣವನ್ನು ಕಾಣಬಹುದು. ಈ ವೀರಗಲ್ಲುಗಳಲ್ಲಿನ ವೀರನು ಒಂದೇ ತೆರನಾದ ತುರುಬು ಕಟ್ಟಿದ್ದಾನೆ, ಕಿವಿಓಲೆ, ಕೊರಳಹಾರ, ಬುಜಬಂದಿ, ಕೈಕಡಗ, ಸೊಂಟಪಟ್ಟಿ, ವೀರಗಚ್ಚೆಯನ್ನು ಧರಿಸಿದ್ದಾನೆ. ಈ ವೀರಗಲ್ಲುಗಳೂ ಸಹ ಗಡಿ ರಕ್ಷಣೆಯ ವೀರಗಲ್ಲುಗಳು ಎಂದು ಹೇಳಬಹುದು.

ಶಿಲ್ಪ : ವೀರಸತಿಗಲ್ಲುಗಳು

ಸ್ಥಳ : ಶ್ರೀ ಸಿದ್ದೇಶ್ವರ ದೇವಾಲಯದ ಆವರಣದಲ್ಲಿ

ಗ್ರಾಮ : ಬಿದರಕೆರೆ

ಕಾಲಮಾನ : ಕ್ರಿ.ಶ ಸು. ೧೧-೧೨ನೇ ಶತಮಾನ

ಧರ್ಮಪುರದಿಂದ ಸುಮಾರು ೧೦ಕಿ.ಮೀ ದೂರದಲ್ಲಿ ಬಿದರಕೆರೆ ಗ್ರಾಮವಿದ್ದು ಈ ಗ್ರಾಮದ ಶ್ರೀ ಸಿದ್ದೇಶ್ವರ ದೇವಾಲಯದ ಆವರಣದಲ್ಲಿ ಕೆಲವು ವೀರಸತಿಗಲ್ಲುಗಳು ಕಂಡುಬರುತ್ತವೆ. ಮೊದಲನೆಯದರಲ್ಲಿ ವೀರನು ಎಡಗೈಲಿ ಬಿಲ್ಲನ್ನು ಹಿಡಿದು, ಬಲಗೈಯಿಂದ ಬಾಣವನ್ನು ತೆಗೆಯುತ್ತಿರುವುದನ್ನ ಕಾಣಲಾಗಿದೆ. ಇದರಲ್ಲಿ ವೀರನು ತುರುಬು ಕಟ್ಟಿದ್ದಾನೆ,

ಕೊರಳಹಾರ, ಕಿವಿಓಲೆ, ಬುಜಬಂದಿ, ಕೈಕಡಗ, ಸೊಂಟಪಟ್ಟಿ, ಸೊಂಟದಲ್ಲಿ ಖಡ್ಗ ಇರಿಸಿದ್ದಾನೆ, ವೀರಗಚ್ಚೆ, ಕಾಲಕಡಗ ದರಿಸಿದ್ದಾನೆ, ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿತ್ರಣವಿದೆ. ತನ್ನ ಎಡ ಬದಿಯಲ್ಲಿ ವೀರನ ಸತಿಯನ್ನು ಕಾಣಬಹುದು. ಸ್ತ್ರೀಯು ತನ್ನ ಎರಡು ಕೈಗಳನ್ನು ಜೊಡಿಸಿ ನಮಸ್ಕರಿಸುತ್ತಿರುವಂತೆ ಕಂಡರಿಸಲಾಗಿದ್ದು ಇದರಲ್ಲಿ ಸತಿಯು ತುರುಬುಕಟ್ಟಿದ್ದಾಳೆ, ಕೊರಳಹಾರ, ಬುಜಬಂದಿ, ಸೀರೆಯನ್ನು ಧರಿಸಿದ್ದಾಳೆ, ಈ ವೀರಸತಿಗಲ್ಲು ಗಡಿ ರಕ್ಷಣೆಯ ವೀರಗಲ್ಲು ಎಂದು ಹೇಳಬಹುದು. ಮತ್ತೊಂದು ವೀರಗಲ್ಲಿನಲ್ಲಿ ವೀರನು ಕುದರೆಯನ್ನು ಏರಿದ್ದು, ತನ್ನ ಬಲಗೈಲಿ ಕಡ್ಗವನ್ನು, ಎತ್ತಿರುವಂತೆ ಕಂಡರಿಸಲಾಗಿದೆ. ತನ್ನ ಎಡಗೈಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ಕುದುರೆಯು ತನ್ನ ಮುಂದಿನ ಎರಡು ಕಾಲುಗಳನ್ನು ಎತ್ತಿ ಜಿಗಿಯುತ್ತಿರುವ ದೃಶ್ಯ ಕಾಣಬಹುದು. ವೀರನು ತುರುಬುಕಟ್ಟಿದ್ದಾನೆ, ಕೊರಳಹಾರ, ಕಿವಿಓಲೆ, ತೊಳಬಂದಿ, ಕೈಕಡಗ, ವೀರಗಚ್ಚೆ, ಕಾಲಕಡಗ, ದರಿಸಿದ್ದು ಕುದುರೆಗೆ ಲಗಾಮು ಜೀನನ್ನು ಹಾಕಲಾಗಿದೆ, ಈ ವೀರಗಲ್ಲು ಸಹ ಗಡಿ ರಕ್ಷಣೆಯ ವೀರಗಲ್ಲು ಎಂದು ಹೇಳಬಹುದು.

ಮತ್ತೊಂದು ವೀರಗಲ್ಲಿನಲ್ಲಿ ವೀರನು ತನ್ನ ಎಡಗೈಲಿ ಬಿಲ್ಲನ್ನು ಹಿಡಿದಿದ್ದು ಬಲಗೈಲಿ ಬಾಣವನ್ನು ತೆಗೆಯುತ್ತಿರುವಂತಿದೆ. ವೀರನ ಎಡ ಬಲಗಳಲ್ಲಿ ಗೋವುಗಳ ಚಿತ್ರಣ, ಮೇಲ್ಬಾಗದಲ್ಲಿ ನಾಗರಹಾವು, ಸೂರ್ಯ, ಚಂದ್ರರ ಚಿತ್ರಣವನ್ನು ಕಂಡರಿಸಲಾಗಿದೆ. ವೀರನು ಕಿರೀಟ ದರಿಸಿದ್ದು ಕೊರಳಹಾರ, ಬುಜಬಂದಿ, ಕೈಕಡಗ, ವೀರಗಚ್ಚೆ, ಸೊಂಟದಲ್ಲಿ ಬಾಕು, ಕಾಲಕಡಗ ಧರಿಸಿದ್ದಾನೆ. ಈ ವೀರಗಲ್ಲು ಗೋವುಗಳ ರಕ್ಷಣೆಯ ಸಂದರ್ಭದಲ್ಲಿ ಹೋರಾಟ ಮಾಡಿ ಮಡಿದಂತಹ ಸಂದರ್ಭದಲ್ಲಿ ನಿಲ್ಲಿಸಿದ ವೀರಗಲ್ಲಾದ್ದರಿಂದ ಇದನ್ನು ಗೋರಕ್ಷಣ ವೀರಗಲ್ಲು ಎಂದು ಕರೆಯಬಹುದು.

ಶಿಲ್ಪ : ವೀರಸತಿಗಲ್ಲು

ಸ್ಥಳ : ಕುರುಬರ ಸಿದ್ದಜ್ಜನವರ ಕಣದಲ್ಲಿ

ಗ್ರಾಮ : ವೇಣುಕಲ್ಲುಗುಡ್ಡ

ಕಾಲಮಾನ : ಕ್ರಿಶ ಸು. ೧೧-೧೨ನೇ ಶತಮಾನ

ಧರ್ಮಪುರದಿಂದ ಐತಿಹಾಸಿಕ ಪ್ರಸಿದ್ಧವಾದ ವೇಣುಕಲ್ಲುಗುಡ್ಡ ಗ್ರಾಮವು ಧರ್ಮಪುರದಿಂದ ಸುಮಾರು ೬ಕಿ.ಮೀ ದೂರದಲ್ಲಿದೆ, ಈ ಗ್ರಾಮದ ಕೋಟೆಯ ಪಕ್ಕದಲ್ಲಿ ಅಂದರೆ ಕುರುಬರ ಸಿದ್ದಜ್ಜನವರ ಕಣದಲ್ಲಿ ಗ್ರಾನೈಟ್ ಹೆಬ್ಬಂಡೆಯ ಮೇಲೆ ಈ ವೀರಸತಿಗಲ್ಲು ಚಿತ್ರಿಸಲಾಗಿದೆ. ಇದರಲ್ಲಿ ವೀರನು ಎಡಗೈಲಿ ಬಿಲ್ಲನ್ನು ಹಿಡಿದಿದ್ದಾನೆ, ಬಲಗೈಲಿ ಬಾಣವನ್ನು ತೆಗೆಯುತ್ತಿದ್ದಾನೆ. ಸೊಂಟದಲ್ಲಿ ಖಡ್ಗವನ್ನು ಇರಿಸಿದ್ದಾನೆ, ತುರುಬುಕಟ್ಟಿದ್ದಾನೆ ಕಿವಿಓಲೆ, ಬುಜಬಂದಿ, ಕೈಕಡಗ, ಸೊಂಟಪಟ್ಟಿ, ಕಾಲಕಡಗ, ವೀರಗಚ್ಚೆಯನ್ನು, ಧರಿಸಿದ್ದಾನೆ. ಹಾಗೆಯೆ ಪಕ್ಕದಲ್ಲಿ ತನ್ನ

ಸತಿಯು ಎಡಗೈಲಿ ವಸ್ತ್ರವನ್ನ ಹಿಡಿದು ಬಲಗೈಯನ್ನು ಮೇಲಕ್ಕೆ ಎತ್ತಿದ್ದಾಳೆ, ಈಕೆಯು ತನ್ನ ತಲೆಯಲ್ಲಿ ತುರುಬು ಕಟ್ಟಿದ್ದಾಳೆ, ಕಿವಿಓಲೆ, ಕೊರಳಹಾರ, ತೋಳುಬಂದಿ, ಕೈಕಡಗ, ಸೀರೆಯನ್ನು ದರಿಸಿದ್ದಾಳೆ. ಈ ವೀರಗಲ್ಲು ಗಡಿ ಪ್ರದೇಶದ ರಕ್ಷಣೆಯ ಸಂದರ್ಭದಲ್ಲಿ ಹೋರಾಟ ಮಾಡಿ ಮಡಿದ ನೆನಪಿಗಾಗಿ ಚಿತ್ರಿಸಿದ ವೀರಸತಿಗಲ್ಲು ಎಂದು ಹೇಳಬಹುದು. ಇದೇ ಗ್ರಾಮದ ಕುರುಬರ ಕಲ್ಲೆಜ್ಜನವರ ಕಣದಲ್ಲಿ ಮತ್ತೊಂದು ವೀರಸತಿಗಲ್ಲು ಇದೆ, ಇದು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲ್ಪಟ್ಟಿದೆ. ಇದರಲ್ಲಿ ವೀರನು ಎಡಗೈಲಿ ಬಿಲ್ಲನ್ನು ಹಿಡಿದು, ಬಲಗೈಲಿ ಬಾಣವನ್ನು, ತೆಗೆಯುತ್ತಿರುವಂತೆ ಕಂಡುಬರುತ್ತದೆ. ಪಕ್ಕದಲ್ಲಿ ತನ್ನ ಸತಿಯ ಎರೆಡು ಕೈಗಳನ್ನ ಜೋಡಿಸಿ ನಮಸ್ಕರಿಸುತ್ತಿರುವ ಕಂಡುಬರುತ್ತದೆ. ವೀರನ ಬಲಬದಿಯಲ್ಲಿ ಮತ್ತೊಬ್ಬ ವೀರನ ಸೈನಿಕನನ್ನ ಕಾಣಬಹುದು, ಈತನು ತನ್ನ ಎಡಗೈಲಿ ಖಡ್ಗ, ಹಿಡಿದು ಬಲಗೈಯನ್ನು ಕೆಳಗೆ ಇಳಿ ಬಿಟ್ಟಿದ್ದಾನೆ. ವೀರನು ತುರುಬು ಕಟ್ಟಿದ್ದು ಕೊರಳ ಹಾರ, ಕಿವಿಓಲೆ, ಬುಜಬಂದಿ, ಕೈಕಡಗ, ವೀರಗಚ್ಚೆ, ಸೊಂಟಪಟ್ಟಿ, ಕಾಲಕಡಗ, ಧರಿಸಿದ್ದಾನೆ ಹಾಗೆಯೇ ತನ್ನ ಸತಿಯು ಸಹ ತುರುಬು ಕಟ್ಟಿದ್ದು ಕೊರಳಹಾರ, ತೊಳುಬಂದಿ, ಕೈಕಡಗ, ಸೀರೆಯನ್ನು ಧರಿಸಿದ್ದಾಳೆ. ಈ ವೀರಸತಿಗಲ್ಲು ಗಡಿರಕ್ಷಣೆಯ ವೀರಗಲ್ಲು ಎಂದು ಹೇಳಬಹುದು.

ಶಿಲ್ಪ : ವೀರಸತಿಗಲ್ಲು

ಸ್ಥಳ : ಪುಟ್ಟೇಗೌಡನವರ ಜಮೀನಿನಲ್ಲಿ

ಗ್ರಾಮ : ಖಂಡೇನಹಳ್ಳಿ

ಕಾಲಮಾನ : ಕ್ರಿ.ಶ ಸು. ೧೪-೧೫ನೇ ಶತಮಾನ

ಖಂಡೇನಹಳ್ಳಿ ಗ್ರಾಮವು ಧರ್ಮಪುರದಿಂದ ಪೂರ್ವಕ್ಕೆ ಸು. 6 ಕಿ.ಮಿ. ದೂರದಲ್ಲಿದೆ. ಗ್ರಾಮದ ಹೊರವಲಯದ ಪುಟ್ಟೇಗೌಡರ ಜಮೀನಿನಲ್ಲಿ ವೀರಸತಿಗಲ್ಲನ್ನು ಇದ್ದು ಈ ವೀರಸತಿಗಲ್ಲನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲಾಗಿದೆ, ವೀರನು ಕುದುರೆಯನ್ನು ಏರಿದ್ದಾನೆ, ಬಲಗೈಲಿ ಭರ್ಚಿಹಿಡಿದು ಬೀಸುತ್ತಿರುವಂತೆ ಎಡಗೈಲಿ ಕುದುರೆಯ ಲಗಾಮು ಹಿಡಿದ್ದಿದ್ದಾನೆ. ಕುದುರೆಯ ಮುಂಭಾಗದಲ್ಲಿ ಒಬ್ಬ ಸೈನಿಕನಿದ್ದಾನೆ, ಕುದುರೆಯ ಹಿಂಬಾಗದಲ್ಲಿ ವೀರನ ಸತಿಯು ತನ್ನ ಎರೆಡು ಕೈಗಳನ್ನು ಮೇಲಕ್ಕೆ ಎತ್ತಿ ನಿಂತಿದ್ದಾಳೆ, ತಲೆಯ ಮೇಲ್ಬಾಗದಲ್ಲಿ ಶಿವಲಿಂಗುವಿದ್ದು ಅಕ್ಕಪಕ್ಕದಲ್ಲಿ ಎರೆಡು ನಂದಿಗಳನ್ನು ಚಿತ್ರಿಸಲಾಗಿದೆ. ವೀರನು ತುರುಬುಕಟ್ಟಿದ್ದಾನೆ, ಕೊರಳಹಾರ, ಬುಜಬಂದಿ, ಕೈಕಡಗ, ವೀರಗಚ್ಚೆ, ಸೊಂಟದಲ್ಲಿ ಬಾಕುವನ್ನು ಇರಿಸಿದ್ದಾನೆ. ಕುದುರೆಗೆ ಜೀನು ಅಲಂಕಾರಿಕ ಲಗಾಮು ಹಾಕಲಾಗಿದೆ. ಆತನ ಸತಿಯು ಸಹ ಕೈಕಡಗ, ಕೊರಳಹಾರ, ಸೀರೆಯನ್ನು ಧರಿಸಿದ್ದಾಳೆ, ಇದನ್ನು ಗಡಿ ರಕ್ಷಣೆಯ ಸಂದರ್ಭದಲ್ಲಿ ಹೋರಾಟ ಮಾಡಿ ಮಡಿದಂತಹ ಸಂದರ್ಭದಲ್ಲಿ ನಿಲ್ಲಿಸಿದ ವೀರಗಲ್ಲು ಎಂದು ಹೇಳಬಹುದು. ಇದರ ಪಕ್ಕದ ಬಲಬದಿಯಲ್ಲಿ ಮತ್ತೊಂದು ವೀರಗಲ್ಲು ಇದ್ದು ಇದು ಸಹ ಕಪ್ಪುಗ್ರಾನೈಟ್ ಕಲ್ಲಿನಲ್ಲಿ

ಕೆತ್ತಲ್ಪಟ್ಟಿದೆ, ಇದರಲ್ಲಿ ವೀರನು ಎಡಗೈಲಿ ಬಿಲ್ಲನ್ನು ಹಿಡಿದು ಬಲಗೈಲಿ ಬಾಣವನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನ ಕಂಡರಿಸಿದ್ದು, ವೀರನು ತುರುಬು ಕಟ್ಟಿದ್ದಾನೆ, ಕೊರಳಹಾರ, ಬುಜಬಂದಿ, ಕೈಕಡಗ, ವೀರಗಚ್ಚೆ, ಕಾಲಕಡಗವನ್ನು ಧರಿಸಿದ್ದಾನೆ. ಇದೇ ಗ್ರಾಮದ ಊರ ಹೊರವಲಯದ ಹನುಮಂತೇಗೌಡರ ಜಮೀನಿನಲ್ಲಿ ಮತ್ತೊಂದು ವೀರಗಲ್ಲು ಇದೆ. ಇದನ್ನು ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕಂಡರಿಸಲಾಗಿದೆ. ಇದರಲ್ಲಿ ವೀರನು ತನ್ನ ಕೈಗಳಲ್ಲಿ ಭರ್ಚಿಯನ್ನು ಹಿಡಿದು ನಿಂತಿದ್ದಾನೆ, ಸೊಂಟದಲ್ಲಿ ಒಂದು ಬಾಕುವನ್ನು ಸಿಕ್ಕಿಸಿ ಕೊಂಡಿದ್ದಾನೆ, ಈತನು ತುರುಬುಕಟ್ಟಿದ್ದು ಕಿವಿಓಲೆ, ಕೊರಳಹಾರ, ತೋಳುಬಂದಿ, ಕೈಕಡಗ, ವೀರಗಚ್ಚೆ, ಕಾಲಕಡಗ, ದರಿಸಿದ್ದಾನೆ. ಇದು ಶಿಲ್ಪದ ಎಡ ಬಲ ಮೇಲ್ಭಾಗದಲ್ಲಿ ಸೂರ್ಯ,ಚಂದ್ರರನ್ನು ಕಂಡರಿಸಲಾಗಿದ್ದು, ಈ ವೀರಗಲ್ಲು ಗಡಿ ರಕ್ಷಣೆಯ ಸಂದರ್ಭದಲ್ಲಿ ಹೋರಾಟ ಮಾಡಿ ಮಡಿದ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲು ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಅನಂತರಂಗಾಚಾರ್ ಎನ್., ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ, ಪುಟ-೩೦೮
೨. ದೇವರಕೊಂಡಾರೆಡ್ಡಿ, ಭಾರತೀಯ ವಾಸ್ತು ವಿಧ್ಯೆ, ಪುಟ-೧
೩. ಅದೇ, ಪುಟ-೩, ೫,
೪. ಅದೇ, ಪುಟ-೬
೫. ರಾಮಯ್ಯಂಗಾರ್ ಎಚ್.ಕೆ., ಧಾರ್ಮಿದ ಕರ್ತವ್ಯಗಳು, ಪುಟ-೮೦
೬. ಅದೇ ಪುಟ-೭೭
೭. ಸುರೇಶ ಬಿ., ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪುಟ-೪೦
೮. ಗೋಪಾಲ್ ಬಾ. ರಾ., ಕರ್ನಾಟಕದ ಕಲೆಗಳು, ಪುಟ-೬
೯. ಎ. ಕ. ಸಂ, ಸಂಖ್ಯೆ-೨೧, ಹಿರಿಯೂರು, ಪುಟ-೨೯೫
೧೦. ಸುರೇಶ ಬಿ., ಪೂರ್ವೋಕ್ತ, ಪುಟ-೪೦
೧೧. ಶಿವರಾಮ್ ಕಾರಂತ್ ಕೆ., ಕರ್ನಾಟಕದಲ್ಲಿ ಶಿಲ್ಪ, ಪುಟ-೬
೧೨. ಸುರೇಶ ಬಿ., ಪೂರ್ವೋಕ್ತ, ಪುಟ-೨೩೫
೧೩. ಸುರೇಶ ಬಿ., ಪೂರ್ವೋಕ್ತ, ಪುಟ-೨೩೬
೧೪. ಶೇಷಶಾಸ್ತ್ರಿ., ಕರ್ನಾಟಕದ ವೀರಗಲ್ಲುಗಳು, ಪುಟ-೨೫
೧೫. ಅದೇ, ಪುಟ-೧೦೩
೧೬. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ-೨೪೦
೧೭. ಶೇಷಶಾಸ್ತ್ರಿ., ಪೂರ್ವೋಕ್ತ, ಪುಟ-೯೫
೧೮. ಅದೇ, ಪುಟ-೧೧೦
೧೯. ಅದೇ, ಪುಟ-೧೪೯
೨೦. ಅದೇ, ಪುಟ-೧೪೯
೨೧. ಅದೇ, ಪುಟ-೧೪೯

## ೫.೪ ಕೋಟೆ ಕೊತ್ತಲಗಳು

ರಕ್ಷಣಾ ವ್ಯವಸ್ಥೆಯನ್ನುಳ್ಳ ಪ್ರದೇಶವನ್ನು ಕೋಟೆ ಎನ್ನುವ ಅರ್ಥದಲ್ಲಿ ಕರೆಯಲಾಗುತ್ತದೆ. ಪ್ರಮುಖವಾಗಿ ರಾಜ್ಯ ರಾಜ ಹಾಗು ಜನಸಾಮಾನ್ಯರಿಗೋಸ್ಕರ ರಕ್ಷಣೆ ಒದಗಿಸುವಂತಹ ಮಹತ್ವವಾದ ಸ್ಥಳವಾಗಿದೆ ಎಂದು ರಾಜನೀತಿ ಪ್ರಕಾಶನದಲ್ಲಿ ಬೃಹಸ್ಪತಿಯ ವಚನವು ಉಲ್ಲೇಖಿಸಿದೆ.[೧] ಪ್ರಾಚೀನಕಾಲದ ಜನಪದಗಳಲ್ಲಿ ಚರ್ಚಿಸುವಾಗ ದುರ್ಗ ಎಂಬ ಪದವನ್ನು ಬಳಸಿರುವದನ್ನು ಕಾಣುತ್ತೇವೆ. ಸಂಸ್ಕೃತ ಸಾಹಿತ್ಯದಲ್ಲಿ ಕೋಟೆಗಳನ್ನು ದುರ್ಗ ಎಂಬ ಹೆಸರಿನಿಂದ ಕರೆಯಲಾಗಿದೆ. ಇದರ ಅರ್ಥ ಹೊರಗಿನ ಶತ್ರುಗಳಿಂದ ಕ್ರೂರಪ್ರಾಣಿಗಳಿಂದ ಕಾಡು ಜಂತುಗಳಿಂದ, ಬಾಹ್ಯ ಶತ್ರುಗಳಿಂದ ರಕ್ಷಣೆಗೋಸ್ಕರ ಆವರಣಗಳನ್ನು ಮಾಡಿಕೊಂಡಿರುವ ಸ್ಥಳ ಎಂಬುದಾಗಿ ಅರ್ಥೈಸಬಹುದು. ವೈದಿಕ ಸಾಹಿತ್ಯದಲ್ಲಿ ಕೋಟೆಗಳಿಗೆ ಪುರ ಅಥವಾ ಮಹಾಪುರ ಎಂಬ ಪದವನ್ನು ಸಹ ಬಳಸಲಾಗಿದೆ. ಮಹಾಪುರ ಎಂದರೆ ಭದ್ರವಾದ ಗೋಡೆಗಳಿಂದ ಸುತ್ತುವರಿಯಲ್ಪಟ್ಟಿರುವ ದೊಡ್ಡ ಪಟ್ಟಣ ಎಂದರ್ಥ.[೨] ಹಳೆಗನ್ನಡದಲ್ಲಿ ಕೋಟೆ ಎಂಬ ಮೂಲ ರೂಪವಿದ್ದು ಇದನ್ನು ಹೊಸಗನ್ನಡದಲ್ಲಿ ಕೋಟೆ ಎಂದು ಕರೆಯಲಾಗುತ್ತಿದ್ದು. ಆಂಗ್ಲ ಭಾಷೆಯಲ್ಲಿ ಪೋರ್ಟ್(Fort) ಎಂದು ಕರೆಯಲಾಗುತ್ತದೆ. ಕೋಟೆಯು ಯುದ್ಧ ತಂತ್ರದ ಒಂದು ರಚನೆಯಾಗಿದ್ದು ಶತ್ರುಗಳಿಗೆ ಭಯವನ್ನು ಉಟ್ಟಿಸುವಂತಹ ತಡೆಗೋಡೆಯಾಗಿದೆ.[೩]

ಕೋಟೆಗೆ ಸಂಬಂದಿಸಿದಂತೆ ಹಲವಾರು ವಿದ್ವಾಂಸರುಗಳು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನವನ್ನು ನೀಡಿದ್ದಾರೆ. ಜಿ.ಟಿ. ಪಾಟ್‌ರವರ ಪ್ರಕಾರ ಪ್ರಾಚೀನ ಕಾಲದಲ್ಲಿ ಈ ಕೋಟೆಗಳು ರಾಜದಾನಿಯನ್ನು ರಕ್ಷಿಸುವ ಸಲುವಾಗಿ ಇರುವಂತಹವು. ಯಕ್ಬರ್ ಸ್ಮೇಟ್‌ರವರ ಪ್ರಕಾರ, ಕೆಲವಿರೋಧಿಗಳಿಂದ ಯುದ್ಧ ತಡೆಯುವುದಕ್ಕೆ ಮತ್ತು ರಕ್ಷಣೆಗಾಗಿ ಕೋಟೆಗಳು ತುಂಬ ಅನುಕೂಲಕರವಾಗಿದ್ದವು ಕನ್ನಡ ವಿಶ್ವಕೋಶದಲ್ಲಿ ಕೋಟೆಯು ಯುದ್ಧ ಗತಿಯ ನಿಯಂತ್ರಣ ಕೇಂದ್ರವಾಗಿಯೂ ಯುದ್ಧ ವ್ಯವಸ್ಥೆಯ ಕೇಂದ್ರವಾಗಿಯೂ ಪ್ರಾಮುಖ್ಯತೆ ಪಡೆದಿದೆ ಎಂದು ಹೇಳಲಾಗಿದೆ.[೪] ಹಾಗೆಯೇ ಬೆಟಗೇರಿ ಕೃಷ್ಣಶರ್ಮರವರು ಹಿಂದಿನ ಕಾಲದ ನಮ್ಮ ರಾಜಕೀಯ ವ್ಯವಸ್ಥೆಗೆ ನಗರ, ಗ್ರಾಮ, ಹಳ್ಳಿ, ಪಟ್ಟಣಗಳಿಗೆ ಕೋಟೆಗಳು, ಸಂರಕ್ಷಿತ ಸಾದನಗಳಾಗಿದ್ದವು ಎಂದು ಅಭಿಪ್ರಾಯಪಟ್ಟಿದ್ದಾರೆ.[೫]

ಸುತ್ತಲೂ ಮಣ್ಣಿನ ದಿಬ್ಬವನ್ನು ಏರಿಸುವುದು, ಆಳವಾದ ಕಂದಕ ಮಾಡುವುದು, ಇಟ್ಟಿಗೆಯಿಂದಲೂ ಅಥವಾ ಕಲ್ಲಿನಿಂದಲೂ ಗೋಡೆಯನ್ನು ನಿರ್ಮಿಸಿ, ಶತ್ರುಗಳು, ಮತ್ತು ಪ್ರಾಣಿಗಳು ತಮ್ಮ ಮೇಲೆ ನುಗ್ಗಿ ಬಾರದಂತೆ ತಡೆಯುವುದಕ್ಕೆ ಭದ್ರವಾದ ಸ್ಥಾನದಲ್ಲಿ ನಿಂತು ಹೋರಾಡಲು ಅನುಕೂಲವಾಗುವಂತೆ ಕೋಟೆಗಳನ್ನು ನಿರ್ಮಿಸಿಲಾಗುತ್ತಿತ್ತು. ಆದಿವಾಸಿಗಳು ಟೈಗ್ರೀಸ್ ಮತ್ತು ಯುಪ್ರಟೀಸ್ ನದಿಯ ಪ್ರವಾಹದಿಂದ ಮತು ಕ್ರೂರ ಪ್ರಾಣೀಗಳಿಂದ ರಕ್ಷಣೆ ಪಡೆಯಲು ಮಣ್ಣಿನ ಒಡ್ಡುಗಳನ್ನು ಹಾಕಿರುವುದು ಪತ್ತೆಯಾಗಿದೆ.[೬]

ಕೋಟೆ ನಿರ್ಮಾಣವು ಮನುಕುಲದ ಒಂದು ಪ್ರಾಚೀನ ಕಲೆಯಾಗಿತ್ತು. ಆದಿಮಾನವನು ದುಷ್ಟಪ್ರಾಣಿಗಳಿಂದ ಪ್ರಾಕೃತಿಕ ವಿಕೋಪಗಳಿಂದ ತನ್ನನ್ನು ರಕ್ಷಿಸಿಕೊಳ್ಳುವ ಸಲುವಾಗಿ ನಿರ್ಮಿಸಿಕೊಂಡ ರಕ್ಷಣಾ ವ್ಯವಸ್ಥೆಯಲ್ಲಿ ಕೋಟೆ ಉಗಮವನ್ನು ಕಾಣಬಹುದು. ಕೋಟೆಗಳಲ್ಲಿ ಎರಡು ವಿಧಗಳಿವೆ. ಅಂದರೆ ಶಾಶ್ವತ ಕೋಟೆಗಳು, ಬಯಲು ಕೋಟೆಗಳು.

ಶಾಶ್ವತ ಕೋಟೆಗಳು ಎಂದರೆ ಗಡಿನಾಡು, ರೈಲು ಸಂಧು, ಪರ್ವತ ಕಣಿವೆ, ಸಮುದ್ರ ತೀರ, ಮುಂತಾದವುಗಳ ರಕ್ಷಣೆಗೆ ಮಾಡಿಕೊಂಡಂತಹವುಗಳು ಯುದ್ಧ ಸಂದರ್ಭದಲ್ಲಿ ಅವಶ್ಯಕತೆಗನುಗುಣವಾಗಿ ಸೈನಿಕರು ತಮ್ಮ ಬಳಿ ಇರುವಂತಹ ಆಯುದಗಳನ್ನು ಸುತ್ತಮುತ್ತಲ ಪ್ರದೇಶಗಳಲ್ಲಿ ಸಿಗುವ ಸಾಮಗ್ರಿಗಳಿಂದ ಅವಸರದಲ್ಲಿ ನಿರ್ಮಿಸಿಕೊಂಡಿರುವ ರಚನಗೆಳೇ ಬಯಲುಕೋಟೆಗಳು ಎಂದು ಹೇಳಲಾಗಿದೆ.

ಕೋಟೆಗಳ ಪ್ರಾಚೀನತೆಯನ್ನು ಮೌರ್ಯರ ಕಾಲದಿಂದ ಗುರುತಿಸಬಹುದು. ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಇಸಿಲ ಎಂಬ ಹೆಸರಿನ ಗ್ರಾಮವಿದ್ದು ಉಲ್ಲೇಖ ಕಂಡುಬರುತ್ತದೆ. ಕೋಟೆ ಎಂಬ ಅರ್ಥ ಅದಕ್ಕಿರುವುದರಿಂದ ಕೋಟೆಯಿಂದ ಆವೃತವಾಗಿರುವ ಊರು ಆದಾಗಿರಬಹುದೆನ್ನುವುದು ಹಲವು ಅಭಿಪ್ರಾಯ.[೭]

ಕರ್ನಾಟಕವನ್ನಾಳಿದ ಅರಸರು ಕೇವಲ ಯುದ್ಧಾಶ್ವ ಮತ್ತು ಕತ್ತಿ ಗುರಾಣಿಗಳ ಒಡೆಯರಾಗದೇ ಬೃಹತ್ತಾದ ಕೋಟೆಗಳನ್ನು ನಿರ್ಮಿಸಿದ್ದಾರೆ. ರಾಜದಾನಿ ಸಾಂಸ್ಕೃತಿಕ ಪರಂಪರೆ ಮತ್ತು ಚಕ್ರಾಧಿಪತ್ಯವನ್ನು ರಕ್ಷಿಸುವಲ್ಲಿ ಕೋಟೆಗಳು ಮಹತ್ತರವಾದ ಪಾತ್ರವಹಿಸಿವೆ ಎಂದು ಹೇಳಬಹುದು. ಕೋಟೆಯ ಒಳಗೆ ಜೀವನವಶ್ಯಕವಾದ ವಸ್ತುಗಳನ್ನು ಸಂಗ್ರಹಿಸಲಾಗುತ್ತಿತ್ತು. ಇದರಿಂದ ಹಲವು ದಿನಗಳವರೆಗೆ ಅಕ್ರಮಣಕಾರರಿಂದ ಕೋಟೆಯ ಒಳಗಿನ ನಾಗರೀಕರಿಗೆ ರಕ್ಷಣೆ ದೊರೆಯುತ್ತಿತ್ತು. ಮುಖಾಮುಖಿ ಯುದ್ಧದಲ್ಲಿ ಹೋರಾಡಲು ಅಸಮರ್ಥರಾದ ಯೋಧರು. ನಾಗರೀಕರು ಸಹ ಕೋಟೆ ಯುದ್ಧದಲ್ಲಿ ಭಾಗವಹಿಸಬಹುದಾಗಿತ್ತು. ಇದರಿಂದಾಗಿ ಕೋಟೆ ನಿರ್ಮಾಣಕ್ಕೆ ಪ್ರಾಚೀನ ಕಾಲದಿಂದಲೇ ಅತ್ಯಂತ ಪ್ರಾಮುಖ್ಯತೆಯನ್ನು ಅರಸರು ನೀಡಿದ್ದರು. ಕಾಡು ಮೃಗಗಳು, ವೈರಿಗಳು, ವಿಕೋಪಗಳಿಂದ, ರಕ್ಷಣೆ ಪಡೆಯುವಾಗ ಕೋಟೆಗಳು ತುಂಬಾ ಮಹತ್ತರವಾದ ಪಾತ್ರವನ್ನು ವಹಿಸುತ್ತಿದ್ದವು. ರಾತ್ರಿ ವೇಳೆಯಲ್ಲಿ ಆಕ್ರಮಣಮಾಡಬಹುದಾದ ಹುಲಿ, ಆನೆ, ಕರಡಿ ಇತ್ಯಾದಿ ದುಷ್ಟಪ್ರಾಣಿಗಳಿಂದ ಸುಲಭವಾಗಿ ತಪ್ಪಿಸಿಕೊಳ್ಳಲು ನಗರ ಹಾಗೂ ಗ್ರಾಮಗಳ ಸುತ್ತ ಎತ್ತರವಾದ ಕಂದಕ ಸಹಿತ ಕೋಟೆಯನ್ನು ನಿರ್ಮಿಸುತ್ತಿದ್ದರು. ಹೀಗಾಗಿ ಸಾಮಾಜಿಕ ಬದುಕಿನಲ್ಲಿ ಸುರಕ್ಷತೆಯ ದೃಷ್ಟಿಯಿಂದ ಕೋಟೆಯು ಪ್ರಮುಖ ಸ್ಥಾನ ಪಡೆದಿದೆ.ಅನೇಕ ಪಾಳೆಯಗಾರರು ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಕೋಟೆಗಳನ್ನು ನಿರ್ಮಿಸಿದ್ದರು. ಪ್ರಮುಖವಾಗಿ ಚಿತ್ರದುರ್ಗದ ಪಾಳೆಯಗಾರರು, ನಿಡುಗಲ್ಲು, ಹರಪನಹಳ್ಳಿ, ಶಿರಾದ ಪಾಳೆಯಗಾರರು ತಮ್ಮ ವ್ಯಾಪ್ತಿಯಲ್ಲಿ ಅಂದಿನ ರಾಜಕೀಯ ಹಾಗೂ

ಸಾಮಾಜಿಕ ಜೀವನದಲ್ಲಿ ಅವಿಭಾಜ್ಯ ಅಂಗಗಳಾಗಿ ತಮ್ಮದೇ ಆದ ರೀತಿಯಲ್ಲಿ ಪಾತ್ರವನ್ನು ನಿರ್ವಹಿಸಿರುವುದು ಕಂಡುಬಬಂದಿದ್ದು ಗಡಿಭಾಗದ ಕೋಟೆಗಳನ್ನು ರಕ್ಷಣಾ ಉದ್ದೇಶಕ್ಕಾಗಿ ನಿರ್ಮಿಸಿದ್ದಾರೆ.[೮] ಮಧ್ಯನಾಡಿನಲ್ಲಿ ಆಡಳಿತಾತ್ಮಕ ದೃಷ್ಟಿಯಿಂದ ನಿರ್ಮಿಸಿದ ಕೋಟೆಗಳು ಇವೆ. ಕೋಟೆಗಳು ಕೇವಲ ಸೈನಿಕ ವ್ಯವಸ್ಥೆಗೆ ಮಾತ್ರ ನಿಯೋಜಿತಗೊಂಡಿರುವುದಿಲ್ಲ. ಆರ್. ಶೇಷಶಾಸ್ತ್ರಿಯವರು ಹೇಳಿರುವಂತೆ ಕೋಟೆ ಎಂಬುದು ಅಂದಿನ ರಾಜಕೀಯ ವ್ಯವಸ್ಥೆ ಮತ್ತು ಜನತೆಯ ರಕ್ಷಣೆಯ ಭಾರವನ್ನು ಹೊತ್ತಿರುತ್ತಿದ್ದವು. ಕೋಟೆಯ ಬಲದ ಮೇಲೆ ಆಡಳಿತ ವ್ಯವಸ್ಥೆಯ ಅಳಿವು ಉಳಿವು ಅವಲಂಬಿಸುತ್ತಿತ್ತು ಎಂದು ಹೇಳುವ ಮೂಲಕ ಕೋಟೆಯ ಮಹತ್ವವನ್ನು ತಿಳಿಸಿದ್ದಾರೆ.[೯]

ಕೋಟೆಗಳು ಕೇವಲ ರಾಜಕೀಂಯು ಸೈನಿಕ ಕೇಂದ್ರಗಳಾಗಿರದೆ ಸಾಂಸ್ಕೃತಿಕ ಕೇಂದ್ರಗಳಾಗಿದ್ದವೆಂದು ಹೇಳಬಹುದು. ಮನರಂಜನೆಗಾಗಿ ಹಬ್ಬ ಹರಿದಿನಗಳು ಉತ್ಸವಗಳು, ಕ್ರೀಡಕೂಟಗಳು, ಆಗಾಗ್ಗೆ ಕೋಟೆಯೊಳಗೆ ನಡೆಯುತ್ತಿದ್ದವು. ಹಾಗೆಯೇ ಕೋಟೆಯೊಳಗೆ ಅನೇಕ ಕೇಗಾರಿಕಾ ಕೇಂದ್ರಗಳು, ಗುಡಿ ಕೈಗಾರಿಕೆಗಳು ಅಸ್ತಿತ್ವದಲ್ಲಿರುತ್ತಿದ್ದವು. ಹೀಗಾಗಿ ಕೋಟೆಗಳು ಆಧುನಿಕ ನಗರದ ಕಲ್ಪನೆಯನ್ನು ಹೊಂದಿದ್ದವು ಎಂದು ಹೇಳಬಹುದು.

ಕೋಟೆ ಎಂದಾಕ್ಷಣ ನೆನಪಾಗುವುದು ಕೇವಲ ಗೋಡೆಗಳು ಮಾತ್ರ. ಆದರೆ ಕೋಟೆ ಗೋಡೆಗಳು ಅನೇಕ ಅಂಗಭಾಗಗಳನ್ನು ಒಳಗೊಂಡಿರುತ್ತವೆ. ಇದೊಂದು ಸೈನಿಕರಿಗೆ ರೂಪಿತ ರಕ್ಷಣವ್ಯವಸ್ಥೆಯ ದೊಡ್ಡ ಸ್ಥಳ. ಗೊಡೆಗಳ ಜೊತೆಗೆ ಇನ್ನು ಹಲವಾರು ಅಂಗಾಂಗಗಳು ಸಹ ಇವೆ. ಇವುಗಳ ಬಗ್ಗೆ ಶಾಸನಾಕಾರಗಳು ವಿರಳವಾಗಿದ್ದರೂ ಸಾಹಿತ್ಯಿಕ ಗ್ರಂಥಗಳು ವಿಮುಲವಾದ ಮಾಹಿತಿಯನ್ನ ಒದಗಿಸುತ್ತವೆ. ಕೋಟೆಗಳ ಅಂಗಭಾಗಗಳ ಬಗ್ಗೆ ವಿವರಿಸುವಾಗ ಅವು ಕೋಟೆ ಹಾಗೂ ರಕ್ಷಣೋಪಾಯಗಳ ವಾಸ್ತು ಲಕ್ಷಣಗಳನ್ನು ವಿವರಿಸುತ್ತವೆ. ಶಿಲ್ಪ ಶಾಸ್ತ್ರದಲ್ಲಿ ಪ್ರತಿಪಾದಿಸುವಂತೆ ರಕ್ಷಣ ವಾಸ್ತುಶಿಲ್ಪವು ವಪ್ರ (ಮಣ್ಣಿನ ಇಳಿವೂರೆ), ವರಿಕೆ (ಕಂದಕ ಅಥವಾ ಅಗಳು), ಕೋಟೆತೆನೆ (ಆಕ್ರೋಃಶ), ಮುಗಿಲಟ್ಟಿಗೆ ಕೊತ್ತಲ (ಬುರುಜು), ಕೋಟೆಯ ಬಾಗಿಲು, ಕೋಟೆಯ ರಜ, ದಿಡಿ, ಕುಪಿಯ ಮೇಲಿನ ಉಪಕರಣಗಳು ಮುಂತಾದ ಅಂಗಭಾಗಗನ್ನು, ಒಳಗೊಂಡಿರುವ ಸ್ಥಳವೇ ಕೋಟೆ. ಕೋಟೆಗಳನ್ನು ಹಲವು ಪ್ರಕಾರಗಳಾಗಿ ನಿರ್ಮಾಣ ಮಾಡಲಾಗಿತ್ತು. ಅಂದರೆ ಗಿರಿದುರ್ಗ, (ಎತ್ತರವಾದ ಬೆಟ್ಟ ಪ್ರದೇಶದಲ್ಲಿ ನಿರ್ಮಾಣ) ಜಲದುರ್ಗ (ನೀರಿನಿಂದ ಸುತ್ತುವರಿದಿರುವ ಪ್ರದೇಶ) ವನದುರ್ಗ (ಗಿಡಮರಗಳಿಂದ ಆವೃತವಾದ ವನ ಪ್ರದೇಶ), ನೀಲದುರ್ಗ (ನೆಲವನ್ನು ಅಗೆದ ಅಡುಗುತಾಣ), ಈ ರೀತಿಯಲ್ಲಿ ರೂಪಗಳನ್ನು ನಿರ್ಮಿಸಿ ರಕ್ಷಣೆಗೆ ವ್ಯವಸ್ಥೆ ಕಲ್ಪಿಸಿಕೊಳ್ಳಲಾಗಿತ್ತು. ದಕ್ಷಿಣ ಭಾರತದಾದ್ಯಂತ ಆಳ್ವಿಕೆ ನಡೆಸಿದ ಬಹುತೇಕ ಅರಸು ಮನೆತನಗಳವರು ಅನೇಕ ಕೋಟೆಗಳನ್ನು ನಿರ್ಮಿಸಿದ್ದಾರೆ.

ಅಂತವರಲ್ಲಿ ಪ್ರಮುಖವಾಗಿ, ಶಾತವಾಹನರು, ಕದಂಬರು, ಬಾದಾಮಿ, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಗಂಗರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು, ಬಹುಮನಿ ಹಾಗೂ ಆದಿಲ್ ಶಾಹಿ ಸುಲ್ತಾನರು ಮುಂತಾದವರನ್ನು ಹೆಸರಿಸಬಹುದು.[೧೦]

ಈ ಕೋಟೆಗಳ ಬಗ್ಗೆ ಬ್ರೂಸ್‌ಪೂಟ್, ಬಿ.ಎಲ್. ರೈಸ್, ಎಂ.ಎಚ್. ಕೃಷ್ಣ, ಮಾರ್ಟಿಮರ್ ವೀಲರ್, ಎಂ. ಶೇಷಾದ್ರಿ, ಅ.ಸುಂದರ, ಲಕ್ಷ್ಮಣ ತೆಲಗಾವಿ, ಸೂರ್ಯನಾಥ ಕಾಮತ್, ಎ.ವಿ. ನರಸಿಂಹಮೂರ್ತಿ ಇತ್ಯಾದಿ ವಿದ್ವಾಂಸರು, ಅವರ ಲೇಖನಗಳು, ಸಾಕಷ್ಟು ವಿಷಯವನ್ನು ಪುಷ್ಟೀಕರಿಸಿವೆ.[೧೧] ವಿದ್ವಾಂಸರುಗಳು ಅಲ್ಲಿನ ವಾಸ್ತುಶಿಲ್ಪ, ವಿನ್ಯಾಸಗಳ ಬಗ್ಗೆ ಅವಲೋಕಿಸಿ ವಿಶೇಷ ಸಾಧನೆಗಳನ್ನು ಸಂಶೋಧನ ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

ಚಿತ್ರದುರ್ಗ ಜಿಲ್ಲೆಯು ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದಿರುವುದರಿಂದ ಇಲ್ಲಿ ಅನೇಕ ಅರಸು ಮನೆತನಗಳು ಆಳ್ವಿಕೆ ನಡೆಸಿರುವುದನ್ನು ಕಾಣುತ್ತೇವೆ. ವಿಭಿನ್ನ ಕಾಲ ಘಟ್ಟದಲ್ಲಿ ಆಳ್ವಿಕೆ ನಡೆಸಿದ ಅರಸರುಗಳು ಈ ಭಾಗದಲ್ಲಿ ಅನೇಕ ಕೋಟೆಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾಗಿ ಚಿತ್ರದುರ್ಗ, ಹೊಸದುರ್ಗ, ನಾಯಕನಹಟ್ಟಿ ಸಮೀಪದ ಹೊಸಗುಡ್ಡ ಕೋಟೆ, ವೇಣುಕಲ್ಲುಗುಡ್ಡ, ಇತ್ಯಾದಿಗಳು ಇಂದಿಗೂ ಸಹ ಉತ್ತಮ ಸ್ಥಿತಿಯಲ್ಲಿದ್ದು ಇಲ್ಲಿಯ ಐತಿಹಾಸಿಕ ಮಹತ್ವವನ್ನು ಸಾರುತ್ತಿವೆ. ಅದೇ ರೀತಿಯಲ್ಲಿ ಧರ್ಮಪುರ ಹೋಬಳಿ ಸುತ್ತಮುತ್ತಲಿನ ಪರಿಸರದಲ್ಲಿ ಹಲವು ಕೋಟೆಗಳು ಅವುಗಳೂ ಸಹ ಹಲವು ರಾಜಮನೆತನಗಳ ಕಾಲಾವದಿಯಲ್ಲಿ ನಿರ್ಮಿಸಲಾಗಿವೆ ಕೆಲವು ಗ್ರಾಮಗಳ ಸುತ್ತಮುತ್ತಲು ಕೋಟೆಗಳು ಶಿಥಿಲಗೊಂಡು ನಶಿಸಿ ಹೋಗಿದ್ದರೆ ಮತ್ತು ಕೆಲವು ಪ್ರದೇಶದಲ್ಲಿ ಐತಿಹಾಸಿಕತೆಯ ಮಹತ್ವ ಸಾರುತ್ತಾ ಕೋಟೆಗಳು ಉಳಿದುಕೊಂಡಿವೆ, ಅವುಗಳಲ್ಲಿ ವೇಣುಕಲ್ಲುಗುಡ್ಡ, ಕಣಜನಹಳ್ಳಿ ಮತ್ತು ಹರ್ತಿಕೋಟೆಯಲ್ಲಿ ಕೋಟೆಯ ಅವಶೇಷಗಳನ್ನು ಇಂದಿಗೂ ಕಾಣಬಹುದು. ಆದರೆ ಪಿ.ಡಿ,ಕೋಟೆ, ಬೇತೂರು, ಬಿದರಕೆರೆ, ಶಿಡ್ಲಯ್ಯನಕೋಟೆ, ಕಂದೀಕೆರೆ ಪ್ರದೇಶದಲ್ಲಿ ಮಣ್ಣಿನಿಂದ ನಿರ್ಮಿಸಲ್ಪಟ್ಟಿರುವ ಕೋಟೆಗಳು ಸಂಪೂರ್ಣ ನಶಿಸಿ ಹೋಗಿವೆ. ಆದರೂ ಕೋಟೆ ಇದ್ದುದರ ಬಗ್ಗೆ ಕುರುಹುಗಳು ಕಂಡುಬರುತ್ತವೆ.

**ವೇಣುಕಲ್ಲು ಗುಡ್ಡದ ಕೋಟೆ**

ವೇಣುಕಲ್ಲು ಗುಡ್ಡ ಗ್ರಾಮವು ಧರ್ಮಪುರ ಕೇಂದ್ರದಿಂದ ಹಿರಿಯೂರಿಗೆ ಹೋಗುವ ಮಾರ್ಗದಲ್ಲಿ ಸುಮಾರು ೬ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಐತಿಹಾಸಿಕವಾದ ಸ್ಥಳವಾಗಿದ್ದು ಪಾಳೆಯಗಾರರ ಕಾಲದ ಅನೇಕ ಕುರುಹುಗಳು ಇಂದಿಗೂ ಕಂಡುಬರುತ್ತವೆ. ಅವುಗಳಲ್ಲಿ ಆಳ್ವಿಕೆಯನ್ನು ಕಾಣಲಾಗಿದ್ದು ಇದೊಂದು ಗಿರಿದುರ್ಗವಾಗಿದ್ದು, ಊರ ಮಧ್ಯದಲ್ಲಿ ಬಸವಣ್ಣನ ದೇವಾಲಯದ ಮುಂಭಾಗದಲ್ಲಿರುವ ಶಾಸನಗಳು, ಬೆಟ್ಟದ ಮೇಲಿರುವ ಕೋಟೆ, ದೇವಾಲಯಗಳು, ಹಲವು ವೀರ ಮಾಸ್ತಿಕಲ್ಲುಗಳು, ಇಲ್ಲಿನ ಇತಿಹಾಸಕ್ಕೆ ಸಾಕ್ಷಿಗಳಾಗಿವೆ. ಈ

ಕೋಟೆಗೆ ಮತ್ತು ಗ್ರಾಮಕ್ಕೆ ಸಂಬಂಧ ಪಟ್ಟಂತಹ ದಾಖಲೆಗಳು ಈಗಲೂ ಸಹ ಲಭ್ಯವೆಂದು ಹೇಳಲಾಗುತ್ತಿದೆಯಾದರು ಇವುಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿಲ್ಲ. ಈ ಗ್ರಾಮದ ಇತಿಹಾಸವು ರತ್ನಗಿರಿ, ಹರತಿ, ನಿಡುಗಲ್ಲು ಮತ್ತು ಚಿತ್ರದುರ್ಗ ಪಾಳೆಯಗಾರರ ಚರಿತ್ರೆಯಲ್ಲಿ ಉಳಿದುಕೊಂಡಿದೆ. ವೇಣುಕಲ್ಲುಗುಡ್ಡ ಉತ್ತರ ಅಕ್ಷಾಂಶ ೧೪°೧೦ ಮತ್ತು ಪೂರ್ವ ರೇಖಾಂಶ ೭೫° ೪೮ ಇದ್ದು. ಸಮುದ್ರ ಮಟ್ಟದಿಂದ ೨,೯೪೪ ಅಡಿ ಮೇಲಿದೆ.

ಈ ಹಿಂದೆ ಈ ಗುಡ್ಡಕ್ಕೆ ಕೆಣಿಕಲ್ಲುಗುಡ್ಡ ಎಂಬ ಹೆಸರಿದ್ದುದು ತಿಳಿದುಬರುತ್ತದೆ.[೧೨] ಸ್ಥಳೀಯ ಐತಿಹ್ಯವೊಂದರ ಪ್ರಕಾರ ಪುರಾಣ ಪ್ರಸಿದ್ಧಿಯಾದ ರೇಣುಕೆಯು ಎಲ್ಲಮ್ಮ ಸವದತ್ತಿಯಿಂದ ಗುಂಟನೂರು ಮೂಲಕ ಇಲ್ಲಿಗೆ ಬಂದು ಈ ಬೆಟ್ಟದ ಮೇಲೆ ನೆಲಸಿ ಪರಶುರಾಮನಿಗೆ ಜನ್ಮ ನೀಡಿದಳೆಂಬ ಐತಿಹ್ಯವಿದೆ.

ಈಗಲೂ ಕೋಟೆಯ ಉತ್ತರಕ್ಕಿರುವ ಒಂದು ಬಂಡೆಯನ್ನು ಕೋಡಳಮ್ಮನ ಬಂಡೆ ಎಂದು ಕರೆಯುತ್ತಾರೆ. ಇಲ್ಲಿ ನೆಲೆಸಿದ ರೇಣುಕೆಯು ತರುವಾಯ ಇಲ್ಲಿಂದ ದಕ್ಷಿಣಕ್ಕೆ ೩ ಕಿ.ಮೀ. ದೂರದಲ್ಲಿರುವ ಕೋಡಿಹಳ್ಳಿಗೆ ಹೋಗಿ ನೆಲಸಿದ್ದರಿಂದ ಮೇಲಿನ ಹೆಸರು ಬಂದಿದೆ. ಐತಿಹಾಸಿಕ ಸ್ವರೂಪದ ರೇಣುಕೆಗೆ ಎಲ್ಲಮ್ಮ, ಗುಡ್ಡದಮ್ಮ ಮುಂತಾದ ಹೆಸರುಗಳಿಂದ ಕರೆಯಲಾಗಿದೆ.[೧೩] ರೇಣುಕೆಯು ಗುಡ್ಡದ ದೇವತೆಯಾಗಿದ್ದರಿಂದ ಈ ಬೆಟ್ಟಕ್ಕೆ ರೇಣುಕಲ್ಲು ಗುಡ್ಡ ಎಂಬ ಹೆಸರು ಬಂದಿರುವ ಸಾಧ್ಯತೆ ಇದೆ. ಪಾಳೆಯಗಾರರ ಕಾಲದಲ್ಲಿ ಬೆಟ್ಟದ ಮೇಲೆ ಸ್ಥಾಪಿಸಿರುವ ವೇಣುಗೋಪಾಲ ಅಥವಾ ರಂಗಪ್ಪನ ದೇವಸ್ಥಾನ ನಿರ್ಮಾಣ ಮಾಡಿ ಈ ದೇವರನ್ನು ಪೂಜಿಸುತ್ತಿದ್ದುದರಿಂದ ಈ ಗ್ರಾಮಕ್ಕೆ ವೇಣುಕಲ್ಲು ಗುಡ್ಡ ಎಂಬ ನಾಮಕರಣ ಆಗಿದೆ. ಪ್ರಸ್ತುತ ಇಂದಿಗೂ ಸಹ ಈ ಹೆಸರೇ ಪ್ರಚಲಿತದಲ್ಲಿದೆ.

ಬೃಹತ್ತಾದ ಬೆಟ್ಟದ ಮೇಲಿರುವ ಕೋಟೆಯನ್ನು ಯಾರು ಯಾವಾಗ ಕಟ್ಟಿಸಿದ್ದರೆಂಬುದಕ್ಕೆ ಸ್ಪಷ್ಟವಾದ ದಾಖಲೆಗಳು ಇಲ್ಲವಾದರೂ ಇದು ವಿಜಯನಗರ ಕಾಲದ ಒಂದು ಆಡಳಿತ ಸೀಮೆಯಾಗಿತ್ತು ಎನ್ನುವುದು ಸ್ಪಷ್ಟ.[೧೪] ಈ ಸೀಮೆಯಲ್ಲಿ ಬರುವ ಹಾಗೂ ಈ ಗುಡ್ಡಕ್ಕೆ ೧೦ ಕಿ.ಮೀ. ದೂರವಿರುವ ಸೂಗೂರು[೧೫] ಮತ್ತು ಖಂಡೇನಹಳ್ಳಿಗಳಲ್ಲಿ ವಿಜಯನಗರದ ಅರಸರು ಕೋಟೆಗಳನ್ನು ನಿರ್ಮಿಸಿರುವುದಕ್ಕೆ ಶಾಸನಾಧಾರಗಳಿವೆ.[೧೬] ಅಲ್ಲದೆ ವಿಜಯನಗರದ ಅರಸರು ತಮ್ಮ ಆಡಳಿತ ಕೇಂದ್ರದ ಸುತ್ತಲೂ ರಕ್ಷಣಾ ಗೋಡೆಗಳನ್ನು ನಿರ್ಮಿಸುತ್ತಿದ್ದರು.[೧೭] ಈ ದೃಷ್ಟಿಯಿಂದ ಇಲ್ಲಿರುವ ಕೋಟೆಯು ವಿಜಯನಗರದ ಅರಸರ ಕಾಲದಲ್ಲಿ ನಿರ್ಮಾಣಗೊಂಡು ಮುಂದೆ ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ಮುಂದುವರೆಯುತ್ತಾ ಬಲಿಷ್ಟವಾಯಿತು. ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿದ್ದ ಈ ಪ್ರದೇಶವನ್ನು ಹರತಿ ಐಮಂಗಲದ ತಿಪ್ಪಳನಾಯಕನು ಆಳ್ವಿಕೆ ಮಾಡುತ್ತಿದ್ದನು.[೧೮] ತರುವಾಯ ರತ್ನಗಿರಿ ಸೀಮೆಗೆ ಸೇರಿದ್ದ ಈ ಕೋಟೆಯನ್ನು ಹಿರೇ ಮದಕರಿನಾಯಕನು ಜಯಿಸಿದ ಘಟನೆಯನ್ನು ಪಾಳೆಯಗಾರರ

ದಾಖಲೆಗಳಲ್ಲಿ ಕಾಣಬಹುದಾಗಿದೆ.[೧೯] ತದನಂತರವಾಗಿ ಕಸ್ತೂರಿರಂಗಪ್ಪನಾಯಕನ ಕಾಲಾವಧಿಯಲ್ಲಿ ಈತನ ದಳಪತಿ ಬೊಮ್ಮಲಿಂಗಯ್ಯನು ಈ ಕೋಟೆಯನ್ನು ಆಳಿದನೆಂದು ಸ್ಥಳೀಯ ದಾಖಲೆಗಳು ನಿರೂಪಿಸುತ್ತವೆ. ಈತನ ಕಾಲದಲ್ಲಿ ಗುಡ್ಡವು ೧೬ ಹಳ್ಳಿ ಸೀಮೆಯಾಗಿತ್ತು.[೨೦] ಅವುಗಳೆಂದರೆ ಚಿಲ್ಲಹಳ್ಳಿ, ಹರಿಯಬ್ಬೆ, ಅಬ್ಬಿನಹೊಳೆ, ರಂಗಾಪುರ, ಕೋಡಿಹಳ್ಳಿ, ಸುಣದ ತಿಮ್ಮನಹಳ್ಳಿ, ಕಂಬತ್ತನಹಳ್ಳಿ, ನಿಲಗೂರು, ಗೂಳ್ಳ ಕಣಜನಹಳ್ಳಿ, ರಂಗಾಪುರ, ಮುಂಗುಸವಳ್ಳಿ, ಈಶ್ವರಗೆರೆ, ದೇವರಕೊಟ್ಟ, ಸಕ್ಕರ, ಹೂವಿನಹೊಳೆ, ಧರ್ಮಪುರ ಈ ಎಲ್ಲಾ ಸೀಮೆಗಳನ್ನೊಳಗೊಂಡು ವೇಣುಕಲ್ಲು ಗುಡ್ಡವು ಚಿತ್ರದುರ್ಗ ಪಾಳೆಯಗಾರರ ಗಡಿ ಸೀಮೆಗಳಲ್ಲೊಂದಾಗಿತ್ತು.[೨೧]

ಕಸ್ತೂರಿರಂಗಪ್ಪನಾಯಕನ ಕಾಲದಲ್ಲಿ ವೇಣುಕಲ್ಲು ಗುಡ್ಡವು ಸಾಂಸ್ಕೃತಿಕ, ರಾಜಕೀಯ ಹಾಗೂ ಧಾರ್ಮಿಕ ಪ್ರಸಿದ್ಧಿಯನ್ನು ಪಡೆಯಿತಲ್ಲದೆ ಇಲ್ಲಿ ಕೋಟೆಕೊತ್ತಲುಗಳು ಕಟ್ಟಲ್ಪಟ್ಟು ವಿಸ್ತಾರವಾಗಿ ಬೆಳೆದು ನಂತರ ರಾಜ್ಯವಾಯಿತು. ಇದರ ಸಾಮ್ರಾಜ್ಯವು ಉತ್ತರಕ್ಕೆ ಮೊಳಕಾಲ್ಮುರು, ದಕ್ಷಿಣಕ್ಕೆ ರತ್ನಗಿರಿ, ಪೂರ್ವಕ್ಕೆ ನಿಡುಗಲ್ಲು ಹಾಗೂ ಪಶ್ಚಿಮಕ್ಕೆ ಮತ್ತೋಡಿನಿಂದ ಹೊಸದುರ್ಗದವರೆವಿಗೂ ವಿಸ್ತರಿಸಿತ್ತು ಎನ್ನಲಾಗಿದೆ.[೨೨] ಬೆಟ್ಟದ ಮೇಲೆ ಏಳು ಸುತ್ತಿನ ಕೋಟೆ, ಕೋಟೆಯಲ್ಲಿ ನಿಪುಣರಾದ ಸೈನಿಕರನ್ನೊಳಗೊಂಡ ಕೆರೆ, ತುರಗ, ರಥ, ಬಿಲ್ಲುಬಾಣ ಮೊದಲಾದ ಸೈನ್ಯ ವ್ಯವಸ್ಥೆ ಇತ್ತು. ಸಾಂಸ್ಕೃತಿಕ ಕೇಂದ್ರವಾಗಿದ್ದು, ದೇವಾಲಯ, ಕೆರೆ, ಕೈತೋಟಗಳಿಂದ ಸುಂದರವಾಗಿ ನಿರ್ಮಿತವಾಗಿತ್ತು. ದೀಪಾವಳಿ, ನವರಾತ್ರಿ, ಉತ್ಸವಗಳು ನಡೆದುಕೊಂಡುಬಂದಿದ್ದವು. ಇಂತಹ ಸಂಪದ್ಭರಿತ ನಾಡಿನ ಮೇಲೆ ಮೊಘಲರು, ಪಠಾಣರು, ಸುಲ್ತಾನರು ಕಣ್ಣಿಟ್ಟರು. ಆಗ ಇಲ್ಲಿನ ದಳಪತಿ ಬೊಮ್ಮಲಿಂಗಯ್ಯನು ಹೋರಾಡಿದ ಸಾಹಸವನ್ನು ಸ್ಥಳೀಯ ದಾಖಲೆಗಳು ವಿವರಿಸುತ್ತವೆ.[೨೩]

ವಿಶಾಲವಾದ ಬಯಲು ಪ್ರದೇಶದಲ್ಲಿ ದ್ವೀಪದಂತೆ ಇರುವ ಒಂಟಿ ಗುಡ್ಡವನ್ನು ಬಳಸಿಕೊಂಡು ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆಯ ಪೂರ್ವ ಭಾಗದಲ್ಲಿ ಏಳುಸುತ್ತುಗಳಿದ್ದು ಗ್ರಾಮ ರಕ್ಷಣೆಗಿದ್ದ ಎರಡು ನೆಲಸುತ್ತಿನ ಕೋಟೆಗಳು ಹಾಗೂ ದ್ವಾರಗಳು ಸಂಪೂರ್ಣವಾಗಿ ಶಿಥಿಲಗೊಂಡಿವೆ. ಬೆಟ್ಟದ ಮೇಲೆ ಐದು ಸುತ್ತಿನ ಕೋಟೆಯ ಅವಶೇಷಗಳು ಈಗಲೂ ಉಳಿದುಕೊಂಡು ಬಂದಿವೆ. ಬೆಟ್ಟದ ಮೇಲಿರುವ ಕೋಟೆಯಲ್ಲಿ ಮೂರು ಬಾಗಿಲುಗಳು ಮಾತ್ರ ಕಾಣಸಿಗುತ್ತವೆ. ಮೊದಲನೆಯದು ಊರುಬಾಗಿಲು, ಎರಡನೆಯದು ಕಲ್ಲುಬಾಗಿಲು, ಮೂರನೆಯದು ರಂಗಯ್ಯನ ಬಾಗಿಲು ಎನ್ನುವ ಹೆಸರುಗಳಿಂದ ಕರೆಯಲ್ಪಡುತ್ತಿವೆ. ಬೆಟ್ಟದ ಮೇಲೆ ನಿರ್ಮಾಣವಾಗಿರುವ ಈ ದ್ವಾರಗಳು ದೂರದಿಂದ ನೋಡಿದರೆ ಒಂದೇ ನೇರದಲ್ಲಿ ಕಂಡು ಬಂದರೂ ಸಹ ಹತ್ತಿರದಿಂದ ನೋಡಿದಾಗ ಬಾಗಿಲುಗಳು ಬೇರೆ ಬೇರೆ ಸ್ಥಳಗಳಲ್ಲಿ ರಚನೆಗೊಂಡಿವೆ. ದ್ವಾರಬಾಗಿಲುಗಳ ದಾರಿಯು ಹಾವಿನೋಪಾದಿಯಲ್ಲಿ ಬೆಳೆಯುತ್ತಾ ಹೋಗಿದೆ.

ಸಾಮಾನ್ಯವಾಗಿ ಶತೃಗಳನ್ನು ಸೆರೆಹಿಡಿಯಲು ಇಕ್ಕಟ್ಟಿನಲ್ಲಿ ಸಿಕ್ಕಿಸುವ ತಂತ್ರ ಇದಾಗಿದೆ.[೨೪] ಗ್ರಾಮದಲ್ಲಿ ಶಿಥಿಲವಾಗಿರುವ ದ್ವಾರಬಾಗಿಲ ಮುಂದೆ ಬಸವಣ್ಣನ ದೇವಸ್ಥಾನವಿದ್ದು, ಈ ದೇವಾಲಯವನ್ನು ತುಗ್ಗಲ ಬಸವ ದೇವಾಲಯ ಎಂದೇ ಕರೆಯುತ್ತಾರೆ. ಈ ಹಿಂದೆ ಉದ್ದೇಶವಾಗಿಯೋ ಬೆಟ್ಟವೂ ಸೇರಿದಂತೆ ಬೆಟ್ಟದ ಪರಿಸರದಲ್ಲಿ ತುಗ್ಗಲಿಮರಗಳನ್ನು ವಿಶೇಷವಾಗಿ ಬೆಳೆಸಿರುವುದು ಕಂಡುಬರುತ್ತದೆ. ಈ ಮರಗಳು ಎಲೆಗಳಿಂದ ತುಂಬಿಕೊಂಡಿದ್ದು ನೋಡಲಿಕ್ಕೆ ಮುಳ್ಳಿನಂತೆ ಕಂಡುಬಂದರೂ ಇದರಲ್ಲಿ ಮುಳ್ಳು ಇರುವುದಿಲ್ಲ. ಈಗಲೂ ಬೆಟ್ಟದ ತುಂಬ ಈ ಮರಗಳು ತುಂಬಿಕೊಂಡಿವೆ. ಇದೊಂದು ವನದುರ್ಗದ ರೀತಿಯಲ್ಲಿ ನಿರ್ಮಾಣಗೊಂಡಿವೆ. ಹೊರಗಿನ ಶತೃಗಳಿಗೆ ಈ ಭಾಗಗಳು ಸಹ ಭಯವನ್ನು ಹುಟ್ಟಿಸುತ್ತವೆಯಲ್ಲದೆ, ಇವುಗಳಿಂದ ಕೋಟೆಯ ಗೋಡೆ, ಬಾಗಿಲು, ಬುರುಜು ಬತೇರಿಗಳು, ಸೈನಿಕರು ಕಾಣುತ್ತಿರಲಿಲ್ಲ. ಹಾಗಾಗಿ ಇದೊಂದು ವಿಶಿಷ್ಟ ಕೋಟೆಯಾಗಿದೆ. ಊರ ಮಧ್ಯ ಭಾಗದಲ್ಲಿ ಈಶ್ವರ ದೇವಸ್ಥಾನವಿದೆ. ಇದು ಸಹ ಆಕರ್ಷಣೀಯ ಮತ್ತು ಐತಿಹಾಸಿಕತೆಯನ್ನು ಸಾರುವಂತಹ ದೇವಾಲಯವಾಗಿದೆ. ಈ ದೇವಾಲಯದ ಮುಂದೆ ಸ್ವಲ್ಪ ದೂರದಲ್ಲಿ ೩೦–೫೦ ಚ.ಮೀ. ಉದ್ದದ ಕಲ್ಲುಬಾವಿ ಇದೆ. ಇದರ ಸುತ್ತಲೂ ಈ ಹಿಂದೆ ಶೃಂಗಾರ ತೋಟ ಇದ್ದಿತೆಂದು ಹೇಳಲಾಗುತ್ತಿದೆ. ಈ ಭಾಗದಲ್ಲಿ ಪುಷ್ಕರಣಿಗಳು, ಮರಗಳು, ವೀರಗಲ್ಲುಗಳು, ಮುಂತಾದ ಐತಿಹಾಸಿಕ ಸ್ಮಾರಕಗಳಿವೆ.[೨೫]

ಬೆಟ್ಟದ ಮೇಲಿರುವ ಎರಡು ಕಲ್ಲು ಗುಂಡುಗಳ ಮಧ್ಯ ಸ್ವಾಭಾವಿಕ ರೀತಿಯಲ್ಲಿ ನಿರ್ಮಿಸಿರುವ ಬಾಗಿಲನ್ನು ಕಲ್ಲು ಬಾಗಿಲೆಂದು ಕರೆಯುತ್ತಾರೆ. ಈ ಕಲ್ಲು ಬಾಗಿಲಿನ ಕೋಟೆಯು ಉತ್ತರದಲ್ಲಿ ಹೊಟ್ಟೆಯ ಬುರುಜಿನವರೆಗೂ ಮುಂದುವರೆದಿದೆ. ಇದರ ನಂತರ ಸಿಗುವ ತಗ್ಗಿನ ಬಾಗಿಲನ್ನು ಯುದ್ಧ ತಂತ್ರಕ್ಕನುಗುಣವಾಗಿ ನಿರ್ಮಿಸಲಾಗಿದೆ. ಆದರೆ ಈ ಬಾಗಿಲು ಇಂದು ಶಿಥಿಲಗೊಂಡಿದೆ. ಸ್ಥಳೀಯರು ಹೇಳುವ ಹಾಗೆ ಈ ಬಾಗಿಲು ಚೋರಕಂಡಿಯ ಹಾಗೆ ಇತ್ತೆಂದು ಹೇಳುತ್ತಾರೆ. ಈ ಬಾಗಿಲನ್ನು ದಾಟುವಾಗ ತಗ್ಗಿ ನಡೆಯಬೇಕಾಗಿತ್ತೆಂದು ಆದುದರಿಂದಾಗಿ ಇದಕ್ಕೆ ತಗ್ಗಿನ ಬಾಗಿಲು ಎಂದು ಹೆಸರು ಬಂದಿದೆಯೆಂದು ಗ್ರಾಮಸ್ಥರು ತಿಳಿಸುತ್ತಾರೆ. ಇದರ ಪಕ್ಕದಲ್ಲಿ ಪುಷ್ಕರಣಿಗಳಿವೆ.

ಮೇಲುದುರ್ಗದ ಉತ್ತರ ಮತ್ತು ದಕ್ಷಿಣ ಕೋಟೆಯ ಸಾಲಿನ ಮಧ್ಯ ರಂಗಪ್ಪನ ದೇವಾಲಯವಿದೆ. ಈ ದೇವಾಲಯವನ್ನು ಶಕುನಿ ರಂಗಪ್ಪ ದೇವಾಲಯವೆಂದು ಕರೆಯುತ್ತಾರೆ. ಪಾಳೆಯಗಾರರು ಯುದ್ಧ ಮತ್ತು ಇತರೆ ಕರ್ಮಕಾರ್ಯಗಳನ್ನು ಮಾಡುವಾಗ ತಮ್ಮ ಮನೆದೇವರಾದ ರಂಗಪ್ಪ ದೇವರ ಅನುಮತಿಯನ್ನು ಕೇಳಿಯೂ ಮುಂದುವರೆಯುತ್ತಿದ್ದರಂತೆ. ಹಾಗಾಗಿ ಈ ದೇವರಿಗೆ ಶಕುನಿ ರಂಗಪ್ಪ ಎಂದು ಹೆಸರು ಬಂದಿದೆ. ಈ ದೇವಾಲಯದ ಉತ್ತರಕ್ಕೆ, ೬ ಅಡಿ ಎತ್ತರ, ೬ ಅಡಿ ಉದ್ದ ಹಾಗು ೨೫ ಅಗಲದ ದ್ವಾರಬಾಗಿಲು ಇದೆ. ಈ ದ್ವಾರಬಾಗಿಲಿಗೆ ರಂಗಯ್ಯನ ಬಾಗಿಲು ಎಂಬ ಹೆಸರಿದೆ. ಕೋಟೆಯಲ್ಲಿ ಉಳಿದುಕೊಂಡಿರುವ

ಏಕೈಕ ದ್ವಾರಬಾಗಿಲು ಇದಾಗಿದೆ. ರಂಗಯ್ಯನ ಬಾಗಿಲು ಸುತ್ತಿನ ಕೋಟೆಯ ಮೇಲುದುರ್ಗ ಎಂದೆನಿಸಿಕೊಂಡಿದೆ. ಈ ಕೋಟೆಗೆ ಪೂರ್ವಭಾಗದಲ್ಲಿ ದಿಡ್ಡಿಬಾಗಿಲಿದೆ. ಈ ದಿಡ್ಡಿ ಬಾಗಿಲು ೯x೨x೪.೫ ಅಡಿಗಳ ವಿಸ್ತೀರ್ಣದಲ್ಲಿ ನಿರ್ಮಿಸಲಾಗಿದೆ. ಈ ಬಾಗಿಲು ಕೆಳಕೋಟೆಗೆ ಸಂಪರ್ಕ ಕಲ್ಪಿಸುತ್ತದೆ.[೨೬]

ರಂಗಯ್ಯನ ಬಾಗಿಲ ಬಳಿ ವಿಶಾಲವಾದ ಬಯಲು ಪ್ರದೇಶವಿದ್ದು ಸುತ್ತಲೂ ವ್ಯವಸ್ಥಿತವಾದ ಕೋಟೆಯ ರಚನೆಯನ್ನು ನಿರ್ಮಿಸಲಾಗಿದೆ. ಈ ಭಾಗದಲ್ಲಿ ಅರಮನೆಯ ಅವಶೇಷಗಳು, ಉತ್ತರದ ಗಾರೆ ಬುರುಜು, ತುಪ್ಪದ ಹೊಂಡ, ಚೌಡಮ್ಮ, ಆಂಜನೇಯ ಮುಂತಾದ ಸ್ಮಾರಕಗಳಿವೆ. ಈ ಕೋಟೆಯ ಹೆಚ್ಚು ಕಡಿಮೆ ಆಯತಾಕಾರದಲ್ಲಿದ್ದು, ಬಲಿಷ್ಠವಾಗಿ ಕಟ್ಟಲ್ಪಟ್ಟಿದೆ. ಹೊರಕೋಟೆಗೆ ೫೦-೬೦ ಸೆಂ.ಮೀ. ಮತ್ತು ೬೦-೭೦ ಸೆಂ.ಮೀ. ದಪ್ಪವಿರುವ ಕಲ್ಲುಗಳನ್ನು ಬಳಸಿ ೫ ಅಡಿ ಎತ್ತರದವರೆಗೆ ಗೋಡೆಯನ್ನು ನಿರ್ಮಿಸಿ, ನಂತರ ೩ ಅಡಿ ಎತ್ತರದವರೆಗೆ ೨೫-೪೦ ಸೆಂ.ಮೀ. ದಪ್ಪವಿರುವ ಕಲ್ಲುಗಳಿಂದ ಕಟ್ಟಲಾಗಿದೆ. ಕಲ್ಲುಗಳನ್ನು ಹೆಚ್ಚು ವಿನ್ಯಾಸಗೊಳಿಸಿದೆ. ಕತ್ತರಿಸಿದ ಕಲ್ಲುಗಳನ್ನು ಹಾಗೆ ಚದರ ಮೇಲೊಂದರಂತೆ ಜೋಡಿಸಿದ್ದಾರೆ. ಉತ್ತಮ ಗುಣಮಟ್ಟದ ಕಲ್ಲುಗಳ ಈ ಪ್ರದೇಶದಲ್ಲಿ ದೊರೆಯದೇ ಇರುವುದರಿಂದ ಕಲ್ಲುಗಳನ್ನು ನಯಗೊಳಿಸಿಲ್ಲ. ಆದುದರಿಂದ ಕಲ್ಲುಗಳನ್ನು ಅವುಗಳು ಇರುವ ಸ್ಥಳದಲ್ಲಿ ಹಾಗೆಯೇ ಜೋಡಿಸಿದ್ದಾರೆ ಅಲ್ಲದೆ ಈ ಬೆಟ್ಟದಲ್ಲಿ ಬಂಡೆಗಳು, ಕಲ್ಲು ಗುಂಡುಗಳು, ದೊರೆಯುವುದರಿಂದ ಇವುಗಳನ್ನು ಬಳಸಿ ಬಲಿಷ್ಠ ಗೋಡೆಯನ್ನು. ನಿರ್ಮಿಸದ್ದಾರೆ.[೨೭] ಈ ಗೋಡೆಯು ಕೆಲವು ಕಡೆ ೫ ಮೀಟರ್‌ನಿಂದ ೮ ಮೀ. ಎತ್ತರದವರೆವಿಗೂ ಇದೆ. ಕೋಟೆ ಗೋಡೆಯ ಮೇಲ್ಬಾಗದಲ್ಲಿ ೩ ಅಡಿ ಎತ್ತರದ ಮಣ್ಣಿನ ಗೋಡೆ ಇದೆ. ಗಟ್ಟಿ ಮರಳಿನಿಂದ ನಿರ್ಮಿಸಿರುವ ಮಣ್ಣಿನ ಕೋಟೆಯಲ್ಲಿ ಕೋಟೆ ಕಿಂಡಿಗಳನ್ನು ಗೋಡೆಯ ತಳಭಾಗ ೧೨ ಅಡಿ ಅಗಲ ಇದ್ದು ಪಿರಮಿಡ್ಡಿನ ಆಕೃತಿಯಲ್ಲಿ ನಿಮಾಣಗೊಂಡಂತಿದೆ. ಕಡಿದಾದ ಬಂಡೆಯ ಮೇಲೆ ಗೋಡೆ ಕಟ್ಟುವಾಗ ಬಂಡೆಗೆ ರಂಧ್ರಗಳನ್ನು ಕೊರೆದು ಕಲ್ಲುಗಳಿಗೆ ಬಡಗಲ್ಲುಗಳನ್ನು ಇಟ್ಟು ಗೋಡೆ ಜಾರದ ಹಾಗೆ ತಡೆಯನ್ನು ನಿರ್ಮಿಸಿದ್ದಾರೆ. ಈ ಕೋಟೆಯ ದಕ್ಷಿಣ ಹಾಗೂ ಪೂರ್ವ ಭಾಗದಲ್ಲಿ ಫಿರಂಗಿ ಹಾಗೂ ವೀಕ್ಷಣಾ ಕಿಂಡಿಗಳಿವೆ. ಈ ವೀಕ್ಷಣಾ ಕಿಂಡಿಗಳ ಮಧ್ಯ ಕಲಾತ್ಮಕವಾದ ಕಂಡಿಗಳಿವೆ.

ಈ ಕೋಟೆಯೊಳಗಡೆ ಇರುವಂತಹ ಗಾರೆಬುರುಜನ್ನು ಎತ್ತರವಾಗಿ ಕಟ್ಟಲಾಗಿದೆ. ಇಡೀ ಕೋಟೆಯಲ್ಲಿ ಅತೀ ಎತ್ತರವಾದ ಹಾಗೂ ವ್ಯವಸ್ಥಿತವಾಗಿ ಉಳಿದುಕೊಂಡಿರುವ ಏಕೈಕ ಬುರುಜು ಇದಾಗಿದೆ. ಬರುಜಿನ ಕೆಳಭಾಗದಲ್ಲಿ ಮೂರು ಅಡಿ ಅಗಲದ ರಕ್ಷಣಾ ಗೋಡೆಯನ್ನು ಕಟ್ಟಿ ತಳಭಾಗವನ್ನು ಭದ್ರಪಡಿಸಲಾಗಿದೆ. ಈ ಬುರುಜಿನ ಮೇಲ್ಭಾಗದಲ್ಲಿ ಕೋವಿ ಕಿಂಡಿಗಳಿವೆ. ಸುತ್ತಲೂ ಗಾರೆಯನ್ನು ಬಳಸಿರುವುದರಿಂದ ಬುರುಜಿಗೆ ಗಾರೆ ಬರುಜು ಎಂದು ಕರೆಯಲಾಗಿದೆ. ಈ ಬುರುಜಿಗೆ ಹತ್ತಲು, ಇಳಿಯಲು, ಮೆಟ್ಟಲುಗಳಿದ್ದು, ಮೇಲ್ಭಾಗದಿಂದ

ಸುತ್ತಲಿನ ಪರಿಸರವನ್ನು ದೂರದಿಂದ ಆಕ್ರಮಿಸಲು ಬರುತ್ತಿರುವಂತಹ ಎದುರಾಳಿಗಳನ್ನು ವೀಕ್ಷಿಸಲು, ಈ ರೀತಿಯಲ್ಲಿ ನಿರ್ಮಿಸಲಾಗಿತ್ತು ಎನ್ನಲಾಗಿದೆ. ಗಾರೆಬುರುಜಿನಿಂದ ಸ್ವಲ್ಪ ದೂರದಲ್ಲಿ ಬಾರೀ ಎತ್ತರವಿರುವ ಬಂಡೆಯ ಮೇಲೆ ಹಿಂದೆ ಧ್ವಜಸ್ತಂಭವಿತ್ತೆಂದು ಸ್ಥಳೀಯರಿಂದ ತಿಳಿದು ಬರುತ್ತದೆ. ಗಾರೆ ಬುರುಜಿನ ಮುಂಭಾಗದಲ್ಲಿ ತುಪ್ಪದ ಕೊಳ ಹಾಗೂ ನೀರಿನ ಆಶ್ರಯ ತಾಣಗಳಿವೆ.[೨೮]

ಇಲ್ಲಿಂದ ಮುಂದೆ ದಿಡ್ಡಿಬಾಗಿಲನ್ನು ಪ್ರವೇಶಿಸಿದರೆ ದೊಡ್ಡ ಬಂಡೆಯ ಮೇಲೆ ಎರಡು ಅಂತಸ್ತಿನ ಕಾವಲುಗೋಪುರವನ್ನು ನಿರ್ಮಿಸಿದ್ದಾರೆ. ಈ ಗೋಪುರಕ್ಕೆ ಎರಡು ದ್ವಾರಗಳನ್ನು ನಿರ್ಮಿಸಲಾಗಿದ್ದು ಅಲ್ಲಲ್ಲಿ ಬಂದೂಕು ಕಿಂಡಿಗಳಿವೆ. ಈ ಬರುಜಿನಿಂದ ಪ್ರಾರಂಭವಾಗಿರುವ ಕೋಟೆ ಗೋಡೆಯು ಉತ್ತರ ಭಾಗದಿಂದ ಪೂರ್ವಕ್ಕೆ ಮುಂದುವರೆದಿದ್ದು ಊರನ್ನು ರಕ್ಷಿಸಿದೆ. ಇದರ ಬಲಭಾಗದಲ್ಲಿ ೪೦ ಅಡಿ ಎತ್ತರದ ಕಲ್ಲಿನ ಮೇಲೆ ಬುರುಜನ್ನು ನಿರ್ಮಿಸಿದ್ದಾರೆ. ಈ ಬುರುಜಿಗೆ ಹೊಟ್ಟೆ ಬುರುಜು ಎಂದು ಕರೆಯುತ್ತಾರೆ. ಈ ಬುರುಜಿನಿಂದ ಪ್ರಾರಂಭವಾದ ಕೋಟೆಯ ಸಾಲು ಕೆಳಭಾಗದಲ್ಲಿ ಗ್ರಾಮವನ್ನು ಸುತ್ತುವರಿದು ಪುನಃ ದಕ್ಷಿಣ ಭಾಗದಲ್ಲಿ ಬೆಟ್ಟವನ್ನು ಸೇರಿಕೊಳ್ಳುತ್ತದೆ. ಈ ಕೋಟೆಯ ಸಾಲಿಗೆ ಉತ್ತರ ದಕ್ಷಿಣವಾಗಿ ಕಟ್ಟಲಾಗಿದ್ದು ಎರಡು ಸುತ್ತಿನ ಕೋಟೆ ಹಾಗೂ ಧ್ವಾರಬಾಗಿಲುಗಳು ಶಿಥಿಲಗೊಂಡಿವೆ. ಶಿಥಿಲಗೊಂಡ ಊರ ಬಾಗಿಲಿನಿಂದ ಮೇಲುದುರ್ಗದ ರಂಗಯ್ಯನ ಬಾಗಿಲಿನವರೆಗೆ ಅಲ್ಲಲ್ಲಿ ಕಲ್ಲಿನ ರಂಧ್ರಗಳಿವೆ. ಇವುಗಳ ಮೇಲೆ ರಾತ್ರಿವೇಳೆಯಲ್ಲಿ ದೀಪಗಳನ್ನು ಇಡಲು ವ್ಯವಸ್ಥೆ ಮಾಡಲಾಗಿದೆ.[೨೯]

ಕೋಟೆಯ ಸ್ಮಾರಕಕ್ಕೆ ಎರಡು ಸುತ್ತಿನ ಕೋಟೆಯ ಸಾಲು ಇದೆ. ಈ ಕೋಟೆಗೆ ಹೊಂದಿಕೊಂಡಂತೆ ಎರಡು ಸುತ್ತುಗಳನ್ನು ಮತ್ತೆ ಉತ್ತರದವರೆಗೆ ವಿಸ್ತರಿಸಲಾಗಿದೆ. ಅಲ್ಲಲ್ಲಿ ಕಲ್ಲುಗುಂಡುಗಳ ಮೇಲೆ ಬುರುಜುಗಳನ್ನು ನಿರ್ಮಿಸಲಾಗಿದೆ. ಇಲ್ಲಿ ಇರುವಂತಹ ಬುರುಜಿನಿಂದ ಹೊಟ್ಟೆಯ ಬುರುಜಿಗೆ, ಅಲ್ಲಿಂದ ಗಾರೆ ಬುರುಜಿಗೆ ಸಂಪರ್ಕ ಕಲ್ಪಿಸಲಾಗಿದೆ.[೩೦] ಇಲ್ಲಿರುವ ಕೋಟೆಯ ಪೂರ್ವಕ್ಕೆ ಮುಂದುವರೆದಿದ್ದು ಗ್ರಾಮವನ್ನು ರಕ್ಷಿಸಿದೆ. ಈ ಭಾಗದಲ್ಲಿ ಮಟಿ? ನಾಯಕನ ಗುಹೆ, ಸರ್ಪರಗೊಂದಿ? ಮತ್ತಿತರೆ ಸ್ಮಾರಕಗಳು ಕಂಡುಬರುತ್ತವೆ. ಒಟ್ಟಾರೆಯಾಗಿ ಈ ವೇಣುಕಲ್ಲುಗುಡ್ಡದ ಕೋಟೆ ಧರ್ಮಪುರ ಪ್ರದೇಶದಲ್ಲಿ ವ್ಯವಸ್ಥಿತವಾಗಿ ನಿರ್ಮಾಣಗೊಂಡಿರುವ ಕೋಟೆಗಳಲ್ಲಿ ಪ್ರಮುಖವಾದುದಾಗಿದೆ.

### ಕಣಜನಹಳ್ಳಿ ಕೋಟೆ

ಕಣಜನಹಳ್ಳಿಯು ಧರ್ಮಪುರಕ್ಕೆ ಸೇರಿದ ಒಂದು ಪ್ರಮುಖ ಗ್ರಾಮವಾಗಿದೆ, ಈ ಗ್ರಾಮವು ಧರ್ಮಪುರದಿಂದ ಪರಶುರಾಂಪುರಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೫ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೫ನೇ ಶತಮಾನದಲ್ಲಿ ಕಣಜನಹಳ್ಳಿಯು ನಿಡಗಲ್ಲು ಸಂಸ್ಥಾನದ ಅಧೀನದಲ್ಲಿತ್ತು.[೩೧] ನಿಡಗಲ್ಲಿನಿಂದ ಸಂಡೂರು ಸಂಸ್ಥಾನಕ್ಕೆ ಸೈನ್ಯದ ರಕ್ಷಣಾ ತುಕಡಿಗಳನ್ನು

ಸಾಗಿಸುವ ಮಾರ್ಗದಲ್ಲಿ ಈ ಊರು ಇತ್ತು. ತುರ್ತು ಸ್ಥಿತಿಯಲ್ಲಿ ಬಳಕೆಗಾಗಿ ಧಾನ್ಯಗಳನ್ನು ಸಂಗ್ರಹಿಸುವ ಕೇಂದ್ರವಾಗಿತ್ತು. ಹಾಗಾಗಿ ಇದನ್ನು ಕಣಜವಾಗಿದೆ. ಎಂದು ಕರೆಯಲಾಗುತ್ತಿತ್ತು. ಕ್ರಮೇಣ ಇದು ಕಣಜನಹಳ್ಳಿ ಆಗಿರಬಹುದೆಂದು ಜನಸಾಮಾನ್ಯರ ಅಭಿಪ್ರಾಯಗಳಾಗಿವೆ.[೩೨] ಈ ಗ್ರಾಮದ ಸುತ್ತಲಿನ ಹಳ್ಳಿಗಳಿಂದ ಕಂದಾಯ, ಮೊಗದಿ ಇತ್ಯಾದಿಗಳನ್ನು ವಸೂಲಿ ಮಾಡಿಕೊಂಡು ಬಂದು ಇಲ್ಲಿ ಶೇಖರಣೆ ಮಾಡುತ್ತಿದ್ದರು. ಈಗಲೂ ಸಹ ಈ ಗ್ರಾಮದ ಕೆಲ ಭಾಗಗಳಲ್ಲಿ ಕಣಜಗಳಿರುವುದು ಕಂಡು ಬರುತ್ತದೆ. ಹಾಗೆಯೆ ಈ ಊರಿನಿಂದ ಸುಮಾರು ಒಂದುವರೆ ಕಿ.ಮೀ. ಅಂತರದಲ್ಲಿರುವ ಬೆಟ್ಟಗೊಂಡನಹಳ್ಳಿಯಲ್ಲಿಯೂ ಸಹ ನೂರಾರು ಹಗೇವುಗಳನ್ನು (ಕಣಜಗಳನ್ನು) ಕಾಣಬಹುದಾಗಿದೆ. ಪ್ರಾಯಶಃ ಆಗಿನ ಸಂದರ್ಭದಲ್ಲಿ ಈ ಗ್ರಾಮದ ಸುತ್ತಮುತ್ತ ಕೋಟೆ ಕೊತ್ತಲುಗಳನ್ನು ನಿರ್ಮಿಸಿರುವ ಸಾಧ್ಯತೆಗಳಿವೆ. ಬ್ರಿಟೀಷರು ಈ ಪ್ರದೇಶದಲ್ಲಿ ನೆಲೆಯೂರಿದ ಮೇಲೆ ಮೈಸೂರು ಸಂಸ್ಥಾನ ಹಾಗೂ ಚಿತ್ರದುರ್ಗ ಪಾಳೆಯಗಾರರ ಜೊತೆ ನಿಕಟವಾದ ಸಂಪರ್ಕ ಹಾಗೂ ಭಾಂದವ್ಯ ಇಟ್ಟುಕೊಂಡಿದ್ದರು. ಹೀಗೆ ದಾಸ್ತಾನು ಮಾಡಿದ ಕಣಜಗಳ ಸುತ್ತಲೂ ಕೋಟೆಯನ್ನು ನಿರ್ಮಿಸಿದ್ದು, ಅವರು ಗಡಿ ಪ್ರದೇಶಗಳಲ್ಲಿ ತಮ್ಮ ಅಸ್ತಿತ್ವ ಇರಬೇಕೆಂಬ ಆಲೋಚನೆಯಿಂದ ಅವರ ರೆಜಿಮೆಂಟ್‌ಗಳ ಓಡಾಟ ಹಾಗೂ ಸಂಪರ್ಕಗಳಿಗಾಗಿ ಕಣಜನಹಳ್ಳಿಯನ್ನು ಮದರಾಸ್ ಪ್ರೆಸಿಡೆನ್ಸಿಯಲ್ಲಿಯೇ ಉಳಿಸಿಕೊಂಡಿದ್ದರು ಹೀಗಾಗಿ ಕಣಜನಹಳ್ಳಿಯು ಆ ಕಾಲದ ಒಂದು ಪ್ರಮುಖ ಆಯಕಟ್ಟಿನ ಪ್ರದೇಶವಾಗಿತ್ತೆಂದು ಹೇಳಬಹುದಾಗಿದೆ.[೩೩]

ಈ ಮಧ್ಯೆ ಕಣಜನಹಳ್ಳಿ ಹುಳಿಯಾರಿನ ಸಾಮಂತಾಧಿಪತಿ ಮಾರಗೌಡನ ಮೇಲೆ ಕುಮಾರರಾಮನು ಯುದ್ದಕ್ಕೆ ಹೋಗುವಾಗ ಕಣಜನಹಳ್ಳಿಯಲ್ಲಿ ತನ್ನ ಸೈನ್ಯವನ್ನು ಬೀಡು ಬಿಟ್ಟಿದ್ದನೆಂದು ಹೇಳಲಾಗುತ್ತಿದೆ. ಇದನ್ನು ನೆನಪಿಸುವ ಕುಮಾರರಾಮನ, ಶಿಲ್ಪವೊಂದು ಈ ಊರಿನಲ್ಲಿದೆ.[೩೪] ಇದನ್ನು ಕುಮಾರರಾಮನ ಹೆಸರಿನಿಂದಲೇ ಕರೆಯುತ್ತಿರುವುದು ಗಮನಾರ್ಹ ಸಂಗತಿ.

ಕಣಜನಹಳ್ಳಿಯ ಕೋಟೆಯು ಚೌಕಕಾರಾದ ಒಂದು ಸ್ಥಳದುರ್ಗವಾಗಿದೆ. ಊರಸುತ್ತಲೂ ಒಂದು ಸುತ್ತಿನ ಕೋಟೆಯಿದೆ. ಕೋಟೆಯ ಮಧ್ಯೆ ೩೫ ಅಡಿ ಎತ್ತರದ ಕಾವಲು ಬುರುಜಿದೆ. ಕೋಟೆಯ ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಲಗಳಿದ್ದು, ಕೋಟೆಯಲ್ಲಿ ಒಟ್ಟು ೬ ಚೌಕಾಕಾರದ ಹಾಗೂ ಎರಡು ವೃತ್ತಾಕಾರದ ಬುರುಜುಗಳಿವೆ. ಕೋಟೆಯು ಶಿಥಿಲವಾಗಿದ್ದು, ಗ್ರಾಮವು ಕೋಟೆಯಿಂದ ಸುತ್ತುವರೆಯಲ್ಪಟ್ಟಿದೆ. ಕೋಟೆಯ ಸುತ್ತಲು ಆಳವಾದ ಕಂದಕವಿದೆ. ಕಂದಕವು ಸುಮಾರು ೨೦ಮೀ. ಆಳವಿದೆ. ಕೋಟೆಯ ಕೆಲವು ಭಾಗ ಶಿಥಿಲಗೊಂಡಿದ್ದು ಕೆಲವು ಭಾಗಗಳಲ್ಲಿ ಮಾತ್ರ ಉಳಿದುಕೊಂಡಿದೆ. ಕೋಟೆಗೆ ನಯಗೊಳಿಸದೇ ಇರುವ ಒರಟಾದ ಕಲ್ಲುಗಳನ್ನು ಉಪಯೋಗಿಸಿದ್ದಾರೆ. ಬುರುಜುಗಳಿಗೆ ಕಲ್ಲುಗುಂಡುಗಳನ್ನು ಬಳಸಲಾಗಿದ್ದು

ಪೂರ್ವ ದಿಕ್ಕಿನಲ್ಲಿ ದ್ವಾರಬಾಗಿಲಿದೆ. ದಕ್ಷಿಣದಿಂದ ಪ್ರವೇಶಮಾಡಿ ಪಶ್ಚಿಮಕ್ಕೆ ಹೋಗುವಂತೆ ದ್ವಾರಬಾಗಿಲನ್ನು ನಿರ್ಮಿಸಿದ್ದಾರೆ. ದ್ವಾರಬಾಗಿಲು ೧೧ ಅಡಿ ಅಗಲ ಹಾಗೂ ೧೧ ಅಡಿ ಎತ್ತರವಿದ್ದು ೯ ಅಡಿ ಉದ್ದವಿದೆ. ಧ್ವಾರಬಾಗಿಲಿಗೆ ೬ ಕಲ್ಲಿನ ಬಾಗಿಲವಾಡಗಳನ್ನು ಉಪಯೋಗಿಸಿದ್ದು, ಮಧ್ಯಭಾಗದಲ್ಲಿ ಕಟ್ಟಡವಿದೆ. ಒಳಭಾಗದ ದಕ್ಷಿಣಕ್ಕೆ ಎತ್ತರವಾದ ಹಾಗೂ ಶಿಥಿಲವಾದ ಬುರುಜು ಇದೆ. ದ್ವಾರಬಾಗಿಲ ಒಳಭಾಗ ಮತ್ತು ಹೊರಭಾಗದಲ್ಲಿ ಆಂಜನೇಯ ದೇವಾಲಯಗಳಿವೆ. ಧ್ವಾರಬಾಗಿಲ ಎಡಬಲಗಳಲ್ಲಿ ಹಲವಾರು ವೀರಗಲ್ಲುಗಳಿವೆ. ಕೆಲ ವೀರಗಲ್ಲುಗಳ ಮೇಲೆ ಶಾಸನವಿರುವುದು ಕಂಡುಬರುತ್ತದೆ. ಈ ಶಾಸನವು ಈ ಊರಿನ ಆಡಳಿತಗಾರನಾಗಿದ್ದ ಬೆಟ್ಟಗೊಂಡ ಮತ್ತು ಜೋಡಿಗೊಂಡರು ಖಂಡೇನಹಳ್ಳಿ ಜಗಳದಲ್ಲಿ ಕಾದಾಡಿ ಮಡಿದ ವಿಚಾರವನ್ನು ವಿವರಿಸುತ್ತದೆ ಜನಪದ ಗೀತೆಯೊಂದರಲ್ಲಿ ಊರಿನ ಕೋಟೆ ಮತ್ತು ಬಾಗಿಲ ರಚನೆಯ ಕುರಿತು ಹೀಗೆ ಹೇಳಲಾಗಿದೆ.

ಕಟ್ಟೆ ಕಟ್ಟೆಂದರೆ ಕಟ್ಟಿಸಿದೆಂಗಟರಾಯ
ದಿಟ್ಟಿ ಪ್ರಧಾನ ಕೋಲು ಕೋಲು ಕೋಲನ್ನು ಕೋಲೆ
ವೆಂಕಟರಾಯ ನಿಡಗಲ್ಲು ಪ್ರಧಾನ ಪಾಳೆಯಪಟ್ಟ.[೩೫]

ಪಾಳೆಯಗಾರರ ಕಾಲದಲ್ಲಿ ಪ್ರಸ್ತುತ ಇರುವ ಬಾಗಿಲ ಮುಂದೆ (ಈಗ ಗ್ರಾಮ ಪಂಚಾಯ್ತಿ ಕಚೇರಿ ಇರುವ ಭಾಗದಲ್ಲಿ) ೪೮ ಕಂಬಗಳನ್ನುಳ್ಳ ೫ ಅಡಿ ಎತ್ತರದ ಎರಡು ಬದಿಗಳು ಅಟ್ಟವಾಳಿಗೆ ಹಾಗೂ ಎಂಟು ಗೋಪ್ಯ ಕೊಠಡಿಗಳಿದ್ದವೆಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಗ್ರಾಮದ ಮುಖಂಡರು ಕುಳಿತುಕೊಳ್ಳುತ್ತಿರುವ ಸ್ಥಾನದಿಂದಲೇ ಅವರ ಮಟ್ಟ ತಿಳಿಯುವಂತೆ ಮಾಡಲಾಗಿದ್ದಿತ್ತೆಂದು ಹೇಳಲಾಗುತ್ತಿದೆ.[೩೬] ಕೋಟೆಯ ಮಧ್ಯ ಭಾಗದಲ್ಲಿ ೧೨ ಮೀ ಅಗಲ ಹಾಗೂ ೬೩ ಮೀ. ಎತ್ತರ ಇರುವ ಬೃಹತ್ತಾದ ಬುರುಜು ಇದೆ. ಇದನ್ನು ತವಗದ ಬುರುಜು ಎಂದು ಕರೆಯಲಾಗುತ್ತಿದೆ. ಬುರುಜಿನ ಸುತ್ತಲೂ ಇದ್ದ ರಕ್ಷಣಾ ಕೋಟೆ ಶಿಥಿಲಗೊಂಡಿದೆ. ಬುರುಜಿನ ಮೇಲೆ ಹತ್ತಲು ಮೆಟ್ಟಿಲುಗಳಿವೆ. ಬುರುಜಿನ ಮೇಲ್ಬಾಗದಲ್ಲಿ ಉತ್ತರ ದಕ್ಷಿಣವಾಗಿ ೧೮ ಮೀ. ಪೂರ್ವ ಪಶ್ಚಿಮವಾಗಿ ೧೬ ಮೀ. ವಿಸ್ತಾರವಾಗಿದೆ.[೩೭] ಬತೇರಿಯ ಮೇಲಿದ್ದ ರಕ್ಷಣಾ ಗೋಡೆ, ಫಿರಂಗಿ ಗೂಡುಗಳು ಶಿಥಿಲಗೊಂಡಿವೆ. ಈ ಬುರುಜಿನ ಮೇಲೆ ಈ ಹಿಂದೆ ಹಾರಾಡುತ್ತಿದ್ದ ಬಾವುಟ ನಿಡುಗಲ್ಲು ಕೋಟೆಗೆ ಕಾಣುತ್ತಿತ್ತೆಂದು ಹೇಳುತ್ತಾರೆ. ಈ ಬತೇರಿಯ ಒಳಗಡೆ ಇಳಿಯಲು ಸುರಂಗಮಾರ್ಗವಿದೆ ಎಂದು ಹೇಳುತ್ತಾರೆ. ಸುರಂಗ ಮಾರ್ಗದಿಂದ ನಿಡಗಲ್ಲಿಗೆ ರಹದಾರಿ ಇದ್ದಿತೆನ್ನುವುದು ಸ್ಥಳೀಯರ ಅಭಿಪ್ರಾಯ. ಈ ಕೋಟೆಯೊಳಗೆ ಈಶ್ವರ, ತಿಮ್ಮಪ್ಪ, ಹೊಸೂರಮ್ಮ, ಜೋಡಿಲಿಂಗೇಶ್ವರ, ಮೈಲಾರಲಿಂಗೇಶ್ವರ ಮುಂತಾದ ದೇವಾಲಯಗಳಿವೆ.

ಪ್ರಸ್ತುತ ಧರ್ಮಪುರ ಪ್ರದೇಶದ ಬೇತೂರು ಗ್ರಾಮದ ಪೂರ್ವ ದಿಕ್ಕಿನಲ್ಲಿ ಆಳೂರು ಎಂದು ಕರೆಯಲ್ಪಡುವ ಪ್ರಾಚೀನ ಗ್ರಾಮವಿದ್ದು ಅದು ನಶಿಸಿ ಹೋಗಿದೆ. ಆಳೂರು ಮಣ್ಣಿನಿಂದ ನಿರ್ಮಾಣ ಮಾಡಿರುವಂತಹ ಕೋಟೆಯಿದ್ದು ಸುತ್ತಲೂ ಎತ್ತರವಾದ ಮಣ್ಣಿನ ದಿಬ್ಬವನ್ನು ಹಾಕಿ ಕಂದಕವನ್ನು ತೋಡಲ್ಪಪಟ್ಟಿದೆ. ಮಧ್ಯಭಾಗದ ಮನೆಗಳನ್ನು ವಾಸಕ್ಕಾಗಿ ನಿರ್ಮಿಸಿಕೊಂಡಿದ್ದಾರೆ. ಮನೆಗಳು ನಶಿಸಿ ಹೊಗಿ ತಳಪಾಯ ಮಾತ್ರ ಉಳಿದುಕೊಂಡಿವೆ. ಪಾಳು ಬಿದ್ದಿರುವ ದೇವಾಲಯವಿದ್ದು ಆ ದೇವಾಲಯದ ಅವಶೇಷಗಳು ಮಾತ್ರ ಉಳಿದು ನಶಿಸಿಹೋಗಿವೆ.

ಇದೇ ತೆರನಾದ ಕಂದೀಕೆರೆ ಗ್ರಾಮದ ಕಂದೀಕೆರೆ ರಂಗಪ್ಪ ಕುಮಾರಸ್ವಾಮಿಯವರ ಜಮೀನಿನ ಪಕ್ಕದಲ್ಲಿಯೂ ಒಂದು ಬೃಹತ್ತಾದ ಪ್ರಾಚೀನ ಕಾಲದ ನಣ್ಣೀನಿಂದ ನಿರ್ಮಿತವಾದ ಕೋಟೆಯಿದ್ದು ಇಲ್ಲಿಯೂ ಸಹ ಜನರ ವಾಸವಿದ್ದುದಕ್ಕೆ ಕುರುಹುಗಳಿವೆ. ಸುತ್ತಲೂ ಎತ್ತರವಾಗಿ ಮಣ್ಣಿನ ದಿಬ್ಬವನ್ನು ಹಾಕಿ, ಆಳವಾದ ಕಂದಕವನ್ನು ಮಾಡಿದ್ದಾರೆ. ಮಧ್ಯಭಾಗದಲ್ಲಿ ವಾಸಕ್ಕಾಗಿ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಈಗ ಈ ಪ್ರದೇಶದಲ್ಲಿ ಜನವಸತಿ ಇಲ್ಲದೆ ಪಾಳು ಬಿದ್ದು ಮನೆಗಳು ನಶಿಸಿಹೋಗಿ ತಳಪಾಯಗಳು ಮಾತ್ರ ಉಳಿದುಕೊಂಡಿವೆ.

ಪರಶುರಾಮದೇವರಕೋಟೆ ಮತ್ತು ಹರತಿಕೋಟೆಯಲ್ಲಿಯೂ ಸಹ ಪ್ರಾಚೀನ ಕಾಲದಲ್ಲಿ ಬೃಹತ್ತಾದ ಕೋಟೆಗಳು ಇದ್ದು ಈ ಪ್ರದೇಶಗಳು ಸಹ ಪಾಳೆಯಗಾರರ ಕಾಲದಲ್ಲಿ ಹೆಚ್ಚಿನ ಮಹತ್ವ ಹೊಂದಿದ್ದು ಆಯಕಟ್ಟಿನ ಪ್ರದೇಶಗಳಾಗಿದ್ದವು. ಇತ್ತೀಚಿನ ದಿನಗಳಲ್ಲಿ ಆ ಕೋಟೆಗಳು ಸಂಪೂರ್ಣ ನಶಿಸಿಹೋಗಿದ್ದು ಕೋಟೆಗಳು ಇದ್ದುದಕ್ಕೆ ಕರುಹುಗಳು ಮಾತ್ರ ದೊರೆತಿವೆ.

### ಅಡಿಟಿಪ್ಪಣಿಗಳು

೧. ರಾಜನೀತಿ ಪ್ರಕಾಶನ., ವಾರಣಾಸಿ, ಪುಟ-೨೦೨

೨. Deshapande P.N., Marata Forts, P.No, 16.

೩. ಸೂರ್ಯನಾಥ್ ಕಾಮತ್, ದೇವರಕೊಂಡಾರೆಡ್ಡಿ, ಮತ್ತು ಜಗನ್ನಾಥ್ ಎಸ್.ಎ., (ಸಂ.), ಇತಿಹಾಸ ದರ್ಶನ, ಸಂಪುಟ-೬, ಪುಟ-೧೫೭

೪. ಕನ್ನಡ ವಿಶ್ವಕೋಶ, ಸಂಪುಟ-೧, ಪುಟ ೪೦೬

೫. ಬೆಟಗೇರಿ ಕೃಷ್ಣಶರ್ಮ, ಕರ್ನಾಟಕ ಜನಜೀವನ, ಪುಟ-೩

೬. ಕರೋವ್ಕಿನ್ ಎಪ್, ಪುರಾತನ ಜಗತ್ತಿನ ಇತಿಹಾಸ, ಪುಟ-೮೦

೭. ಷೇಕ್ ಅಲಿ ಬಿ., (ಸಂ.), ಕರ್ನಾಟಕ ಚರಿತ್ರೆ, ಸಂಪುಟ-೧, ಪುಟ-೩,೨೨೮, ೩೩೦

೮. ಕರೋವ್ಕಿನ್ ಎಪ್., ಪೂರ್ವೋಕ್ತ, ಪುಟ-೧೨೦

೯. ಶ್ರೀಧರ ಹೆಚ್.ಜೆ., ಪ್ರಾಚೀನ ಭಾರತದಲ್ಲಿ ಯುದ್ಧಕಲೆ, ಪುಟ-೧೪೩

೧೦. ಗೋಪಾಲ್ ಆರ್., ಚಿತ್ರದುರ್ಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಪುಟ-೨೧೪

೧೧. ಅದೇ, ಪುಟ–೨೧೬

೧೨. ಇತಿಹಾಸ ಚಂದ್ರಿಕೆ, ಸಂಪುಟ, ೫, ಸಂಚಿಕೆ, ೭, ೮, ಪುಟ–೨

೧೩. ಮಲ್ಲೇಪುರಂ ಜಿ.ವೆಂಕಟೇಶ್., (ಸಂ), ಶಂಭಾಕೃತಿ, ಸಂಪುಟ. ಪುಟ–೧೧೪

೧೪. ಕಲುಬುರ್ಗಿ ಎಂ.ಎಂ., ಕೈಫಿಯತ್ತುಗಳು, ಪುಟ–೨೧೭

೧೫. ಎ. ಕ. ಸಂ. ಹಿರಿಯೂರು–೩೬

೧೬. ನಾಗರಾಜ್ ಬಿ.ಎಸ್., ವಿಜಯನಗರ ಸಾಮ್ರಾಜ್ಯದಲ್ಲಿ ನಗರ ಬೆಳವಣಿಗೆ, ವಿಜಯನಗರ ಅಧ್ಯಯನ, ಪುಟ–೯೬

೧೭. ಶಿವಶಂಕರ ಎಂ ಎಲ್., ಪಾಟೀಲ್ ಸಿ.ಎಸ್., ವಿಜಯನಗರ ಸಾಮ್ರಾಜ್ಯದಲ್ಲಿ ನಗರ ಬೆಳವಣಿಗೆ, ಸಂ–೨, ಪುಟ–೯೬

೧೮. ಹಸ್ತಪ್ರತಿಯೊಂದರ ಪ್ರಕಾರ

೧೯. ವೇಣುಕಲ್ಲುಗುಡ್ಡದ ಚಂದ್ರಶೇಕರಯ್ಯನವರ ಹತ್ತಿರ ಇರುವ ದಾಖಲೆಗಳಲ್ಲಿ ಪ್ರಸ್ತುತಿಸಿರುವಂತೆ

೨೦. ಹಸ್ತಪ್ರತಿಯೊಂದರ ಪ್ರಕಾರ

೨೧. ವೀರಪ್ಪ ಎಂ., ವೀರ ಮಹೇಶ್ವರಿ ಅಮ್ಮನವರ ಚರಿತ್ರೆ, ಪುಟ–೭

೨೨. ಅದೇ, ಪುಟ–೫

೨೩. ಹಯವದನರಾವ್., ಮೈಸೂರು ಗೆಜೆಟೀಯರ್, ಸಂ ೫, ಪುಟ ೧೪೫೭ ಮತ್ತು ಬಾಗೂರು ಆರ್, ನಾಗರಾಜಪ್ಪ. ಹೊಸದುರ್ಗ ಸುತ್ತ, ಪುಟ–೧೦೪

೨೪. ತಿಪ್ಪೇಸ್ವಾಮಿ ಎಸ್., ರಕ್ಷಣಾವಾಸ್ತು ಶಿಲ್ಪ ಚಿತ್ರದುರ್ಗ ಜಿಲ್ಲೆ, ಪುಟ–೨೧೩

೨೫. ಅದೇ, ಪುಟ–೨೧೩

೨೬. ಅದೇ, ಪುಟ–೨೧೪

೨೭. ಅದೇ, ಪುಟ–೨೧೪

೨೮. ಅದೇ, ಪುಟ–೨೧೫

೨೯. ಅದೇ, ಪುಟ–೨೧೬

೩೦. ಅದೇ, ಪುಟ–೨೧೬

೩೧. ಸಣ್ಣ ಬಾಳಪ್ಪ ಹೊಸಮನಿ., ಐಸಿರಿ, ಹಿರಿಯೂರು, ಪುಟ–೧೨೦

೩೨. ಅದೇ, ಪುಟ–೧೨೧

೩೩. ಹುಲ್ಲೂರು ಶ್ರೀನಿವಾಸ್ ಜೋಯಿಸರ., ಗಂಡುಗಲಿ ಕುಮಾರರಾಮ. ಪುಟ–೪೬

೩೪. ಅದೇ, ಪುಟ–೧೨೦

೩೫. ಗಿರಿಜಾ. ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪುಟ–೩೫೨

೩೬. ತಿಪ್ಪೇಸ್ವಾಮಿ ಎಸ್., ಪೂರ್ವೋಕ್ತ, ಪುಟ–೧೫೬

೩೭. ಅದೇ, ಪುಟ–೧೫೬

* * *

## ಸಮಾರೂಪ

ಒಟ್ಟಾರೆಯಾಗಿ ಹೇಳುವುದಾದರೆ ಕರ್ನಾಟಕವು ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕವಾಗಿ ತನ್ನದೇ ಆದಂತಹ ಮಹತ್ವದ ಸ್ಥಾನವನ್ನು ಬೆಳೆಸಿಕೊಂಡುಬಂದಿದೆ, ಇಲ್ಲಿನ ಇತಿಹಾಸ ಮತ್ತು ಸಂಸ್ಕೃತಿ ಒಂದು ಜೀವಿ ಸಂಕುಲದಂತೆ ಈ ಪ್ರದೇಶದಲ್ಲಿ ಅನೇಕ ರಾಜಮನೆತನಗಳು ಆಡಳಿತ ನಡೆಸಿವೆ. ಅನೇಕ ಧರ್ಮಗಳು ವಾಸಸ್ಥಾನವನ್ನು ಪಡೆದುಕೊಂಡಿವೆ . ಈ ರೀತಿಯಲ್ಲಿ ಸುತ್ತಮುತ್ತಲಿನ ಪ್ರದೇಶವು ಕಾಲದಿಂದ ಕಾಲಕ್ಕೆ ಐತಿಹಾಸಿಕ ಸ್ಥಾನಮಾನಗಳನ್ನು ಗುರುತಿಸಿಕೊಳ್ಳುತ್ತಾ ಮುಂದೆ ಸಾಗಿದೆ. ಸಂಸ್ಕೃತಿಯ ಬೆಳವಣಿಗೆಗೆ ಅಲ್ಲಿನ ಜನಸಾಮಾನ್ಯರ ಬದುಕು ಕನ್ನಡ ನಾಡಿನ ಸಂಸ್ಕೃತಿಯ ಅಂಶಗಳನ್ನು ಅಳವಡಿಸಿಕೊಂಡಂತೆ ಪ್ರಸ್ತುತ ಧರ್ಮಪುರದ ಪರಿಸರದ ಸಂಸ್ಕೃತಿಯೂ ಸಹ ಕರ್ನಾಟಕದ ಸಂಸ್ಕೃತಿಯ ಎಲ್ಲ ಸತ್ವಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಈ ಪ್ರದೇಶದ ಸುತ್ತಮುತ್ತಲಿನ ಗ್ರಾಮಗಳಲ್ಲಿ ದೊರೆತಿರುವಂತಹ ಪ್ರಾಚ್ಯವಶೇಷಗಳಾದ ಸ್ಮಾರಕಗಳು, ಶಾಸನಗಳು, ಶಿಲ್ಪಗಳು, ಜನಪದ ಕಥೆಗಳು, ಸ್ಥಳಪುರಾಣಗಳಿಂದ ತಿಳಿದು ಬರುತ್ತದೆ. ಈ ಪ್ರದೇಶವನ್ನು ಆಳಿದ ರಾಜವಂಶಗಳು ಧರ್ಮ, ಸಾಹಿತ್ಯ, ಸಂಗೀತ, ನೃತ್ಯ, ಕಲೆ, ಮತ್ತು ವಾಸ್ತುಕಲೆ ರಚನೆಗಳನ್ನು ರಕ್ಷಿಸಿ ಪೊಶಿಸಿ ಬೆಳೆಸಿ ಸಂಸ್ಕೃತಿಯನ್ನು ರಕ್ಷಿಸಲು ಯತ್ನಿಸಿದ್ದಾರೆ.

ನಾವು ಯಾವುದೇ ಒಂದು ಪ್ರದೇಶದಲ್ಲಿನ ಇತಿಹಾಸವನ್ನು ಅಧ್ಯಯನ ಮಾಡಬಹುದಾದ ಸಂದರ್ಭದಲ್ಲಿ ಗ್ರಾಮಗಳ ಪಾತ್ರ ಬಹಳ ಪ್ರಾಮುಖವಾಗಿರುತ್ತದೆ. ಪ್ರಸ್ತುತ ಗ್ರಾಮಗಳಲ್ಲಿ ದೂರೆಯುವಂತಹ ಅವಶೇಷಗಳಿಂದ "ಧರ್ಮಪುರ ಪರಿಸರದ ಸಂಸ್ಕೃತಿಕ ಅಧ್ಯಯನ" ವಿವಿಧ ಅಂಶಗಳನ್ನು ಪರಿಚಯಿಸಲು ಪ್ರಯತ್ನಿಸಲಾಗಿದೆ. ಈ ಪ್ರದೇಶದಲ್ಲಿ ದೂರೆಯುವಂತಹ ಸ್ಮಾರಕಗಳು, ಶಾಸನಗಳು, ಮೂರ್ತಿಶಿಲ್ಪಗಳು, ಸ್ಥಳಪುರಾಣಗಳು, ಸ್ಥಳನಾಮಗಳು ಇಲ್ಲಿನ ಸಾಂಸ್ಕೃತಿಕ ಅಧ್ಯಯನಕ್ಕೆ ಹಾಗೂ ಈ ಪ್ರದೇಶದ ಇತಿಹಾಸದ ವಿವಿಧ ಮುಖಗಳನ್ನು ಅರ್ಥೈಸಿಕೊಳ್ಳಲು ತುಂಬಾ ಸಹಾಯಕವಾಗಿವೆ.

ಕರ್ನಾಟಕದ ಮಧ್ಯಭಾಗದಲ್ಲಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ಆರು ತಾಲ್ಲೂಕುಗಳಿದ್ದು ಪೂರ್ವಕ್ಕೆ ಹಿರಿಯೂರು ತಾಲ್ಲೂಕು ಒಂದಾಗಿದೆ. ಈ ಹಿರಿಯೂರು ತಾಲ್ಲೂಕು ನಾಲ್ಕು ಹೋಬಳಿಗಳನ್ನೊಳಗೊಂಡಿದೆ. ಅಂದರೆ ಜವನಗೊಂಡನಹಳ್ಳಿ, ಹಿರಿಯೂರು ಕಸಬಾ,

ಧರ್ಮಪುರ, ಐಮಂಗಳ, ಈ ಹೋಬಳಿಗಳಲ್ಲಿ ಧರ್ಮಪುರ ಪ್ರಮುಖ ಐತಿಹಾಸಿಕ ಪ್ರದೇಶವಾಗಿದೆ. ಧರ್ಮಪುರ ಪರಿಸರವು ಭೌಗೋಳಿಕವಾಗಿ ಉತ್ತಮವಾದ ವಾಯುಗುಣ, ಫಲವತ್ತತೆ, ಕೃಷಿ ಚಟುವಟಿಕೆಗೆ ಹಾಗೂ ಕೈಗಾರಿಕೆಗೆ ಉತ್ತಮವಾದುದಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶವು ಐತಿಹಾಸಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಂಪದ್ಭರಿತವಾಗಿದ್ದು ಅಧ್ಯಯನಕ್ಕೆ ಇಲ್ಲಿ ದೂರೆಯುವಂತಹ ಸ್ಮಾರಕಗಳು, ಶಾಸನಗಳು, ಮೂರ್ತಿಶಿಲ್ಪಗಳು, ಸ್ಥಳಪುರಾಣಗಳು, ಸ್ಥಳನಾಮಗಳು, ಸಾಹಿತ್ಯಿಕ ಆಧಾರಗಳು ನಮಗೆ ಮಾಹಿತಿಯನ್ನು ಒದಗಿಸಿಕೊಡುತ್ತವೆ. ಪ್ರಾಗಿತಿಹಾಸ ಕಾಲದಿಂದಲೂ ಸಹ ಈ ಪರಿಸರದಲ್ಲಿ ಮಾನವನ ಚಟುವಟಿಕೆಗಳ ಕುರುಹುಗಳು ಅಷ್ಟಾಗಿ ದೊರೆಯದೇ ಇದ್ದರೂ ಸಹ ಸುತ್ತಮುತ್ತಲಿನ ಪ್ರದೇಶದಲ್ಲಿ ದೊರೆತಿರುವ ಕುರುಹುಗಳು ಇದಕ್ಕೆ ಪೂರಕವಾಗಿವೆ ಧರ್ಮಪುರ ಪರಿಸರದಲ್ಲಿ ಎಂದರೆ ಪರಶುರಾಂಪುರ, ದೊಡ್ಡೇರಿ, ಚಿಕ್ಕಮದುರೆ, ನವಶಿಲಾಯುಗದ, ಬೃಹತ್‌ಲಾಯುಗದ ಆಯುದೋಪಕರಣಗಳು ದೊರೆತಿದ್ದು ಇತಿಹಾಸ ತಜ್ಞರು ಸಂಶೊಧಿಸಿ ಬೆಳಕಿಗೆ ತಂದಿದ್ದಾರೆ. ಈ ಪ್ರದೇಶದ ಸುತ್ತಮುತ್ತಲಿನ ಅಂಶಗಳು ಇಲ್ಲಿನ ಸಂಸ್ಕೃತಿಯನ್ನು ತಿಳಿಯಲು ಸಹಾಯಕವಾಗಿವೆ.

ಈ ಪ್ರದೇಶದ ರಾಜಕೀಯ ಇತಿಹಾಸವು ಶಾತಾವಾಹನರ ಕಾಲದಿಂದ ಆರಂಭವಾಗಿದ್ದು ಈ ವಂಶದ ರಾಜರ ಆಳ್ವಿಕೆಯ ಬಗ್ಗೆ ಈ ಪರಿಸರದಲ್ಲಿ ಯಾವುದೇ ಮಾಹಿತಿಗಳು ದೊರೆಯದೇ ಇದ್ದರೂ ಸಹ ಸುತ್ತಮುತ್ತಲಿನ ಪರಿಸರದಲ್ಲಿ ಇವರ ಶಾಸನಗಳು, ಸ್ಮಾರಕಗಳು, ದೊರೆತಿದ್ದು ಇವರ ಪ್ರಭಾವ ಈ ಪ್ರದೇಶದಲ್ಲಿ ಆಡಳಿತ ನಡೆಸಿದ್ದರ ಬಗ್ಗೆ ಮಾಹಿತಿ ತಿಳಿದುಬರುತ್ತದೆ. ಶಾತಾವಾಹನರಿಗೆ ಸಬಂಧಿಸಿದ ಕೆಲವು ನಾಣ್ಯಗಳು, ಶಾಸನಗಳು ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ದೊರೆತಿದ್ದು ಇವರ ಒಂದು ಆಡಳಿತವು ಈ ಪ್ರದೇಶದಲ್ಲಿ ಇದ್ದಿತು ಎಂಬುದಕ್ಕೆ ಮೂಲ ಆಧಾರವಾಗಿದೆ.

ಬಾದಾಮಿ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿಯೂ ಸಹ ಈ ಪ್ರದೇಶವು ಮಹತ್ವ ಪಡೆದಿದ್ದು ಇವರ ಒಂದು ಪ್ರಭಾವವು ಸಹ ಈ ಪರಿಸರದಲ್ಲಿ ಕಂಡರಿಸಲಾಗಿದೆ. ಇವರಿಗೆ ಸಂಬಂಧಿಸಿದಂತಹ ಸೂಗೂರು ಗ್ರಾಮದಲ್ಲಿ ದಾನದತ್ತಿ ನೀಡಿದ ಬಗ್ಗೆ ತಾಮ್ರಶಾಸನವೊಂದು ದೊರೆತಿದೆ. ತದನಂತರವಾಗಿ ರಾಷ್ಟ್ರಕೂಟರು ಸಹ ಈ ಪ್ರದೇಶದಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದಾರೆ, ಹಲವಾರು ವೀರಗಲ್ಲು ಮಾಸ್ತಿಗಲ್ಲುಗಳು ದೊರೆತಿದ್ದು ಇವರ ಪ್ರಬಾವವು ಸಹ ಈ ಪ್ರದೇಶದಲ್ಲಿ ಇದ್ದಿತು ಎನ್ನಲಾಗಿದೆ. ಇವರ ನಂತರವಾಗಿ ಕಲ್ಯಾಣದ ಚಾಲುಕ್ಯರು, ನೊಳಂಬರು, ಪ್ರಾಭಲ್ಯಕ್ಕೆ ಬಂದರು. ಇವರ ಆಡಳಿತಾವಧಿಯಲ್ಲಿನ ಕುರುಹುಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಬಹುತೇಕವಾಗಿ ದೊರೆತಿದ್ದು ಇವರು ಈ ಹಿಂದೆ ಗಂಗ, ಚೋಳರು, ಚಾಲುಕ್ಯರೂಂದಿಗೆ ಯುದ್ದಗಳನ್ನು ಮಾಡಿ ಸ್ವತಹ ಆಡಳಿತ ನಡೆಸಲು ಮುಂದಾದರು.

ಇವರ ರಾಜಧಾನಿಯೂ ಪ್ರಸ್ತುತ ಪರಿಸರದಲ್ಲಿನ ಹೆಂಜೇರು ಪಟ್ಟಣವಾಗಿತ್ತು ಈ ಪ್ರದೇಶದಲ್ಲಿ ಇವರ ಕುರುಹುಗಳು ಇದ್ದು ಇವುಗಳಿಂದ ಇವರ ಒಂದು ಪ್ರಭಾವ ಈ ಪರಿಸರದಲ್ಲಿ ಇದೆ ಎಂದು ಹೇಳಬಹುದು. ಇವರ ನಂತರವಾಗಿ ಹೊಯ್ಸಳರು ಆಡಳಿತ ನಡೆಸಿದ್ದರ ಬಗ್ಗೆ ಅಷ್ಟಾಗಿ ಮಾಹಿತಿಗಳು ದೊರೆಯದೇ ಇದ್ದರೂ ಈ ಪ್ರದೇಶದ ಸುತ್ತಮುತ್ತಲಿನ ಕೆಲ ಪ್ರದೇಶಗಳಲ್ಲಿ ದೊರೆತಿರುವ ಆಧಾರಗಳಿಂದ ಇವರೂ ಸಹ ಇಲ್ಲಿ ಆಡಳಿತ ನಡೆಸಿದ್ದರೆನ್ನಲಾಗಿದೆ. ವಿಜಯನಗರದ ಅರಸರ ಪ್ರಭಾವ ಈ ಪ್ರದೇಶದಲ್ಲಿದ್ದುದರ ಬಗ್ಗೆ ಧರ್ಮಪುರ ಪರಿಸರದಲ್ಲಿನ ಅಂಬಲಗೆರೆ ಗ್ರಾಮದಲ್ಲಿ ದೊರೆತಿರುವಂತಹ ದಾನ ಶಾಸನ ಮತ್ತು ಇನ್ನು ಈ ಪ್ರದೇಶದಲ್ಲಿ ಹಲವಾರು ಶಾಸನಗಳು, ಸ್ಮಾರಕಶಿಲ್ಪಗಳು, ದೇವಾಲಯಗಳು ದೊರೆತಿದ್ದು ಇವರ ಆಡಳಿತವು ಸಹ ಈ ಪರಿಸರದಲ್ಲಿ ಪ್ರಬುದ್ಧಮಾನ ಪಡೆದಿತ್ತು. ಇವರ ನಂತರವಾಗಿ ಪಾಳೆಯಗಾರರ ಆಡಳಿತ ಕಂಡುಬಂದಿದ್ದು ಚಿತ್ರದುರ್ಗ ಜಿಲ್ಲೆಯಲ್ಲಿ ಬಹುತೇಕವಾಗಿ ಪಾಳೆಯಗಾರರ ಆಡಳಿತ ಇದ್ದಿರುವ ಬಗ್ಗೆ ಈ ಪರಿಸರದಲ್ಲಿ ಇವರ ಸ್ಮಾರಕಗಳು, ಶಿಲ್ಪಗಳು, ಶಾಸನಗಳು, ದೇವಾಲಯಗಳು ಹೇರಳವಾಗಿ ದೊರೆತಿದ್ದು ಇವರ ಕಾಲದಲ್ಲೆ ಕೋಟೆಗಳು ನಿರ್ಮಾಣವಾಗಿದ್ದುದನ್ನು ಈ ಪರಿಸರದಲ್ಲಿ ಕಂಡರಿಸಿದ್ದು ವೇಣುಕಲ್ಲುಗುಡ್ಡದ ಕೋಟೆ, ಕಣಜನಹಳ್ಳಿ ಕೋಟೆ, ಶಿಡ್ಲಯ್ಯನ ಕೋಟೆ, ಇವುಗಳಿಂದ ಈ ಪ್ರದೇಶವು ರಾಜಕೀಯವಾಗಿ ಸಂಪದ್ಭರಿತವಾಗಿತ್ತು ಎಂದು ಹೇಳಲಾಗಿದೆ.

ಪ್ರದೇಶದಲ್ಲಿನ ಸ್ಥಳಪುರಾಣಗಳು ಮತ್ತು ಸ್ಥಳನಾಮಗಳು ಸಹ ಈ ಪರಿಸರದ ಇಲ್ಲಿನ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತವೆ. ಸಾಮಾಜಿಕ, ವ್ಯವಸ್ಥೆಯು ಸಹ ನಾಲ್ಕು ಅಂತಸ್ತುಗಳನ್ನು ಒಳಗೊಂಡಿದ್ದು ಈ ವರ್ಗಗಳ ಆಯಾ ಕೆಲಸ ಕಾರ್ಯಗಳನ್ನು ಬ್ರಾಹ್ಮಣರಿಗೆ ಉನ್ನತ ಸ್ಥಾನ, ಕ್ಷತ್ರಿಯರಿಗೆ ರಕ್ಷಣಾಸ್ಥಾನ, ವೈಶ್ಯರಿಗೆ ವ್ಯಾಪಾರ ವಹಿವಾಟು, ಶೂದ್ರರಿಗೆ ಈ ಮೇಲ್ವರ್ಗದವರ ಕೆಲಸ ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗುವುದು. ಈ ಎಲ್ಲಾ ವರ್ಗಗಳ ನಂತರವಾಗಿ ಕೆಲವು ಉಪ ಪಂಗಡಗಳು ಕಾಲಾನಂತರವಾಗಿ ಉಗಮವಾಗಿ ಸಾಮಾಜಿಕ, ಆರ್ಥಿಕ, ಧಾರ್ಮಿಕವಾಗಿ ಬೆಳವಣಿಗೆಯಾಗಲು ಪ್ರಯತ್ನಿಸಿವೆ.

ಧಾರ್ಮಿಕ ಚರಿತ್ರೆಯಲ್ಲಿ ಶೈವ, ಮತ್ತು ವೈಷ್ಣವ, ಜೈನ ಧರ್ಮಗಳು ಮುಖ್ಯವಾಗಿವೆ. ಧರ್ಮಪುರ ಪರಿಸರದಲ್ಲಿ ಶೈವ, ಮತ್ತು ವೈಷ್ಣವ ಧರ್ಮದ ಪ್ರಭಾವವು ಹೆಚ್ಚು ಪ್ರಚಲಿತವಾಗಿದ್ದು ಇವರ ಹಲವು ಸ್ಮಾರಕಗಳು, ಶಾಸನಗಳು ದೊರೆತಿದ್ದು ಈ ಆಕರಗಳಿಂದ ಇವರ ಒಂದು ಪ್ರಭಾವ ಪುಷ್ಟೀಕರಿಸುತ್ತವೆ. ಈ ಪರಿಸರದಲ್ಲಿ ಜೈನ ಧರ್ಮವು ಹೆಚ್ಚು ಪ್ರಚಲಿತದಲ್ಲಿ ಇರದಿದ್ದರೂ ಇಲ್ಲಿ ಸಿಗುವಂತಹ ಕೆಲವೇ ಆಕರಗಳಿಂದ ಇವರ ಅಸ್ತಿತ್ವವನ್ನು ಅರಿಯಬಹುದಾಗಿದೆ. ಜೈನ ಧರ್ಮವು ಪ್ರಾಚೀನ ಕಾಲದಿಂದಲೂ ಸಮಕಾಲೀನ ಧರ್ಮಗಳೊಂದಿಗೆ ಸ್ಪಂದಿಸಿ ಉತ್ತಮ ಮಾರ್ಗವನ್ನು ಅನುಸರಿಸುತ್ತಾ ಬಂದಿರುವ ಧರ್ಮವಾಗಿದೆ. ಇವುಗಳ ಜೊತೆಗೆ ಕೆಲ ಉಪ

ಪಂಗಡಗಳಾಗಿ ಜಾತಿಗಳು ಬೆಳೆದು ಅವುಗಳ ಕುಲಕಸುಬುಗಳನ್ನು ನಿರ್ವಹಿಸುತ್ತಿರುವುದನ್ನು ಮತ್ತು ಎಲ್ಲಾ ಜಾತಿಗಳು ಪ್ರಾಚೀನ ಕಾಲದಲ್ಲಿ ಅಚರಿಸುತ್ತಿರುವ ಹಬ್ಬಹರಿದಿನಗಳು ಜಾತ್ರೆ ಉತ್ಸವಗಳನ್ನು ಇಂದಿಗೂ ಅಚರಿಸುತ್ತಿರುವುದನ್ನು ಗಮನಿಸಬಹುದು. ಆರ್ಥಿಕ ಸ್ಥಿತಿಯಲ್ಲಿ ಕೃಷಿ, ಗುಡಿಕೈಗಾರಿಕೆ, ನೀರಾವರಿ, ವ್ಯಾಪಾರ, ವಾಣಿಜ್ಯ, ಸಾರಿಗೆ ಸಂಪರ್ಕ, ಮುಂತಾದವುಗಳು ಉತ್ತಮ ರೀತಿಯಲ್ಲಿದ್ದುದು ಸಮಾಜದ ಮಹತ್ವದ ಅಂಶಗಳಾದ ಆರ್ಥಿಕ ಕ್ಷೇತ್ರದಲ್ಲಿ ಸುಖ ಸಂಮೃದ್ಧಿಯನ್ನು ಕೆರೆಗಳ ನಿರ್ಮಾಣ, ಗುಡಿ ಕೈಗಾರಿಕೆಗಳು ತೂಕ, ಅಳತೆ, ನಾಣ್ಯ, ಸಾರ್ವಜನಿಕ ವೆಚ್ಚ, ದಾನ ದತ್ತಿ, ತೆರಿಗೆ ಪದ್ಧತಿ ಈ ಎಲ್ಲಾ ಅಂಶಗಳನ್ನು ಶಾಸನಗಳ ಆಧಾರದಿಂದ ವಿವರಿಸುತ್ತಾ ಪ್ರಬಂದದಲ್ಲಿ ಸೇರ್ಪಡೆಯಾಗಿದೆ

ವಾಸ್ತು ಮತ್ತು ಮೂರ್ತಿಶಿಲ್ಪಕ್ಕೆ ಸಬಂಧಿಸಿದಂತೆ ಕರ್ನಾಟಕದ ಕಲೆಯ ಎಲ್ಲಾ ಅಂಶಗಳನ್ನು ಚಿತ್ರದುರ್ಗ ಜಿಲ್ಲೆ ಮೈಗೂಡಿಸಿಕೊಂಡಿದೆ. ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಈ ಜಿಲ್ಲೆಯಲ್ಲಿನ ಹಿರಿಯೂರು ತಾಲೂಕು ಧರ್ಮಪುರ ಪರಿಸರದಲ್ಲಿನ ಶೈವ, ವೈಷ್ಣವದೇವಾಲಯಗಳು, ಮೂರ್ತಿಶಿಲ್ಪಗಳು, ದೊರೆತಿದ್ದು ಅಂಬಲಗೆರೆಯ ರಂಗನಾಥ ಸ್ವಾಮಿ, ಅಬ್ಬಿನಹೋಳೆಯ ರಂಗನಾಥಸ್ವಾಮಿ, ಧರ್ಮಪುರದಲ್ಲಿನ ಪಂಚಲಿಂಗಗಳು, ವೇಣುಕಲ್ಲುಗುಡ್ಡದ ಈಶ್ವರ ದೇವಾಲಯ, ಇತ್ಯಾದಿ ದೇವಾಲಯಗಳು ಇಲ್ಲಿನ ಇತಿಹಾಸಕ್ಕೆ ಆಧಾರಪ್ರಾಯವಾಗಿವೆ. ಕೆಲವು ದೇವಾಲಯಗಳು ಬಿದ್ದುಹೋಗಿವೆ. ನಂತರದಲ್ಲಿ ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಇನ್ನು ಕೆಲವು ದೇವಾಲಯಗಳು, ಸಂಪೂರ್ಣ ನಶಿಸಿಹೋಗಿವೆ. ಧರ್ಮಪುರದಲ್ಲಿನ ಭೀಮಲಿಂಗೇಶ್ವರ ದೇವಾಲಯ ಮಳೆ ಗಾಳಿಗೆ ಬಿದ್ದುಹೊಗಿದ್ದು ಅಲ್ಲಿರುವಂತಹ ಶಿವಲಿಂಗಗಳು, ಕೆರೆಯ ಏರಿಯ ಬದಿಯಲ್ಲಿನ ಸೂರ್ಯ(ಶ್ರವಣಪ್ಪನ) ಶಿಲ್ಪವು ಇನ್ನು ಈ ಪರಿಸರದಲ್ಲಿನ ದೇವಾಲಯಗಳು ಮತ್ತು ಶಿಲ್ಪಗಳು ನಾಶಗೊಂಡಿದ್ದು ಅಳಿವಿನ ಅಂಚಿನಲ್ಲಿವೆ. ಇವುಗಳ ರಕ್ಷಣೆ ಬಗ್ಗೆ ಹೆಚ್ಚಿನ ಆದ್ಯತೆ ನೀಡುವುದು ಅವಶ್ಯಕವಾಗಿದೆ. ಈ ಪ್ರದೇಶದಲ್ಲಿ ದೊರೆಯುವಂತಹ ಶಿಲ್ಪಗಳು ಧಾರ್ಮಿಕ ಮತ್ತು ಲೌಕಿಕ ಸ್ಮಾರಕ ಶಿಲ್ಪಗಳನ್ನು ಒಳಗೊಂಡಿವೆ. ಈ ಪರಿಸರದಲ್ಲಿ ಕೆಲ ಧರ್ಮಗಳು ಬೆಳೆದು ಬಂದು ಆಯಾ ಧರ್ಮಕ್ಕೆ ಸಂಬಂದಪಟ್ಟ ದೇವಾಲಯ ಮೂರ್ತಿಶಿಲ್ಪಗಳು ನಿರ್ಮಾಣವಾಗಿರುವುದನ್ನು ಕಾಣಬಹುದಾಗಿದೆ. ಪ್ರಸ್ತುತ ಪ್ರದೇಶದಲ್ಲಿ ಅನೇಕ ಗಡಿ ರಕ್ಷಣೆ, ಕಳ್ಳಕಾಕರ ರಕ್ಷಣೆ, ಗೋವುಗಳ ರಕ್ಷಣೆ ಇನ್ನು ಹಲವಾರು ರೂಪಗಳಲ್ಲಿ ವೀರರು ಹೋರಾಟ ಮಾಡಿ ಮಡಿದ ನೆನಪಿಗಾಗಿ ನಿರ್ಮಿಸಿದ ವೀರಮಾಸ್ತಿಕಲ್ಲುಗಳನ್ನು ನೋಡಬಹುದು. ಕೆಲವು ಇತಿಹಾಸಕ್ಕೆ ಪೂರಕವಾದ ಮತ್ತು ಆತ್ಮರಕ್ಷಣೆ ಮತ್ತು ಪ್ರಾಣಿಗಳ ಕ್ರೂರಜಂತುಗಳ ದಾಳಿಯಿಂದ ರಕ್ಷಣೆಗೋಸ್ಕರ ನಿರ್ಮಿಸಿಕೊಂಡ ಬೃಹತ್ ಕೋಟೆಗಳು, ಈ ಒಂದು ಅಧ್ಯಯನವು ಸಹ ಆಧಾರವಾಗಿವೆ ಬೃಹತ್ ಕೊಟೆಗಳು ಎಂದರೆ ವೇಣುಕಲ್ಲುಗುಡ್ಡದ ಕೋಟೆ, ಕಣಜನಹಳ್ಳಿಕೋಟೆ ಇವುಗಳು

ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿದ್ದವುಗಳಾಗಿವೆ. ಕೆಲವು ಕೋಟೆಗಳು ಬೇತೂರು, ಕಂದೀಕೆರೆ ಪರುಶುರಾಮದೇವರಕೋಟೆ, ಶಿಡ್ಲಯ್ಯನ ಕೋಟೆ, ಹರ್ತಿಕೋಟೆ ನಶಿಸಿಹೊಗಿ ಕೆಲವು ಅವಶೇಷಗಳು ಮತ್ತು ಕುರುಹುಗಳು ಮಾತ್ರ ದೊರೆತಿದ್ದು ಇತಿಹಾಸ ರಚನೆಗೆ ಸಹಾಯಕವಾಗಿವೆ.

ಒಟ್ಟಾರೆಯಾಗಿ ಮೂಲ ಆಕರಗಳಾದ ಶಾಸನಗಳ ಅವಶೇಷಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಪ್ರಾಗಿತಿಹಾಸ ಕಾಲದಿಂದ ರಾಜಮನೆತನಗಳು, ಸ್ಥಳಪುರಾಣ, ಸ್ಥಳನಾಮಗಳು ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಾರ್ಯಗಳ ಬಗ್ಗೆ, ದೇವಾಲಯ, ಮೂರ್ತಿಶಿಲ್ಪಗಳ ನಿರ್ಮಾಣದ ಮತ್ತು ಇವುಗಳ ಪ್ರಭಾವ, ಹಲವು ವೀರರ ಸ್ಮಾರಕಗಳು, ರಕ್ಷಣಾಸಂಭಂದಿತ ಕೋಟೆಗಳನ್ನು ಈ ಅಧ್ಯಯನಕ್ಕೆ ಒಳಪಡಿಸಿಕೊಂಡು ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ. ಈ ಪ್ರದೇಶದ ಸುತ್ತಮುತ್ತಲಿನಲ್ಲಿ ಹಲವು ಅಧ್ಯಯನಗಳು ನಡೆದರೂ ಹೆಚ್ಚಿನದಾಗಿ ಸಮಗ್ರತೆಯನ್ನು ಪಡೆದಿರುವುದು ಕಡಿಮೆ ಎಂದು ಹೇಳಬಹುದು. ಆದುದರಿಂದಾಗಿ ಸಾಧ್ಯವಾದಷ್ಟುಮಟ್ಟಿಗೆ ಪ್ರತ್ಯೇಕವಾಗಿ "ಧರ್ಮಪುರ ಪರಿಸರದ ಸಾಂಸ್ಕೃತಿಕ ಆಧ್ಯಯನ" ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನ ಕೈಗೊಂಡು ಸ್ವತಹ ಕ್ಷೇತ್ರಕಾರ್ಯದ ಮೂಲಕವಾಗಿ ಹಿಂದೆ ಈ ಪ್ರದೇಶದ ಬಗ್ಗೆ ನಡೆದಿರುವ ಅಧ್ಯಯನಗಳ ಗ್ರಂಥಗಳನ್ನು ಬಳಸಿಕೊಂಡು ಇಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚರಿತ್ರೆಯನ್ನು ಒಂದೆಡೆ ತಿಳಿಸಲು ಪ್ರಯತ್ನಿಸಲಾಗಿದೆ.

* * *

## ಪಾರಿಭಾಷಿಕ ಪದಗಳು

ಅಧಿಷ್ಠಾನ : ಪಟ್ಟಿಕೆಗಳನ್ನು ಒಳಗೊಂಡ ದೇವಾಲಯದ ತಳಭಾಗ
ಅಂಕಣ : ನಾಲ್ಕು ಮಧ್ಯದ ಭಾಗ
ಅಂತರಾಳ : ಗರ್ಭಗೃಹ ಹಾಗೂ ನವರಂಗದ ಮಧ್ಯದಲ್ಲಿರುವ ಕೋಣೆ
ಅಷ್ಟದಿಕ್ಪಾಲಕರು : ಎಂಟು ದಿಕ್ಕುಗಳದೇವತೆಗಳು ಒಡೆಯರು, ಇಂದ್ರ(ಪೂರ್ವ), ವರುಣ(ಪಶ್ಚಿಮ), ಕುಬೇರ(ಉತ್ತರ), ಯಮ(ದಕ್ಷಿಣ), ವಾಯು(ವಾಯುವ್ಯ), ಅಗ್ನಿ(ಆಗ್ನೇಯ), ನಿಋತ(ನೈರುತ್ಯ), ಈಶಾನ(ಈಶಾನ)
ಅಷ್ಟಶಾಖಾ : ದ್ವಾರಬಂಧದಲ್ಲಿ ಕಂಡುಬರುವ ಎಂಟು ಶಾಖೆಗಳು
ಬಾಹ್ಯ ಭಿತ್ತಿ : ಹೊರಗೋಡೆ
ಭಿತ್ತಿ : ಗೋಡೆ
ದೇವಕೋಷ್ಠ : ದೇವತೆಯನ್ನು ಕೂಡಿಸಲು ಒಳ ಅಥವಾ ಹೊರಗೋಡೆಯಲ್ಲಿ ಮಾಡಿರುವ ಗೂಡು
ದ್ವಾರ : ಪ್ರವೇಶ ಬಾಗಿಲು
ದ್ವಾರ ಪಾಲಕ : ಪ್ರವೇಶದ್ವಾರದಲ್ಲಿ ದ್ವಾರಕಾಯುವ
ದ್ವಿತಲ : ಎರಡು ಹಂತ
ಏಕಶಾಖ : ಒಂದು ಶಾಖೆ
ಗಜಲಕ್ಷ್ಮಿ : ಲಲಾಟ ಪಟ್ಟಿಕೆಯಲ್ಲಿ ತೋರಿಸಾಗಿರುತ್ತದೆ, ಎರಡು ಗಜಗಳು ಲಕ್ಷ್ಮಿಗೆ ಅಭಿಷೇಕ ಮಾಡುತ್ತಿರುತ್ತವೆ.
ಗಳ : ಅಧಿಷ್ಠಾನದಲ್ಲಿ ಒಳಚಾಚಿರುವ ಭಾಗ, ಕಂಠ
ಗರ್ಭಗೃಹ : ದೇವಾಲಯದಲ್ಲಿ ಮುಖ್ಯದೇವರಿರುವ ಸ್ಥಳ
ಗೋಪುರ : ಪ್ರವೇಶದ್ವಾರದ ಮೇಲಿರುವ ವಿಮಾನ
ಹಾರ : ಭಿತ್ತಿಯ ಮೇಲಿರುವ ಭಾಗ, ಇದರಲ್ಲಿ ಶಾಲ, ಕೂಟ,

ಪಂಜರಗಳಿರುತ್ತವೆ.

| | | |
|---|---|---|
| ಜಗತಿ | : | ಅದಿಷ್ಠಾನದಲ್ಲಿ ಬರುವ ಕೆಳಗಿನ ಭಾಗ, ದೇವಾಲಯಕ್ಕೆ ಆಧಾರವಾಗಿ ನಿರ್ಮಿಸಲಾಗಿರುವ ಕಟ್ಟೆ |
| ಕಕ್ಷಾಸನ | : | ಸಭಾಮಂಟಪ ಅಥವಾ ಮುಖಮಂಟಪಗಳಲ್ಲಿ ಕುಳಿತುಕೊಳ್ಳಲು ನಿರ್ಮಿಸಿರುವ ಆಸನ ಪಟ್ಟಿ |
| ಕಳಶ | : | ಸ್ತೂಪಿಯ ಮೇಲ್ಭಾಗದಲ್ಲಿರುವ ಭಾಗ |
| ಕಂಠ | : | ಅಧಿಷ್ಠಾನದ ಎರೆಡು ದಿಂಡುಗಳ ಮಧ್ಯೆ ಒಳಚಾಚಿರುವ ಪಟ್ಟಿಕೆ |
| ಕಪೋತ | : | ಅಧಿಷ್ಠಾನದ ಪಟ್ಟಿಕೆಗಳಲ್ಲಿ ಕಾಣುವುದು, ಖಂಠ, ಗಳಗಳ ಮಧ್ಯ ಇರುವ ಮುಂಚಾಚು ಪಟ್ಟಿಕೆ, |
| ಲಲಾಟ | : | ದ್ವಾರಬಂಧದ ಮೇಲಿರುವ ಮಧ್ಯದ ಸ್ಥಳ |
| ಮುಖಮಂಟಪ | : | ಮುಂಭಾಗದ ಮಂಟಪ, ಪ್ರವೇಶ ಮಂಟಪ |
| ನಂದಿ | : | ಶಿವನ ವಾಹನ |
| ನಂದಿಮಂಟಪ | : | ನಂದಿಗಾಗಿ ಸ್ಥಾಪಿಸಿರುವ ಮಂಟಪ |
| ನವರಂಗ | : | ಒಂಭತ್ತರ ಅಂಕಣಗಳಿಂದ ಕೂಡಿರುವ ಭಾಗ |
| ಪದ್ಮ | : | ಕಮಲ, ಪದ್ಮ ಅಲಂಕಾರ |
| ಪೀಠ | : | ಆಧಾರ, ತಳ |
| ಪ್ರದಕ್ಷಿಣಾಪಥ | : | ದೇವರಿಗೆ ಪ್ರದಕ್ಷಿಣೆ ಹಾಕಲು ಇರುವ ಸ್ಥಳ |
| ಪ್ರಕಾರ | : | ದೇವಾಲಯವನ್ನು ಸುತ್ತುವರಿದಿರುವ ಗೋಡೆ |
| ಪ್ರಸ್ತರ | : | ಭಿತ್ತಿ ಹಾಗೂ ನಂತರ ಹಂತದವರೆಗಿನ ಭಾಗ |
| ಪ್ರತಿ | : | ಅಧಿಷ್ಠಾನದ ಮೇಲಿನ ಪಟ್ಟಿ |
| ರಂಗಮಂಟಪ | : | ಅರ್ದ ತೆರೆದ ವಿಶಾಲ ಮಂಟಪ |
| ಶಾಲಾ | : | ಆಯತಾಕಾರದ ಶಿಖರ |
| ಸಪ್ತಮಾತೃಕೆ | : | ಏಳು ಜನ ಮಾತೃದೇವತೆಯರು |
| ಶಿಖರ | : | ದೇವಾಲಯದ ಏರು ವಿನ್ಯಾಸ |
| ಶುಕನಾಶ | : | ಗರ್ಭಗೃಹದ ಮೇಲಿನ ಶಿಖರಕ್ಕೆ ಹೊಂದಿಕೊಂಡಿರುವ ಮುಂಭಾಗ |
| ತಲ | : | ಹಂತ |
| ತ್ರಿಪಟ್ಟ | : | ಮೂರು ಮುಖವುಳ್ಳದ್ದು |
| ಉಪಾನ | : | ಅಧಿಷ್ಠಾನದ ಕೆಳಗಿನ ಭಾಗ |

## ಗ್ರಂಥಋಣ


೦೧. ಅಪರ್ಣಾ ಕೂ.ಸ., ೧೯೯೯, *ದೇವಾಲಯ ವಾಸ್ತುಶಿಲ್ಪ ಪರಿಚಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೨. ಅಣ್ಣಿಗೇರಿ ಎ ಎಂ., ೧೯೬೧, *ಕರ್ನಾಟಕದ ಸಾಂಸ್ಕೃತಿಕ ಸ್ಥಳಗಳು*, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೩. ಎಚ್ಚಸ್ಕೆ (ಸಂ), ೧೯೮೫, *ಅವಲೋಕನ*, ವಿಶ್ವಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೦೪. ಕಲಬುರ್ಗಿ ಎಂ. ಎಂ., ೧೯೯೪, *ಕರ್ನಾಟಕದ ಕೃಷಿಯತ್ತುಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೫. ಕಪಟರಾಳ ಕೃಷ್ಣರಾವ್, ೧೯೭೦, *ಕರ್ನಾಟಕ ಸಂಸ್ಕೃತಿ ಸಂಶೋಧನೆ*, ಉಷಾ ಸಾಹಿತ್ಯ ಮಾಲೆ, ಮೈಸೂರು.

೦೬. ಕಲಬುರ್ಗಿ ಎಂ. ಎಂ., ೧೯೮೦, *ಸಮಾದಿ ಬಲಿದಾನ ವೀರಮರಣ ಸ್ಮಾರಕಗಳು*, ಐ,ಬಿ.ಎಚ್, ಪ್ರಕಾಶನ, ಬೆಂಗಳೂರು.

೦೭. ಕಡಪಟ್ಟಿ ಎಂ. ಎನ್., ೨೦೦೫, *ಪ್ರಾಚೀನ ಕರ್ನಾಟದಲ್ಲಿ ಶೈವಧರ್ಮ* (ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ), ಧಾರವಾಡ.

೦೮. ಕೃಷ್ಣ ಎಂ. ಎಚ್., ೧೯೫೨, *ಕರ್ನಾಟದ ಪೂರ್ವಚರಿತ್ರೆ*, ಸಾದನಾ ಮುದ್ರಣಾಲಯ, ಧಾರವಾಡ.

೦೯. ಕೃಷ್ಣರಾವ್ ಎಂ. ವಿ., ೧೯೭೦, *ಕರ್ನಾಟಕದ ಇತಿಹಾಸ ದರ್ಶನ*, ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು.

೧೦. ಗಂಡುಗಲಿ ಟಿ. ಎನ್., ೧೯೯೫, *ನೊಡಬನ್ನಿ ಚಿತ್ರದುರ್ಗ*, ಮದಕರಿ ಪ್ರಕಾಶನ, ಚಿತ್ರದುರ್ಗ.

೧೧. ಗಿರಿಜಾ ಟಿ., ೨೦೦೧, *ಚಿತ್ರದುರ್ಗ ಜಿಲ್ಲಾ ದರ್ಶಿನಿ*, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೧೨. ಗೋಪಾಲ್ ಆರ್, ೨೦೦೫, *ಚಿತ್ರದುರ್ಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ*, ಪ್ರಾಚ್ಯ ವಸ್ತು ಸಂಗ್ರಹಾಲಗಳ ನಿರ್ದೇಶನಾಲಯ, ಮೈಸೂರು.

೧೩. ಗೋಪಾಲ್ ಬಿ.ಆರ್., ೧೯೮೬, *ಕರ್ನಾಟಕ ಇತಿಹಾಸ*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೧೪. ಗೋಪಾಲ ಬಾ. ರಾ., ೧೯೮೭, *ಕರ್ನಾಟಕದಲ್ಲಿ ನವಶಿಲಾಯುಗ ಉಪನ್ಯಾಸ ಗ್ರಂಥಮಾಲೆ-೧೨೩*, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೫. ಚಂದ್ರಶೇಖರಯ್ಯ ಬಿ. ಎಂ., ೨೦೦೫, *ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ*, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೧೬. ಚಿದಾನಂದಮೂರ್ತಿ ಎಂ., ೧೯೯೭, *ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು*, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೭. ಚಿದಾನಂದಮೂರ್ತಿ ಎಂ., ೧೯೭೯, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ಚೆನ್ನಕ್ಕ ಪಾವಟೆ, ೧೯೯೫, *ಮಾಸ್ತಿಕಲ್ಲು*, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯. ಜೋಶಿ ಪಿ. ಬಿ., ೧೯೮೮, *ಪ್ರಾಚೀನ ಭಾರತದ ಇತಿಹಾಸ*, ವಿಧ್ಯಾನಿಧಿ ಪ್ರಕಾಶನ, ಗದಗ.

೨೦. ತಿಪ್ಪೇಸ್ವಾಮಿ ಹೆಚ್., ೧೯೯೭, *ಕರ್ನಾಟಕ ಸಂಸ್ಕೃತಿ ಸಮೀಕ್ಷೆ*, ಡಿ.ವಿ.ಕೆ. ಮೂರ್ತಿ(ಪ್ರಕಾಶಕರು), ಮೈಸೂರು.

೨೧. ತಿಪ್ಪೇಸ್ವಾಮಿ ಎಸ್., ೧೯೯೯, *ರಕ್ಷಣಾ ವಾಸ್ತು ಶಿಲ್ಪ :ಚಿತ್ರದುರ್ಗ ಜಿಲ್ಲೆ* (ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂದ) ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. ದೇಸಾಯಿ ಪಿ. ಬಿ., ೧೯೬೧, *ಕನ್ನಡ ನಾಡಿನ ಶಾಸನಗಳು*, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೩. ನರಸಿಂಹಮೂರ್ತಿ ಎ. ವಿ., ೧೯೭೯, *ಕರ್ನಾಟಕದಲ್ಲಿ ಪುರಾತತ್ವ ಶೋಧನೆ*, ಬೆಂಗಳೂರು.

೨೪. ಪರಮಶಿವಮೂರ್ತಿ ಡಿ. ವಿ., ೧೯೯೯, ಕನ್ನಡ ಶಾಸನಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫. ಪುಟ್ಟಣ್ಣ ಎಂ. ಎಸ್., ೧೯೨೪, *ಚಿತ್ರದುರ್ಗದ ಪಾಳೆಯಗಾರರು*, ಬೆಂಗಳೂರು.

೨೬. ಪರಮಶಿವಮೂರ್ತಿ ಡಿ ವಿ.,(ಸಂ) ೧೯೯೯, *ಪ್ರೌಢದೇವರಾಯನ ಶಾಸನಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೨೭. ಪಾಟೀಲ್ ಸಿ. ಎಸ್., ೨೦೦೦, *ಕರ್ನಾಟಕದ ಕೋಟೆಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೨೮. ಪ್ರಭಾಕರ್ ಎಂ. ಎನ್., ೨೦೦೦, *ದೇವಾಲಯ ವಾಸ್ತು ಚಂದ್ರಿಕೆ*, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಬಸವರಾಜು ಕೆ. ಆರ್.,(ಸಂ) ೧೯೭೬), *ನೊಳಂಬ ಇತಿಹಾಸ ದರ್ಶನ.*

೩೦. ಬಸವರಾಜ ಎನ್. ಆರ್., ೨೦೦೪, *ಕರ್ನಾಟಕದ ಇತಿಹಾಸ ಸಂಸ್ಕೃತಿ*, ಸೋಮೇಶ್ವರ ಪ್ರಕಾಶನ, ಧಾರವಾಡ.

೩೧. ಬೆಟಗೇರಿಕೃಷ್ಣಶರ್ಮ, ೧೯೬೩, *ಕರ್ನಾಟದ ಜನಜೀವನ*, ಜಯಂತಿ ಕಾರ್ಯಾಲಯ, ಧಾರವಾಡ.

೩೨. ಮಹದೇವ ಸಿ., ೨೦೦೧ *ಕರ್ನಾಟಕದ ಪುರಾತತ್ವ ಶೋಧ*, ಶ್ರೀಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ.

೩೩. ಮಂಜುನಾಥ ಬೇವಿನಕಟ್ಟಿ, ೨೦೦೩, *ಕನ್ನಡ ಜನಪದ ನಂಬಿಕೆಗಳು*, ಜ್ಯೋತಿ ಪ್ರಕಾಶನ, ಮೈಸೂರು.

೩೪. ಮುಕುಂದರೆಡ್ಡಿ ಮಾ. ನ., ೧೯೮೭, *ಹಿರಿಯೂರು ತಾಲೂಕು ದರ್ಶನ*, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೩೫. ಮಲ್ಲೇಪುರಂ ಜಿ. ವೆಂಕಟೇಶ, (ಸಂ), ೧೯೯೯, *ಶಂಭಾಕೃತಿ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೬. ಮಂಜುನಾಥ ಎಂ. ಜಿ., ೨೦೦೯, *ಕರ್ನಾಟಕದ ಸಾಂಸ್ಕೃತಿಕ ಇತಿಹಾಸ*, ಸುಮುಖ ಪ್ರಕಾಶನ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಬೆಂಗಳೂರು.

೩೭. ರಮೇಶನಾಯಕ., (ಸಂ) ೨೦೦೭, *ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಮರುಚಿಂತನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೩೮. ರಾಜಶೇಖರ ಎಸ್., ೧೯೭೮, *ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ*, ಸುಜಾತ ಪಬ್ಲಿಕೇಷನ್ಸ್, ಧಾರವಾಡ.

೩೯. ರಾಜಶೇಖರಪ್ಪ ಬಿ., ೨೦೦೧, *ಇತಿಹಾಸ ಕಥನ*, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ಸ್, ರಾಜಾಜಿನಗರ, ಬೆಂಗಳೂರು.

೪೦. ರಾಮದಾಸರೆಡ್ಡಿ ಎಸ್. ಜಿ., ೨೦೦೯, *ಚಿತ್ರದುರ್ಗ ಜಿಲ್ಲಾ ಪ್ರಾಕ್ಚಾರಿತ್ರಿಕ ಅಧ್ಯಯನ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೧. ರಾಮಚಂದ್ರರಾವ್ ಎಸ್. ಕೆ., ೧೯೭೫, *ಮೂರ್ತಿಶಿಲ್ಪ: ನೆಲೆ ಹಿನ್ನೆಲೆ*, ಪ್ರಸಾರಾಂಗ,

ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪೨. ರಾಜಶೇಖರಪ್ಪ ಬಿ., ೨೦೦೧, *ದುರ್ಗಶೋಧನ,* ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು,

೪೩. ರಾಮಚಂದ್ರರಾವ್ ಎಸ್. ಕೆ., ೧೯೭೮, *ಕರ್ನಾಟಕದ ಕಲೆಗಳು ಮತ್ತು ವಾಸ್ತು* ಸಂಪುಟ–೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೪. ರಾಮಚಂದ್ರರಾವ್ ಎಸ್. ಕೆ., ೧೯೭೫, *ಮೂರ್ತಿ ಶಿಲ್ಪ: ನೆಲೆ ಹಿನ್ನೆಲೆ,* ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪೫. ಲಕ್ಷ್ಮಣ್ ತೆಲಗಾವಿ, (ಸಂ)., ೨೦೦೫, *ಸ್ಥಳೀಯ ಚರಿತ್ರೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೪೬. ಲಕ್ಷ್ಮಣ್ ತೆಲಗಾವಿ, ೨೦೦೪, *ಮೌರ್ಯ ಮತ್ತು ಶಾತವಾಹನಯುಗ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೪೭. ಲಕ್ಷ್ಮಣ್ ತೆಲಗಾವಿ, ೧೯೮೭, *ಹರತಿಸಿರಿ,* ವಾಲ್ಮಿಕಿ ಸಾಹಿತ್ಯ ಸಂಪದ, ಹಿರಿಯೂರು.

೪೮. ವೆಂಕಟರಂಗೋಕಟ್ಟಿ, ೧೯೮೪, *ಮುಂಬೈ ಗ್ಯೆಜೆಟೀಯರ್,* ಕರ್ನಾಟಕದ ಭಾಗ, ಏಷಿಯನ್ ಎಜ್ಯುಕೇಷನ್ ಸರ್ವಿಸಸ್, ದೆಹಲಿ.

೪೯. ವಾಸುದೇವನ್ ಸಿ. ಎಸ್., ೨೦೦೧, *ಹಂಪಿ ಪರಿಸರದ ಕೆರೆಗಳು,* ಕನ್ನಡ ವಿಶ್ವವಿದ್ಯಾಲಯ, ಹಂಪಿ,

೫೦. ವಾಸುದೇವ ಬಡಿಗೇರ, (ಸಂ), ೨೦೦೧, *ಹಾನಗಲ್ಲು,* ಕನ್ನಡ ವಿಶ್ವವಿದ್ಯಾಲಯ, ಹಂಪಿ,

೫೧. ವಿಶ್ವೇಶ್ವರಪ್ಪ., ೧೯೭೫, *ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು,* ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು.

೫೨. ಶೇಷಶಾಸ್ತ್ರಿ ಆರ್., ೧೯೮೨, *ಕರ್ನಾಟಕದ ವೀರಗಲ್ಲುಗಳು,* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೩. ಶಿವಕುಮಾರಸ್ವಾಮಿ, ೧೯೭೫, *ಭಾರತೀಯ ಶಿಲ್ಪ,* ಬೆಂಗಳೂರು.

೫೪. ಶಿವಕುಮಾರ ಸ್ವಾಮಿ ಸಿ. ಎಸ್., ೧೯೮೮, *ಕರ್ನಾಟಕದ ಜಾತ್ರೆಗಳು,* ಮೈಸೂರು ವಿಶ್ವವಿದ್ಯಾನಿಲಯ, ಪುನರ್ವಸು ಪ್ರಕಾಶನ, ಬೆಂಗಳೂರು.

೫೫. ಶಿವತಾರಕ್ ಕೆ. ಬಿ., ೨೦೦೧, *ಕರ್ನಾಟಕದ ಪುರಾತ್ವ ನೆಲೆಗಳು,* ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೫೬. ಶ್ರೀಧರಮೂರ್ತಿ ಮ., ೧೯೮೧, *ದೇವತೆಗಳು ಮತ್ತು ಹಬ್ಬಗಳು,* ಪುನರ್ವಸು ಪ್ರಕಾಶನ, ಬೆಂಗಳೂರು.

೫೭. ಸುಂದರ ಅ., (ಸಂ), ೧೯೯೭, *ಕರ್ನಾಟಕದ ಚರಿತ್ರೆ* ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೮. ಸುರೇಶ ಬಿ., ೨೦೦೯, ***ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ದೇವಾಲಯಗಳು,*** ಸಂಶೋಧನಾ ಪ್ರಕಾಶನ, ಚಳ್ಳಕೆರೆ.

೫೯. ಸೋಮಶೇಖರ್. ಎಸ್ ವೈ., ೨೦೦೯, ***ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ*** ಸಂಚಿಕೆ ಪ್ರಕಾಶನ, ಚಿತ್ರದುರ್ಗ.

೬೦. ಸುಜ್ಞಾನಮೂರ್ತಿ ಬಿ.,(ಅನು) ಮೂಲ:ವೀರಭದ್ರಾಚಾರ್ಯಲು, ೧೯೯೭, ***ವಾಸ್ತುಶಾಸ್ತ್ರ ಪರಿಚಯ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೬೧. ಸೂರ್ಯನಾಥ ಕಾಮತ್., (ಸಂ), ೧೯೮೪, ***ಕರ್ನಾಟಕ ರಾಜ್ಯ ಗೆಜೆಟೀಯರ್,*** ಕರ್ನಾಟಕ ಸರ್ಕಾರ, ಬೆಂಗಳೂರು.

೬೨. ಸ್ವಾಮಿ ಜಿ. ಎಲ್., ೧೯೮೨, ***ಚಿತ್ರದುರ್ಗ ಡಿಸ್ಟ್ರಿಕ್ಟ್ ಕೈಪಿಡಿ,*** ಜಿಲ್ಲಾ ಆಡಳಿತ ಚಿತ್ರದುರ್ಗ, ಪ್ರಸನ್ನ ಪ್ರಕಾಶನ, ಚಿತ್ರದುರ್ಗ.

೬೩. ಹೂಗಾರ ಬಿ. ಪಿ., ೨೦೦೬, ***ಪ್ರಾಚೀನ ಭಾರತದ ಇತಿಹಾಸ,*** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ, ಗುಲ್ಬರ್ಗಾ.

೬೪. ಜ್ಞಾನಾನಂದ ಜಿ., ೨೦೦೧, ***ಶಿಲ್ಪಾದರ್ಶ,*** ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೬೫. ಜ್ಞಾನಾನಂದ ಜಿ., ೨೦೦೨, ***ಶಿಲ್ಪಾದರ್ಶ,*** ಸಂಪುಟ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೬೬. ಜ್ಞಾನಾನಂದ ಜಿ., ೨೦೦೬, ***ಶ್ರೀ ಕಶ್ಯಪ ಶಿಲ್ಪಶಾಸ್ತ್ರಂ ದ್ವಿತೀಯ ಸಂಪುಟ,*** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಜೆ.ಸಿ.ಆರ್, ರಸ್ತೆ, ಬೆಂಗಳೂರು.

ಆಂಗ್ಲ ಗ್ರಂಥಗಳು

1. Acharya P.K ., 1927, ***Indian Architecture***, According to Shilpa Shastra, Alahabad.

2. Brain Fergusan R.P., 1984, ***Warfare, culture and Environment Orlando***, Academic press.

3. Desai P.B., 1970, ***History of Karnataka***, Dharwada

4. Datta G.T ., 1929, ***Art of war in Ancient India***, London.

5. Gopal B.R., 1981, ***The Chalukkyas of Kalyana and Kalachuris,*** **Karnataka** University, Dhawada .
6. Krishnamurthy M.S., 1981, ***The Nolambas*** ,The University of Mysore,Mysore
7. Kamalapur J.N., 1964**, *The Deccan Forts*,** Bombay
8. Mahalingam T.V., 1958, ***The History of South India .***
9. Rangachari K., ***Town planning and House Bulding in Ancient India.***
10. Sharma S.R., 1940, ***Jainism Karnataka culture, Karnataka Historical Research,*** Dharwad.
11. Prasannakumar Acharya, 1994, ***Encyclopedia of Hindu Architecture,*** vol,1-2, Casmo Publication, New Delhi

**ಶಾಸನ ಸಂಪುಟಗಳು**

೧. Mysore Archaeological Reports
೨. Epigraphia carnatica,
೩. Karnataka Inscriptions
೪. Annual Reports on South Indian Epigraphy
೫. Chitradurga census Reports
೬. Karnataka State Gazetter
೭. Chitradurga Disstrict Gazetter

**ನಿಯತಕಾಲಿಕೆಗಳು**

೧. ಇತಿಹಾಸ ದರ್ಶನ ಸಂಪುಟಗಳು
೨. ಚರಿತ್ರೆ ಅಧ್ಯಯನ, ಪ್ರಸಾರಾಂಗ, ಹಂಪಿ, ಕನ್ನಡ ವಿಶ್ವವಿದ್ಯಾಲಯ
೩. ವಿಶಾಲ ಚಿತ್ರದುರ್ಗ, ಚಿತ್ರದುರ್ಗ, ವುಶಾಲ ಚಿತ್ರದುರ್ಗ ಸಂಶೋಧನಾ ಮಂಡಳಿ
೪. ಸತ್ಯಶುದ್ಧ ಕಾಯಕ, ಚಿತ್ರದುರ್ಗ, ಮುರುಘರಾಜೇಂದ್ರ ಮಠ
೫. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು
೬. ಸಾಧನೆ, ಬೆಂಗಳೂರು, ಬೆಂಗಳೂರು ವಿಶ್ವವಿದ್ಯಾಲಯ

* * *

## ವಕ್ತಾರರುಗಳು

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ |
|---|---|---|---|---|
| ೧. | ವೀರಣ್ಣ | ೪೫ | ಪ್ರಾಂಶುಪಾಲರು | ಅರಳೀಕೆರೆ |
| ೨. | ಶಿವಣ್ಣ | ೫೦ | ವ್ಯವಸಾಯ | ಹರಿಯಬ್ಬೆ |
| ೩. | ಚಂದ್ರಣ್ಣ | ೪೬ | ವ್ಯವಸಾಯ | ಹಲಗಲದ್ದಿ |
| ೪. | ಗೋಪಾಲಪ್ಪ | ೪೫ | ವ್ಯವಸಾಯ | ಶ್ರವಣಗೆರೆ |
| ೫. | ಸಣ್ಣೀರಪ್ಪ | ೪೦ | ವ್ಯವಸಾಯ | ಮುಂಗುಸುವಳ್ಳಿ |
| ೬. | ದಯಾನಂದ | ೩೫ | ವ್ಯವಸಾಯ | ಬಿದರಕೆರೆ |
| ೭. | ಕೋನಪ್ಪ | ೫೦ | ಪೂಜಾರಿಕೆ | ಬಿದರಕೆರೆ |
| ೮. | ರಂಗೇಗೌಡರು | ೫೨ | ವ್ಯವಸಾಯ | ಧರ್ಮಪುರ |
| ೯. | ಚಂದ್ರಯ್ಯನವರು | ೫೦ | ಅರ್ಚಕರು | ವೇಣುಕಲ್ಲುಗುಡ್ಡ |
| ೧೦. | ಮಂಜುನಾಥ | ೩೮ | ವ್ಯವಸಾಯ | ಹರಿಯಬ್ಬೆ |
| ೧೧. | ಪ್ರಸನ್ನಾಚಾರಿ | ೫೦ | ಅರ್ಚಕರು | ಹರಿಯಬ್ಬೆ |
| ೧೨. | ರಾದಾಕೃಷ್ಣ | ೩೦ | ವ್ಯವಸಾಯ | ಬೇತೂರು |
| ೧೩. | ರಾಮಣ್ಣ | ೩೫ | ವ್ಯವಸಾಯ | ಶ್ರವಣಗೆರೆ |
| ೧೪. | ವೀರಣ್ಣ | ೩೮ | ವ್ಯವಸಾಯ | ಶ್ರವಣಗೆರೆ |
| ೧೫. | ನರೇಂದ್ರಪ್ಪ | ೫೦ | ವ್ಯವಸಾಯ | ಧರ್ಮಪುರ |
| ೧೬. | ಶಿವಣ್ಣ | ೪೦ | ವ್ಯವಸಾಯ | ಧರ್ಮಪುರ |
| ೧೭. | ಹನುಮಂತರಾಯಪ್ಪ | ೪೮ | ವವ್ಯಸಾಯ | ಅಂಬಲಗೆರೆ |
| ೧೮. | ಶಿವಮೂರ್ತಿ | ೩೦ | ವವ್ಯಸಾಯ | ಶ್ರವಣಗೆರೆ |
| ೧೯. | ಶ್ರೀನಿವಾಸ | ೩೫ | ಉಪನ್ಯಾಸಕರು | ಧರ್ಮಪುರ |

# ಕರ್ನಾಟಕ ರಾಜ್ಯ ನಕಾಶೆ



# ಚಿತ್ರದುರ್ಗ ಜಿಲ್ಲಾ ನಕಾಶೆ



# ಹಿರಿಯೂರು ತಾಲ್ಲೂಕು ನಕಾಶೆ



# ಧರ್ಮಪುರ ಹೋಬಳಿ ನಕಾಶೆ




● ಕೋಟೆಗಳು

▲ ದೇವಾಲಯಗಳು

# ಛಾಯಾ ಚಿತ್ರಗಳು



ರಂಗನಾಥಸ್ವಾಮಿ ದೇವಾಲಯ ಅಂಬಲಗೆರೆ



ಉಯ್ಯಾಲೆ ಸ್ತಂಭ ಅಂಬಲಗೆರೆ



ಗರುಡ ಸ್ತಂಭ ಅಂಬಲಗೆರೆ



ರಂಗನಾಥಸ್ವಾಮಿ ದೇವಾಲಯ ಧರ್ಮಪುರ



ರಂಗನಾಥಸ್ವಾಮಿ ದೇವಾಲಯದ ನವರಂಗದ ಸ್ತಂಭ ಧರ್ಮಪುರ



ಆಂಜನೇಯ ದೇವಾಲಯದ ಸ್ತಂಭ ಬಿದರಕೆರೆ



ಧರ್ಮರಾಯನ ಗುಡಿ



ಭೀಮಲಿಂಗೇಶ್ವರ ದೇವಾಲಯ ಧರ್ಮಪುರ



ಭೀಮಲಿಂಗ ಧರ್ಮಪುರ



ಧರ್ಮರಾಯನ ಲಿಂಗ ಧರ್ಮಪುರ



ಭೀಮಲಿಂಗೇಶ್ವರ ಧೇವಾಲಯದ ನವರಂಗದ ಸ್ತಂಭ



ಬ್ರಹ್ಮದೇವರಗುಡಿ ಶಿಡ್ಲಯ್ಯನಕೋಟೆ



ಈಶ್ವರದೇವಾಲಯ ವೇಣುಕಲ್ಲುಗುಡ್ಡ



ಈಶ್ವರ ಲಿಂಗ ವೇಣುಕಲ್ಲುಗುಡ್ಡ



ರಂಗನಾಥಸ್ವಾಮಿ ದೇವಾಲಯ ಅಬ್ಬಿನಹೊಳೆ



ರಂಗನಾಥಸ್ವಾಮಿ ಗರ್ಭಗೃಹ ಅಬ್ಬಿನಹೊಳೆ



ಸಿದ್ದೇಶ್ವರ ದೇವಾಲಯ ಬಿದರಕೆರೆ



ರೇಣುಕಾಪರಮೇಶ್ವರ ದೇವಾಲಯ ಕೋಡಿಹಳ್ಳಿ



ನಕುಲದೇವಾಲಯದ ಲಿಂಗು ಧರ್ಮಪುರ.



ಸಹದೇವ ದೇವಾಲಯದ ಲಿಂಗು ಧರ್ಮಪುರ



ಲಿಂಗ ಮತ್ತು ನಂದಿ ಕಣಜನಹಳ್ಳಿ



ಕೇಶವ ಶಿಲ್ಪ (ಗರ್ಭಗೃಹ) ಧರ್ಮಪುರ



ವೀರಭದ್ರ ಶಿಲ್ಪ ಧರ್ಮಪುರ



ಕೇಶವ ಶಿಲ್ಪ (ಪ್ರವೇಶ ದ್ವಾರದ ಬಳಿ) ಧರ್ಮಪುರ



ಸೂರ್ಯ ಶಿಲ್ಪ (ಶ್ರವಣಪ್ಪ) ಧರ್ಮಪುರ



ಬೈರವ ಶಿಲ್ಪ ಅಂಬಲಗೆರೆ



ಏಕಾಕ್ಷ್ವರಿ ಶಿಲ್ಪ ಧರ್ಮಪುರ



ಕಾಳೀ ಶಿಲ್ಪ ಧರ್ಮಪುರ



ಜೈನಶಿಲ್ಪ ಶಾಸನ ಧರ್ಮಪುರ



ಸಪ್ತಮಾತೃಕೆಯರ ಶಿಲ್ಪಗಳು ಅಬ್ಬಿನಹೊಳೆ



ವೀರಗಲ್ಲು ಸಿದ್ಧಯ್ಯನಕೋಟೆ



ವೀರಸತಿಗಲ್ಲು ಧರ್ಮಪುರ



ವೀರಗಲ್ಲು ಧರ್ಮಪುರ



ವೀರಗಲ್ಲು ಕಣಜನಹಳ್ಳಿ



ವೀರಸತಿಗಲ್ಲುಗಳು ಧರ್ಮಪುರ



ವೀರಸತಿಗಲ್ಲುಗಳು ಕಂಡೇನಹಳ್ಳಿ



ಧಾನ್ಯ ಸಂಗ್ರಹಣೆಯ ಕಣಜ, ಕಣಜನಹಳ್ಳಿ



ಕೋಟೆ ವೇಣುಕಲ್ಲುಗುಡ್ಡ



ಕೋಟೆಗೆ ಏರುವ ಮೆಟ್ಟಿಲುಗಳು ವೇಣುಕಲ್ಲುಗುಡ್ಡ



ಬುರುಜು ವೇಣುಕಲ್ಲುಗುಡ್ಡ



ಕೋಟೆ ಪ್ರವೇಶದ್ವಾರ ಕಣಜನಹಳ್ಳಿ



ಬುರುಜು ಕಣಜನಹಳ್ಳಿ



ಮಣ್ಣಿನ ಕೋಟೆ ಬೇತೂರು